# 'ಭೈರಪ್ಪನವರ ಕಾದಂಬರಿಗಳಲ್ಲಿ ಸಂಸ್ಕೃತಿ'

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕ

ವಿ.ಬಿ. ರಡ್ಡೇರ

ಮಾರ್ಗದರ್ಶಕರು

ಡಾ|| ವಿಠಲರಾವ್ ಗಾಯಕ್ವಾಡ್

ಪ್ರವಾಚಕರು ಹಾಗೂ ಮುಖ್ಯಸ್ಥರು,

ಭಾಷಾಂತರ ಅಧ್ಯಯನ ವಿಭಾಗ.





ಭಾಷಾ ನಿಕಾಯ

ಭಾಷಾಂತರ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೦೪

# 'ಭೈರಪ್ಪನವರ ಕಾದಂಬರಿಗಳಲ್ಲಿ ಸಂಸ್ಕೃತಿ'

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕ

**ವಿ.ಬಿ.ರಡ್ಡೇರ**





ಮಾರ್ಗದರ್ಶಕರು

**ಡಾ|| ವಿಠಲರಾವ್ ಗಾಯಕ್ವಾಡ್**

ಪ್ರವಾಚಕರು ಹಾಗೂ ಮುಖ್ಯಸ್ಥರು,

ಭಾಷಾಂತರ ಅಧ್ಯಯನ ವಿಭಾಗ.





ಭಾಷಾ ನಿಕಾಯ

ಭಾಷಾಂತರ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೦೪

## ದೃಢೀಕರಣ ಪತ್ರ

ಶ್ರೀ ವಿ.ಬಿ.ರಡ್ಡೇರ ಇವರು '**ಭೈರಪ್ಪನವರ ಕಾದಂಬರಿಗಳಲ್ಲಿ ಸಂಸ್ಕೃತಿ**' ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ಭಾಷಾಂತರ ಅಧ್ಯಯನ ವಿಭಾಗಕ್ಕೆ ಪಿ.ಎಚ್.ಡಿ ಪದವಿಗಾಗಿ ಈ ಮಹಾಪ್ರಬಂಧವನ್ನು ಸಲ್ಲಿಸಲಾಗುತ್ತಿದೆ. ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : ೨೪.೦೪.೨೦೦೪

**ಡಾ. ವಿಠಲರಾವ್ ಗಾಯಕ್ವಾಡ್**
ಮುಖ್ಯಸ್ಥರು ಹಾಗೂ ಮಾರ್ಗದರ್ಶಕರು,
ಭಾಷಾಂತರ ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪ್ರಮಾಣ ಪತ್ರ

**'ಭೈರಪ್ಪನವರ ಕಾದಂಬರಿಗಳಲ್ಲಿ ಸಂಸ್ಕೃತಿ'** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಡಾ.ವಿಠಲರಾವ್ ಗಾಯಕವಾಡ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಪಿ.ಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಭಾಷಾಂತರ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಈ ಮಹಾಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : ೨೪.೦೪.೨೦೦೪

ವಿ.ಬಿ.ರಡ್ಡೇರ
ಸಂಶೋಧಕ
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪರಿವಿಡಿ

## ಅಧ್ಯಾಯ ೧

೧.೧ ಅಧ್ಯಯನದ ಉದ್ದೇಶ

೧.೨ ಅಧ್ಯಯನದ ವ್ಯಾಪ್ತಿ ಮತ್ತು ಮಹತ್ವ

೧.೩ ಅಧ್ಯಯನದ ಹಿಂದಿನ ನಿಲುವುಗಳು

# ಅಧ್ಯಯನದ ಉದ್ದೇಶ

ಹೊಸಗನ್ನಡ ಸಾಹಿತ್ಯದಲ್ಲಿ 'ಗದ್ಯ' ಸಾಹಿತ್ಯ 'ಪದ್ಯ'ಕ್ಕೆ ಸರಿಸಮಾನವಾಗಿ ಬೆಳೆದು ಬಂದಿತು, ಆಂಗ್ಲ ಸಾಹಿತ್ಯದ ಪ್ರಭಾವದಿಂದ ಕಥೆ, ಕಾದಂಬರಿ, ಪ್ರಬಂಧ ಮುಂತಾದ ಗದ್ಯ ಪ್ರಕಾರದ ಸಾಹಿತ್ಯಕ್ಕೆ ಸಾಹಿತಿಗಳು ವಿಶೇಷವಾದ ಒಲವನ್ನು ಆಸಕ್ತಿಯನ್ನು ತೋರಿದರು. ಮಾಸ್ತಿಯವರು ಸಣ್ಣಕಥೆಗಳು ಕನ್ನಡದಲ್ಲಿ ನೆಲೆಯೂರಲು ಕಾರಣೀಭೂತರಾದರು. ಎಂ. ಎಸ್.ಪುಟ್ಟಣ್ಣ, ಗಳಗನಾಥರು, ತ.ರಾ.ಸು, ಅ.ನ.ಕೃ. ಶಿವರಾಮ ಕಾರಂತ,ಕುವೆಂಪು, ಶಾಂತಿನಾಥ ದೇಸಾಯಿ, ವ್ಯಾಸರಾಯ ಬಲ್ಲಾಳ, ಯು. ಆರ್. ಅನಂತಮೂರ್ತಿ, ಲಂಕೇಶ ಮುಂತಾದವರು ಗದ್ಯಕ್ಕೆ ವಿಶೇಷ ಆಸಕ್ತಿಯನ್ನು ವ್ಯಕ್ತಪಡಿಸಿದರು. ಮಹಿಳಾ ಬರಹಗಾರ್ತಿಯರು ಈ ವಿಷಯದಲ್ಲಿ ಹಿಂದೆ ಬೀಳಲಿಲ್ಲ. ತ್ರಿವೇಣಿ, ಎಂ.ಕೆ. ಇಂದಿರಾ, ವಾಣಿ, ಸಾರಾಅಬೂಬಕ್ಕರ್ ಮುಂತಾದವರು 'ಗದ್ಯ'ವನ್ನೇ ಆಯ್ದುಕೊಂಡರು. ಈ ಎಲ್ಲ ಬರಹಗಾರರು ಆಧುನಿಕ ಕನ್ನಡ ಸಾಹಿತ್ಯದಲ್ಲಿ 'ಕಾದಂಬರಿ' ಪ್ರಕಾರಕ್ಕೆ ತಮ್ಮ ಆದರವನ್ನು ತೋರಿದರು, ಇಷ್ಟೇ ಅಲ್ಲದೇ ಸಮರ್ಥ ಕೃತಿಗಳನ್ನು ನೀಡಿದರು, ಕೃತಿಗಳ ಸಂಖ್ಯೆಯೂ ಅಷ್ಟೇ ಪ್ರಮಾಣದಲ್ಲಿ ಹೆಚ್ಚಾಯಿತು. ಅ.ನ.ಕೃ.ರಂಥವರು ಕಾದಂಬರಿ ಸಾರ್ವಭೌಮ ಎಂಬ ಬಿರುದನ್ನು ಪಡೆದುಕೊಂಡರು. ಕನ್ನಡ ಕಾದಂಬರಿಗಳಲ್ಲಿ ಅ.ನ.ಕೃ.ರವರ ಮಾರ್ಗ ಮತ್ತು ಶಿವರಾಮ ಕಾರಂತರ ಮಾರ್ಗ ಎನ್ನುವ ಎರಡು ಮಾರ್ಗಗಳು ಬೆಳೆದು ಬಂದವು. ಚಿತ್ತಾಲರು ಮತ್ತು ಭೈರಪ್ಪನವರು ಕಾರಂತರ ಮಾರ್ಗದಲ್ಲಿ ಬೆಳೆದು ಬಂದು ಕಾದಂಬರಿಕಾರರಾಗಿದ್ದಾರೆ. ಅ.ನ.ಕೃರವರು ಹೆಚ್ಚಿನ ಸಂಖ್ಯೆಯಲ್ಲಿ ಕಾದಂಬರಿಗಳನ್ನು ಬರೆದರು. ಕನ್ನಡದಲ್ಲಿ ಕಾದಂಬರಿಗಳನ್ನು ಪ್ರೀತಿಸುವ ಓದುಗರ ಒಂದು ವರ್ಗವನ್ನೆ ಅವರು ಸೃಷ್ಟಿಮಾಡಿದರು. ಭೈರಪ್ಪನವರು ಕಾರಂತರ ಮಾರ್ಗದಲ್ಲಿ ಕಾದಂಬರಿಗಳನ್ನು ರಚಿಸಿದರು. ಇಬ್ಬರಿಗೂ ವಸ್ತು ಮತ್ತು ತಂತ್ರದ ದೃಷ್ಟಿಯಿಂದ ವಿಶೇಷ ವ್ಯತ್ಯಾಸಗಳಿವೆ. ಕನ್ನಡ ಸಾಹಿತ್ಯದಲ್ಲಿ ಐತಿಹಾಸಿಕ, ಸಮಾಜಿಕ, ಕೌಟುಂಬಿಕ ಕಾದಂಬರಿಗಳು ಹೆಚ್ಚಿನ ಸಂಖ್ಯೆಯಲ್ಲಿ ರಚನೆಗೊಂಡವು. ಒಂದೊಂದು ಕಾದಂಬರಿಯು ಬದುಕಿನ ವಿವಿಧ ಮುಖಗಳ 'ಶೋಧನೆ' ಮಾಡುವ ಧೋರಣೆಯಿಂದ ರಚನೆಗೊಂಡದ್ದು ಪ್ರಮುಖವಾದ ಅಂಶವಾಗಿದೆ. ಈ ಎಲ್ಲ ವಿವರವನ್ನು ತಿಳಿದಾಗ ಹೊಸಗನ್ನಡ ಸಾಹಿತ್ಯದಲ್ಲಿ 'ಕಾದಂಬರಿ' ಸಾಹಿತ್ಯ ಪ್ರಕಾರ ಹುಲುಸಾಗಿ, ಅಷ್ಟೇ ಗಟ್ಟಿಯಾಗಿ ಬೆಳೆದು ಬಂದಿದೆ. ಇಂಥ ಹುಲುಸಾದ ಬೆಳೆಯಲ್ಲಿ

ಭೈರಪ್ಪನವರ ಕಾದಂಬರಿಗಳಿಗೆ ವಿಶೇಷ ಮನ್ನಣೆ ಇದೆ. ಕಾದಂಬರಿ ಸಾಹಿತ್ಯದಲ್ಲಿ ಅವರದು ಬಹು ಮುಖ್ಯವಾದ ಹೆಸರು. ಧರ್ಮಶ್ರೀಯಿಂದ ಹಿಡಿದು ಮಂದ್ರ ಕಾದಂಬರಿಯವರೆಗಿನ ಅವರ ಸಾಹಿತ್ಯ ಅಪಾರವಾದ ಶ್ರದ್ಧೆಯಿಂದ ರಚಿತವಾದುದು. ಕಾದಂಬರಿಯಿಂದ ಕಾದಂಬರಿಗೆ ಬೆಳೆದ ಭೈರಪ್ಪನವರ ನಡಿಗೆಯಲ್ಲಿ ಗುರುತಿಸಬಹುದಾದ ಮಹತ್ವದ ಹೆಜ್ಜೆಗಳಿವೆ. ಕಾರಂತರು ತಮ್ಮನ್ನು ಯಾವ ಪಂಥಗಳಿಗೂ ಒಗ್ಗಿಸಿಕೊಳ್ಳಲಿಲ್ಲ. ಒಂಟಿ ಸಲಗದಂತೆ ನಡೆದುಕೊಂಡು ಬಂದರು. ಆದರೆ ಎಲ್ಲ ಪಂಥಗಳ ಧೋರಣೆಯನ್ನು ಆಶಯಗಳನ್ನು ಕಾರಂತರಲ್ಲಿ ಕಾಣುತ್ತೇವೆ. ಆದರೆ ಈ ಮಾತು ಭೈರಪ್ಪನವರಿಗೆ ಅನ್ವಯಿಸುವುದಿಲ್ಲ. ಭೈರಪ್ಪನವರು ಯಾವ ಪಂಥಕ್ಕೂ ಒಗ್ಗಿಕೊಂಡಿಲ್ಲ ತಮ್ಮ ನಂಬಿಕೆಗಳಿಗನುಗುಣವಾಗಿ, ವಿಶಿಷ್ಟ ಉದ್ದೇಶಗಳಿಂದ ಕಾದಂಬರಿಗಳನ್ನು ರಚಿಸುತ್ತ ಸಾಗುತ್ತಿದ್ದಾರೆ. ಭೈರಪ್ಪನವರ ಕಾದಂಬರಿಗಳಲ್ಲಿ ಭಿನ್ನ ಸಂಸ್ಕೃತಿಗಳ ಮುಖಾಮುಖಿ ಇದೆ. ಸಂಸ್ಕೃತಿಗೆ ಸಂಬಂಧಪಟ್ಟ ವಿಷಯಗಳನ್ನು ಅವರು ಪ್ರಧಾನ ವಸ್ತುವನ್ನಾಗಿ ಆಯ್ಕೆಮಾಡಿಕೊಳ್ಳುತ್ತಾರೆ. ತಮ್ಮದೇ ಆದ ನಿಲುವಿನಿಂದ ಅವುಗಳನ್ನು ನಿಕಷಕ್ಕೆ ಒಡ್ಡುತ್ತಾರೆ. ಭೈರಪ್ಪನವರ ನಿಲುವುಗಳು ಕೆಲವರಿಗೆ ಅಪ್ಯಾಯಮಾನವೆನಿಸಿದರೆ ಇನ್ನೂ ಕೆಲವರಿಗೆ ಆಘಾತಕಾರಿಯೆನಿಸುತ್ತವೆ.

ಭೈರಪ್ಪನವರ ಕಾದಂಬರಿಗಳನ್ನು ಕುರಿತು ನಡೆದ ಈವರೆಗಿನ ಅಧ್ಯಯನವು ಅಷ್ಟೊಂದು ಸಮಗ್ರವಾಗಿರುವುದಿಲ್ಲ. ಅವರ ಕಾದಂಬರಿಗಳನ್ನು 'ಸಂಸ್ಕೃತಿ' ನಿಷ್ಠೆಯಿಂದ ಅಧ್ಯಯನ ಮಾಡಿರುವುದು ಕಡಿಮೆ. ಅವರೊಬ್ಬ ಹಿಂದೂ ಧರ್ಮದ ವಕ್ತಾರ, 'ಮನು' ಧರ್ಮದ ವಕ್ತಾರ ಎಂಬಂತೆಯೂ ಕೆಲವರು ಅವರನ್ನು ಅರ್ಥೈಸಿದ್ದಾರೆ.

ತೀವ್ರಗತಿಯ ಸಾಂಸ್ಕೃತಿಕ ಪಲ್ಲಟಗಳಾಗುತ್ತಿರುವ ಪ್ರಸ್ತುತ ಸಂದರ್ಭದಲ್ಲಿ ಭೈರಪ್ಪನವರ ಕಾದಂಬರಿಗಳ ಸಾಂಸ್ಕೃತಿಕ ಅಧ್ಯಯನ ಅತ್ಯಂತ ಮಹತ್ವದ್ದಾಗಿದೆ. ಭಾರತೀಯ ಮತ್ತು ಕರ್ನಾಟಕ ಸಂಸ್ಕೃತಿಯ ಸಮಗ್ರ ದರ್ಶನವನ್ನು ಇವರ ಕೃತಿಗಳು ಎಷ್ಟರ ಮಟ್ಟಿಗೆ ಅರಗಿಸಿಕೊಂಡಿವೆ ಎಂಬುದನ್ನು ಗುರುತಿಸುವುದು ಮಹತ್ವದ್ದಾಗಿದೆ.

'' ಎಸ್. ಎಲ್. ಭೈರಪ್ಪನವರು ಕನ್ನಡದ ಮಧ್ಯಮ ವರ್ಗದ ಓದುಗರ ಪಾಲಿಗೆ ಆರಾಧ್ಯದೈವವೇ ಆಗಿದ್ದಾರೆ. ಅವರ ಕಥನ ಶಕ್ತಿ ಬಲಿಷ್ಠವಾದುದು ಅ.ನ.ಕೃ ನಂತರ ಓದುಗರನ್ನು ತಮ್ಮ ಮುಂದಿನ ಕೃತಿಗಾಗಿ ಕಾಯುವಂತೆ ಮಾಡಿರುವ ಮತ್ತೊಬ್ಬ ಲೇಖಕ ಅವರು. ಅವರನ್ನು ಕನ್ನಡ ವಿಮರ್ಶೆ ಬಹುಮತದಿಂದ ಎಂಬಂತೆ ಪ್ರತಿಗಾಮಿ ಲೇಖಕ ಎಂದು ಕರೆದಿದೆ'' ೧ ಎಂದು ರಹಮತ್ ತರಿಕೇರೆ ಅಭಿಪ್ರಾಯ ಪಡುತ್ತಾರೆ. ಕಾರಣ ಭೈರಪ್ಪನವರು ತಮ್ಮ ಕಾದಂಬರಿಗೆ ಆಯ್ದುಕೊಂಡ ವಿಷಯಗಳನ್ನು, ಬಿಂಬಿಸಿದ ಧೋರಣೆಗಳನ್ನು, ಪುನರ್ ಪ್ರತಿಷ್ಠಾಪಿಸಲು ಬಯಸಿದ ಪಾರಂಪರಿಕ ಮೌಲ್ಯಗಳನ್ನು, ಕುರಿತು ಚಿಂತಿಸುವುದು ಅಗತ್ಯವಾಗಿದೆ.

''ನೇರವಾಗಿ ಜನ ಜೀವನವನ್ನು ನೋಡಿ ಅದರ ನಾಡಿಯ ಮಿಡಿತವನ್ನು ಸಾಹಿತ್ಯದಲ್ಲಿ ಮೂಡಿಸುವುದೇ ಬರವಣಿಗೆಯ ಗುರಿಯಾಗಬೇಕು; ಯಾವ ತತ್ವ ಆದರ್ಶ ಮೊದಲಾದವುಗಳೂ ನೇರವಾಗಿ ಸಾಹಿತ್ಯ ಕೃತಿಯ ವಸ್ತುವಾಗಬಾರದು ಎಂಬ ಅರಿವು ಸ್ಪಷ್ಟವಾಯಿತು. ಎಂದು ಹೇಳುವ ಭೈರಪ್ಪನವರು

ನಂತರದ ಕೃತಿಗಳಲ್ಲೂ ಪ್ರತಿಷ್ಠಾಪಿತಗೊಂಡ ತೊಡಕನ್ನು ಬಿಡಿಸಿಕೊಳ್ಳಲು ಶಕ್ತರಾಗಿದ್ದಾರೆಯೇ ?'' ೨ ಎಂದು ರಹಮತ್ ತರಿಕೆರೆ ಪ್ರಶ್ನಿಸುತ್ತಾರೆ.

ಲೇಖಕನಾದವನು ತನ್ನ ಸೂಕ್ಷ್ಮ ಅನುಭವ ವಿಶೇಷತೆಯಿಂದ ಒಂದು ಕೃತಿಗೆ ಜೀವವನ್ನು ನೀಡುತ್ತಾನೆ. ಅವನ ಪ್ರತಿಯೊಂದು ಕೃತಿಗಳು ಓದುಗರ ಮೇಲೆ ಪ್ರಭಾವವನ್ನು ಬೀರದೇ ಇರುವುದು ಸಾಧ್ಯವಿಲ್ಲ. ಅಸಂಖ್ಯಾತ ಓದುಗರನ್ನು ಪಡೆದ ಈ ಕಾದಂಬರಿಗಳು ಈ ಜನಸಮೂಹದ ಮೇಲೆ ಎಂಥ ಪರಿಣಾಮವನ್ನುಂಟು ಮಾಡಬಹುದು. ವಿಕಾಸಶೀಲ ಸಮಾಜಕ್ಕೆ ಲೇಖಕನಾದವನು ತನ್ನದೇ ಆದ ಕಾಣಿಕೆಯನ್ನು ನೀಡುವುದರಲ್ಲಿ ಸಂದೇಹವೇ ಇಲ್ಲ. ಕೇವಲ ಪ್ರಾಚೀನ ಎಂಬ ದೃಷ್ಟಿಯಿಂದ, ಧರ್ಮಕ್ಕೆ, ಮೌಲ್ಯಕ್ಕೆ ಸಂಬಂಧ ಪಟ್ಟದ್ದು ಎಂದ ಮಾತ್ರಕ್ಕೆ ಸಮಾಜ ವಿರೋಧಿಯಾದ, ಪ್ರಗತಿ ವಿರೋಧಿಯಾದ ವಿಚಾರಗಳನ್ನು ಎಷ್ಟೇ ಆಕರ್ಷಕವಾಗಿ ಹೇಳಿದರೂ ಅದರಿಂದ ಉಂಟಾಗಬಹುದಾದ ಪ್ರಯೋಜನವೇನು ಎಂಬ ಪ್ರಶ್ನೆ ಮೂಡುತ್ತದೆ.

ಸಾಹಿತ್ಯವೆಂಬುದು ಅಪಾರವಾದ ಜೀವನ ತಿಳುವಳಿಕೆಯಿಂದ ಉಗಮಗೊಂಡದ್ದು ಅದು ಯಾವಾಗಲೂ ಜೀವನಮುಖಿಯಾದುದು. ಹಿತವಾದುದನ್ನು ನಿರ್ಮಾಣ ಮಾಡುವುದು, ಸಾಮಾಜಿಕ ಪ್ರಗತಿಗೆ ನೇರವಾಗಿ ತನ್ನ ಕಾಣಿಕೆಯನ್ನು ಸಲ್ಲಿಸುವುದು ಸದಾ ಜರುಗುತ್ತ ಬಂದಿರುವ ಸಂಗತಿಯಾಗಿದೆ. ನಮ್ಮದೇ ಆದ ಹಿತಾಸಕ್ತಿಗೆ ಸಾಹಿತ್ಯವೆಂಬ ಅಮೂಲ್ಯವಾದ ವೇದಿಕೆಯನ್ನು ಬಳಸಿಕೊಂಡರೆ ಹೇಗೆ ? ಆಧುನಿಕ ಸಮಾಜಕ್ಕೆ ಅರಗದ ಸತ್ಯಗಳನ್ನು ಬಿಂಬಿಸಿದರೆ ಉಂಟಾಗುವ ಪರಿಣಾಮ ಎಂಥದು? ಎಂಬ ಜಿಜ್ಞಾಸೆ ಮೂಡುವುದು ಸಹಜ.

'ದೇವನೊಬ್ಬ ನಾಮ ಹಲವು' ಎಂದು ಹೇಳಿದರೂ ಇಂದಿಗೂ ಯಾವ ಧಾರ್ಮಿಕ ಪಂಥಗಳೂ ಒಗ್ಗೂಡುತ್ತಿಲ್ಲ. ಬಹುಸಂಸ್ಕೃತಿಯ ಬೀಡಾದ ಭಾರತದಲ್ಲಿ ಸ್ವಾತಂತ್ರ್ಯಾನಂತರದ ಸಾಮಾಜಿಕ ಬದುಕಿಗೆ ಭೈರಪ್ಪನವರ ಕಾದಂಬರಿಗಳು ಎಷ್ಟರ ಮಟ್ಟಿಗೆ ಪ್ರಸ್ತುತವೆನಿಸುತ್ತವೆ. ಎಂಬ ಅಂಶಗಳನ್ನು ಗುರುತಿಸುವುದು ಮುಖ್ಯವಾದ ವಿಷಯವಾಗಿದೆ.

'' ಭಾರತೀಯ ತತ್ವಶಾಸ್ತ್ರ ಮತ್ತು ಮನಶ್ಶಾಸ್ತ್ರವನ್ನೂ ಆಳವಾಗಿ ಅಭ್ಯಾಸ ಮಾಡಿರುವ ಅವರಿಗೆ ಭಾರತೀಯ ಸಂಸ್ಕೃತಿಯ ಬಗ್ಗೆ ತೀವ್ರ ಕಾಳಜಿ ಇದೆ. '' ೩ ಎಂಬ ವಿಠಲರಾವ್ ಗಾಯಕ್‌ವಾಡರ ಮಾತು ಅವರ ಕೃತಿಗಳನ್ನು ಅಭ್ಯಾಸ ಮಾಡಿದಾಗ ನಿಜವೆನ್ನಿಸಲು ಸಾಧ್ಯವಿದೆ ಹಾಗೆಯೇ ಬೌದ್ಧ ಧರ್ಮದ ಬಗ್ಗೆ, ವೈದಿಕ ಧರ್ಮದ ಮೇಲಿರುವಷ್ಟೇ ಗೌರವ ಪ್ರೀತಿ ಭೈರಪ್ಪನವರಿಗಿದೆಯೆ ? ಬೌದ್ಧ ಧರ್ಮವೂ ಭಾರತೀಯ ಸಂಸ್ಕೃತಿಗೆ ಸಿರಿಸಂಪದವನ್ನು ತಾರದೇ ಹೋಯಿತೇ ? ಸಾರ್ಥದಲ್ಲಿ ಅವರು ಸಾಧಿಸುವ ಬಿಂಬಿಸುವ ವಿಚಾರಧಾರೆ ಯಾವುದು ಎಂದು ಪರಿಶೀಲಿಸುವ ಅಗತ್ಯವಿದೆ.

ಮತದಾನ, ಗೃಹಭಂಗ, ನೆಲೆ, ನಿರಾಕರಣ, ದೂರಸರಿದರು, ತಂತು, ಜಲಪಾತ ಈ ಕಾದಂಬರಿಗಳನ್ನು ಹೊರತು ಪಡಿಸಿ ಇನ್ನುಳಿದ ಅವರ ಎಲ್ಲಾ ಕಾದಂಬರಿಗಳ ಪ್ರಮುಖವಾದ ಆಸ್ಥೆ ಯಾವುದು ? ಧರ್ಮವನ್ನು ಬೆಳಗುವೆನೆಂದು ಹೊರಟ ಭೈರಪ್ಪನವರು ಪಂಪ, ಕುವೆಂಪು ಅಗ್ರಂತೆ ಕಾವ್ಯ

ಧರ್ಮಕ್ಕೆ ಅಂದರೆ ಸಾಹಿತ್ಯದ ಮೌಲ್ಯಗಳಿಗೆ ಏಕೆ ಬದ್ಧವಾಗುವುದಿಲ್ಲ.? ಹಿಂದೂ ಧರ್ಮದ ಪ್ರಮೇಯಗಳನ್ನು ಬದಲಾದ ಸಾಮಾಜಿಕ ಸಂದರ್ಭಗಳಿಗೆ ಪರಿಕ್ಷೆಗೆ ಒಡ್ಡುವ ರೀತಿ ಯಾವುದು ? ಎಂಬುದನ್ನು ಅಧ್ಯಯನ ಮಾಡುವುದು ಅಗತ್ಯವಾಗಿದೆ.

ಲೇಖಕನಾದವನು ಸಾಮಾಜಿಕ ಬದಲಾವಣೆಗಳನ್ನು ಸೂಕ್ಷ್ಮವಾಗಿ ಗ್ರಹಿಸುತ್ತಾನೆ. ಸತ್ಯದ ನೆಲೆಯಿಂದ ನಿಂತುಕೊಂಡು, ಭೂತ, ವರ್ತಮಾನ, ಭವಿಷತ್‌ಗಳ ಪೂರ್ಣ ನೋಟದಿಂದ ಅಭಿವ್ಯಕ್ತಿ ಕ್ರಿಯೆಯಯನ್ನು ಮೈಗೂಡಿಸಿಗೊಳ್ಳುತ್ತಾನೆ. ಭೂತ ವರ್ತಮಾನಗಳು ಅವನ ಅನುಭವದಲ್ಲಿ ದಟ್ಟವಾಗಿದ್ದರೂ ಭವಿಷತ್ತಿನ ನೋಟವನ್ನು ಕಳಚಿಕೊಂಡಿರುವುದಿಲ್ಲ ಸಾಮಾಜಿಕ, ರಾಜಕೀಯ, ಧಾರ್ಮಿಕ ಪ್ರೇರಣೆಗಳು. ಪ್ರಭಾವಗಳು ಅವನಲ್ಲಿ ಮೂಡಿ, ಗಾಢವಾದ ಪ್ರಜ್ಞೆಯೊಂದಿಗೆ ಬೆರೆತು ಅವನಲ್ಲಿ ಒಂದು ಸಾಂಸ್ಕೃತಿಕ ಜಾಗೃತಿ ರೂಪುಗೊಳ್ಳತ್ತದೆ. ತನ್ಮೂಲಕ ಅದು ಕೃತಿಗಳಲ್ಲಿ ಮಹತ್ವದ ಸ್ವರೂಪವನ್ನು ಪಡೆದುಕೊಳ್ಳುತ್ತದೆ. ಸಮಾಜ ಈವರೆಗೆ ಒಪ್ಪಿಕೊಂಡು ಬಂದ ಮೌಲ್ಯಗಳು, ವ್ಯಕ್ತಿಗತ ಶ್ರದ್ಧೆಗಳು ಅವುಗಳಲ್ಲಿ ಉಂಟಾಗುತ್ತಿರುವ ಪಲ್ಲಟಗಳು ಆಧುನಿಕ ಸೌಲಭ್ಯಗಳಿಂದ ಉಂಟಾಗುತ್ತಿರುವ ಸಾಂಸ್ಕೃತಿಕ ಸಂಘರ್ಷ ಈ ಎಲ್ಲ ವಿಚಾರಗಳು ಲೇಖಕನ ಮೇಲೆ ಪ್ರಭಾವವನ್ನು ಬೀರುತ್ತವೆ. ತನ್ನ ಸಂಸ್ಕೃತಿ ಎದುರಿಸುತ್ತಿರುವ ಅಪಾಯಗಳನ್ನು ಲೇಖಕ ಸೂಕ್ಷ್ಮವಾಗಿ ಅರಿಯುತ್ತಾನೆ. ಅದರಿಂದ ಉಂಟಾಗಬಹುದಾದ ಸಾವಮಾಜಿಕ, ರಾಜಕೀಯ ಬದಲಾವಣೆಗಳನ್ನು ಕೃತಿಗಳಲ್ಲಿ ಅಭಿವ್ಯಕ್ತಿಗೊಳಿಸುತ್ತಾನೆ.

' ವಿವಿಧತೆಯಲ್ಲಿ ಏಕತೆ ' ಎಂಬುದು ಭಾರತೀಯ ಸಂಸ್ಕೃತಿಯ ಜೀವಾಳವಾಗಿದೆ. ಹಲವು ಭಾಷೆಗಳು, ಹಲವು ಜನಾಂಗಗಳು, ಹಲವು ಧರ್ಮಗಳು, ವಿಭಿನ್ನ ವಿಚಾರಗಳು, ವೇಷ ಭೂಷಣಗಳು ಎಲ್ಲದರಲ್ಲೂ ವೈವಿಧ್ಯತೆಯನ್ನು ನೋಡುತ್ತೇವೆ. ಆಗಾಗ ಸಣ್ಣಪುಟ್ಟ ಸಂಘರ್ಷಗಳು ನಡೆದು ಕೊಂಡು ಬರುತ್ತವೆಯಾದರೂ ಭಾರತೀಯ ಸಂಸ್ಕೃತಿಗೆ ಅಂಥ ಅಪಾಯವೇನೂ ತಟ್ಟಿದಂತೆ ತೋರುವುದಿಲ್ಲ.

ಆಧುನಿಕ ಭಾರತವೆಂದರೆ, ಕೇವಲ ವೈದಿಕವಲ್ಲ, ಅಲ್ಲಿ ಹಿಂದೂ, ಕ್ರೈಸ್ತ, ಮುಸಲ್ಮಾನ, ಜೈನ, ಬೌದ್ಧ, ಶಿಖ್ ಮುಂತಾದ ಧಾರ್ಮಿಕ ಸಾಮರಸ್ಯವಿದೆ. ಹಲವು ಭಾಷಾ ಸಮೂಹಗಳು ನೀಡಿದ ಚೈತನ್ಯವಿದೆ ಕಾರಣ ಇಂಥ ನಿಲುವುಗಳನ್ನು ಭೈರಪ್ಪನವರ ಕಾದಂಬರಿಗಳ ಹಿನ್ನಲೆಯಲ್ಲಿ ಗುರುತಿಸುವುದು ಇಲ್ಲಿ ಮುಖ್ಯವಾದುದಾಗಿದೆ.

ವೇದ- ಉಪನಿಷತ್ತುಗಳು, ಷಡ್ದರ್ಶನಗಳು, ರಾಮಾಯಣ, ಮಹಾಭಾರತ, ಭಗವದ್ಗೀತೆ, ಪುರಾಣ ಇತಿಹಾಸ ವೈದಿಕ ಧರ್ಮ, ಬೌದ್ಧ, ಜೈನ ಮುಂತಾದ ಧರ್ಮಗಳು ಭಾರತೀಯ ಸಂಸ್ಕೃತಿ ಎನ್ನಿಸುವ ಒಂದು ವಿಶೇಷ ಸಂಸ್ಕೃತಿಯ ಉಗಮಕ್ಕೆ ಕಾರಣವಾಗಿವೆ.

''ಭಾರತದಲ್ಲಿ ಬುದ್ಧಾದಿಗಳ ನಂತರವೂ ಗಾಂಧೀಜಿ, ಅಂಬೇಡ್ಕರ್, ಲೋಹಿಯಾ ಅವರಂಥ ಸಮಾಜ ಚಿಂತಕರು ಭಾರತೀಯ ಸಾಂಸ್ಕೃತಿಕ ಪರಂಪರೆಯ ಮೂಲಕ ಹೊಸ ಚಿಂತನೆಗಳನ್ನು ಮಂಡಿಸಿದುದು ಗಮನಾರ್ಹ'' ೩ ಎಂದು ವಿಠಲರಾವ್ ಗಾಯಕವಾಡ್ ಅಭಿಪ್ರಾಪಡುತ್ತಾರೆ.

ಭಾರತೀಯ ಸಂಸ್ಕೃತಿಗೆ ಕಾಲಕ್ಕೆ ತಕ್ಕಂತೆ ಬದಲಾಗುವ ಗುಣವಿಶೇಷವಿದೆ. ವೇದಗಳನ್ನು ಅವುಗಳ

ವಿಚಾರಗಳನ್ನು ಸಂಸ್ಕರಿಸಿ ಹೊಸ ರೂಪ ನೀಡಲು ಉಪನಿಷತ್ತಗಳು ಶ್ರಮಿಸಿವೆ. ವೈದಿಕ ಧರ್ಮ ನಿಂತ ನೀರಾದಾಗ ಅದಕ್ಕೆ ಚಲನೆಯನ್ನು ನೀಡಲು ಬೌದ್ಧ, ಜೈನ, ಧರ್ಮಗಳ ಉದಯವಾಗುತ್ತದೆ. ರಾಮಮನೋಹರ ಲೋಹಿಯಾ, ರಾಜಾರಾಮ ಮೋಹನರಾಯ, ಡಾ.ಬಿ. ಆರ್. ಅಂಬೇಡ್ಕರ್ ಮುಂತಾದವರು ಭಾರತೀಯ ಸಂಸ್ಕೃತಿಗೆ ಹೊಸ ಪ್ರಾಣವನ್ನು ತುಂಬಿದುದು ಗಮನಾರ್ಹವಾದ ಅಂಶವಾಗಿದೆ.

ಭೈರಪ್ಪನವರ ಮೇಲೆ ಗಾಂಧೀ, ಲೋಹಿಯಾ, ಅಂಬೇಡ್ಕರ್ ಪ್ರಭಾವ ಉಂಟಾಗಿದೆಯೆ ? ಪಾರಂಪರಿಕ ನೆಲೆಯಲ್ಲಿ ನಿಂತುಕೊಂಡು ಕೃತಿ ರಚಿಸುವ ಅವರು ಆಧುನಿಕ ಸಂಸ್ಕೃತಿಯ ವಿಚಾರಗಳನ್ನು ತಮ್ಮ ಕೃತಿಗಳಲ್ಲಿ ಅಭಿವ್ಯಕ್ತಿಸುವ ಪ್ರಯತ್ನವನ್ನು ಮಾಡಿದ್ದಾರೆಯೆ ? ಎಂಬ ಚಿಂತನೆ ಅಗತ್ಯವಾಗಿದೆ.

ಹೊಸಗನ್ನಡ ಸಾಹಿತ್ಯದಲ್ಲಿ ನವೋದಯ ಪ್ರಗತಿಶೀಲ, ನವ್ಯ ದಲಿತ - ಬಂಡಾಯ ಚಳುವಳಿಗಳು ಸಶಕ್ತವಾಗಿ ಮೂಡಿ ಬಂದಿವೆ. ಆಯಾಕಾಲದ ಲೇಖಕರು ಬಹುಪಾಲು ಈ ಧೋರಣೆಗಳನ್ನು ಹೊಂದಿ ಕೃತಿ ರಚನೆ ಮಾಡಿದ್ದಾರೆ ಕುವೆಂಪು, ಕಾರಂತ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಬೀರಿದ ಪ್ರಭಾವ ಮಹತ್ವದ್ದಾಗಿದೆ. ಕುವೆಂಪುರವರ ವೈಚಾರಿಕತೆ, ಕಾರಂತರ ಜೀವನದೃಷ್ಟಿ ಅವರ ಸಾಹಿತ್ಯದ ವಿಶೇಷ ಕಾಳಜಿಗಳಾಗಿವೆ ಅದರಂತೆ 'ಧರ್ಮ' ಅದರಲ್ಲೂ ವೈಧಿಕ ಧರ್ಮ, ವೈದಿಕ ಸಂಸ್ಕೃತಿ ಭೈರಪ್ಪನವರಿಗೆ ತುಂಬಾ ಹತ್ತಿರವಾದದ್ದು ಎಂಬ ವಿಚಾರ ಅವರ ಕೃತಿಗಳಿಂದ ಉಂಟಾಗುವ ಸಾಧ್ಯತೆಯೆಷ್ಟು ಎಂಬುದನ್ನು ಗುರುತಿಸುವ ಉದ್ದೇಶವಿದೆ.



# ಅಧ್ಯಯನದ ವ್ಯಾಪ್ತಿ ಮತ್ತು ಮಹತ್ವ

ಭಾರತೀಯ ಸಾಮಾಜಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಇಪ್ಪತ್ತನೆಯ ಶತಮಾನ ಮಹತ್ವದ ಬದಲಾವಣೆಗಳನ್ನು ತಂದಿತು. ಸಾಹಿತ್ಯಕ್ಷೇತ್ರವೂ ವಿವಿಧ ಮಗ್ಗುಲುಗಳಿಂದ ಸುಪುಷ್ಟವಾಗಿ ಬೆಳೆದು ಬಂದಿದೆ. ಪ್ರಾಚೀನ ಪರಂಪರೆ, ಮೌಲ್ಯಗಳು ಆಧುನಿಕ ವಿಚಾರಗಳ ಪರೀಕ್ಷೆಗೆ ಒಳಪಟ್ಟವು. ಲೇಖಕರ ಬದಲಾದ ಸಂವೇದನೆಗಳಿಗೆ, ಸೂಕ್ಷ್ಮತೆಗಳಿಗೆ ಕಾದಂಬರಿ ಸಾಹಿತ್ಯ ವಿಸ್ತೃತ ಅವಕಾಶವನ್ನು ಒದಗಿಸಿತು. ವಿಶಿಷ್ಟ ಸಂವೇದನೆಗೆ ಯೋಗ್ಯವಾದ ಅಭಿವ್ಯಕ್ತಿಯ ಮಾರ್ಗಗಳನ್ನು, ಶೈಲಿಯನ್ನು ಲೇಖಕರು ಹೊಸದಾಗಿ ರೂಪಿಸಿಕೊಳ್ಳಲು ಈ ಸಂದರ್ಭದಲ್ಲಿ ಯಶಸ್ವಿಯಾದರು. ಆಧುನಿಕ ಕನ್ನಡ ಸಾಹಿತ್ಯ ನೀಡಿದ ಹೊಸ ಅವಕಾಶಗಳ ಬೆಳಕಿನಲ್ಲಿ ತಮ್ಮ ಅನುಭವಗಳನ್ನು ಶೋಧಿಸಲು ಅವರು ತೊಡಗಿಕೊಂಡರು. ಕನ್ನಡ ಸಾಹಿತ್ಯದಲ್ಲಿ ಹೊಸ ಹೊಸ ಸಂಪ್ರದಾಯಗಳು ಆರಂಭವಾದವು. ಸೃಜನಶೀಲ ಸಾಹಿತ್ಯಕ್ಕೆ ಇದು ಸ್ವಾಭಾವಿಕ ಅಗತ್ಯವೂ ಆಗಿದೆ.

ಕನ್ನಡ ಕಾದಂಬರಿ ಈಗಿದ್ದ ಸ್ವರೂಪದಲ್ಲಿ ಹುಟ್ಟಿಕೊಂಡದ್ದು ಹತ್ತೊಂಬತ್ತನೆಯ ಶತಮಾನದ ಕೊನೆಯ ದಶಕದಲ್ಲಿ. ಈ ಮೊದಲು ಕಾದಂಬರಿ ಎಂಬ ಅಭಿದಾನಕ್ಕೆ ಯೋಗ್ಯವಾದ ಮೂರು ಕೃತಿಗಳು ಕನ್ನಡದಲ್ಲಿ ಮೂಡಿ ಬಂದವು ಎಂದು ಶ್ರೀನಿವಾಸ ಹಾವನೂರವರು ಗುರುತಿಸುತ್ತಾರೆ. [೪] ಅವುಗಳು ಯಾವುವು ಎಂದರೆ :

೧. ಯಾದವನ ಕಲಾವತೀ ಪರಿಣಯ (೧೮೧೫)

೨. ಮುಮ್ಮಡಿಯವರ ಸೌಂಗಂಧಿಕಾ ಪರಿಣಯ (೧೮೨೧)

೩. ಕೆಂಪುನಾರಾಯಣನ ಮುದ್ರಾಮಂಜೂಷ (೧೮೨೩)

ಈ ಕಾದಂಬರಿಗಳು ಈಗಿದ್ದ ಸ್ವರೂಪದ ಕಾದಂಬರಿಯನ್ನು ಪೂರ್ಣ ಪ್ರಮಾಣದಲ್ಲಿ ಹೋಲುವುದಿಲ್ಲ. ಆದರೆ ಮುಂಬುರುವ ಕಾದಂಬರಿ ಸಾಹಿತ್ಯಕ್ಕೆ ಈ ಕೃತಿಗಳು ಮುನ್ನುಡಿ ರೂಪದಲ್ಲಿ ರಚಿತವಾಗಿವೆ. ಮೊದ ಮೊದಲು ಕನ್ನಡಕ್ಕೆ ಬಂದ ಕಾದಂಬರಿಗಳು ಭಾಷಾಂತರ ಇಲ್ಲವೇ ರೂಪಾಂತರಗಳಾಗಿದ್ದವು.

ಗುಳವಾಡಿ ವೆಂಕಟರಾಯರ ಇಂದಿರಾಬಾಯಿ (೧೮೯೯) ಕನ್ನಡದ ಮೊಟ್ಟ ಮೊದಲನೆಯ ಸ್ವತಂತ್ರ ಕಾದಂಬರಿಯೆಂದು ಗುರುತಿಸಲಾಗಿದೆ. ಬಾಬುರಾವ್ ಬೋಳಾರರ 'ವಾಗ್ದೇವಿ' (೧೯೦೫) ಕೆರೂರು

ವಾಸುದೇವಚಾರ್ಯರ ' ಇಂದಿರೆ' (೧೯೦೮) ಕನ್ನಡ ಕಾದಂಬರಿಯಲ್ಲಿ ಮತ್ತೊಂದು ಪ್ರಮುಖ ಹೆಜ್ಜೆ ನಂತರ ಪುಟ್ಟಣ್ಣನವರ 'ಮಾಡಿದ್ದುಣ್ಣೊ ಮಹಾರಾಯ' (೧೯೧೫) ಪ್ರಕಟವಾಗಿ ಕನ್ನಡ ಕಾದಂಬರಿಯಲ್ಲಿ ಆದರ್ಶ ಮತ್ತು ವಾಸ್ತವಗಳ ಚಿತ್ರಣಕ್ಕೆ ನಾಂದಿಯಾಯಿತು. ಈ ಮೂರು ಕಾದಂಬರಿಗಳು ವಾಸ್ತವ ಮಾರ್ಗವನ್ನೆ ಪ್ರತಿನಿಧಿಸುತ್ತವೆ.

ಇಪ್ಪತ್ತನೆಯ ಶತಮಾನದ ಮೂರನೆಯ ದಶಕದ ಸುಮಾರಿಗೆ ಕನ್ನಡ ಕಾದಂಬರಿ ಪ್ರಯೋಗ ಸಹಜವಾದ ಅನಿಶ್ಚಿತತೆಯನ್ನು ಕಳೆದುಕೊಂಡು ವಾಸ್ತವದ ರಾಜ ಮಾರ್ಗವನ್ನು ಆಯ್ದುಕೊಂಡಿತು.

ವಾಸ್ತವ ಮಾರ್ಗದ ಕಾದಂಬರಿಯಲ್ಲಿಯೂ ಲೇಖಕರ ವಯಕ್ತಿಕ ಸಂಸ್ಕಾರ ಪ್ರತಿಭೆಗಳಿಂದಾಗಿ ವಸ್ತು, ಶೈಲಿ, ವೈವಿಧ್ಯ ಅನಿವಾರ್ಯವಾಯಿತು. ಕಾರಂತರ ಮಾನವತಾವಾದ, ಕುವೆಂಪು - ಗೋಕಾಕ್‌ರ ಧ್ಯೇಯವಾದ, ಶ್ರೀರಂಗರ ವೈಚಾರಿಕತೆ, ಗೋರುರವರ ಹಾಸ್ಯ, ನಿರಂಜನರ ವರ್ಗ ಪ್ರಜ್ಞೆ, ತ.ರಾ.ಸುರವರ ಉತ್ಕಟತೆ, ಕಟ್ಟೀಮನಿಯವರ ಯಥಾರ್ಥತೆ, ತ್ರಿವೇಣಿಯವರ ಮನೋವೈಜ್ಞಾನಿಕ ಆಸ್ಥೆಗಳು, ಇವು ಲೇಖಕರ ಕೃತಿಗಳ ಶೈಲಿ ಅಂತ ಸ್ವರೂಪದ ವೈಶಿಷ್ಟ್ಯಕ್ಕೆ ಕಾರಣವಾದವು. -೫ ಎಂದು ಜಿ. ಎಸ್. ಆಮೂರವರು ಅಭಿ ಪ್ರಾಯಪಡುತ್ತಾರೆ.

ಕನ್ನಡದಲ್ಲಿ ಶಿವರಾಮಕಾರಂತರ ಸರಸಮ್ಮನ ಸಮಾಧಿ (೧೯೩೭) ಮರಳಿ ಮಣ್ಣಿಗೆ (೧೯೪೧) ಬೆಟ್ಟದ ಜೀವ (೧೯೪೩) ಕೆ.ವಿ.ಪುಟ್ಟಪ್ಪನವರ ಕಾನೂರು ಹೆಗ್ಗಡತಿ (೧೯೩೬) ಮಲೆಗಳಲ್ಲಿ ಮದುಮಗಳು (೧೯೬೭) ಶ್ರೀರಂಗರ ವಿಶ್ವಾಮಿತ್ರ ಸೃಷ್ಟಿ (೧೯೩೪) ವಿ.ಕೃ.ಗೋಕಾಕರ ಸಮರಸವೇ ಜೀವನ (೧೯೫೬) ಮಾಸ್ತಿ ವೆಂಕಟೇಶ ಅಯ್ಯಂಗಾರವರ ಚೆನ್ನಬಸವ ನಾಯಕ (೧೯೪೯) ಕೆ.ವಿ ಅಯ್ಯರವರ ಶಾಂತಲಾ (೧೯೫೪) ದೇವುಡುರವರ ಮಹಾಬ್ರಾಹ್ಮಣ (೧೯೬೪) ಕುವೆಂಪುರವರ ಮಲೆಗಳಲ್ಲಿ ಮದುಮಗಳು (೧೯೬೧) ಶಿವರಾಮ ಕಾರಂತರ ಮೂಕಜ್ಜಿಯ ಕನಸುಗಳು (೧೯೬೮) ಮೈಮನಗಳ ಸುಳಿಯಲ್ಲಿ (೧೯೭೦) ಚದುರಂಗರ ಸರ್ವಮಂಗಳಾ (೧೯೫೦) ಉಯ್ಯಾಲೆ(೧೯೬೦) ವೈಶಾಖ (೧೯೮೧) ವ್ಯಾಸರಾಯ ಬಲ್ಲಾಳರ ಬಂಡಾಯ (೧೯೮೫) ಎಂ.ಕೆ. ಇಂದಿರಾವರ ಫಣಿಯಮ್ಮ (೧೯೭೯) ಶಾಂತಿನಾಥ ದೇಸಾಯಿಯವರ ಮುಕ್ತಿ (೧೯೬೧) ವಿಕ್ಷೇಪ (೧೯೭೧) ಬೀಜ (೧೯೮೭) ಅಂತರಾಳ (೧೯೯೩) ಪಿ.ಲಂಕೇಶರ ಬಿರುಕು (೧೯೯೭) ಮುಸ್ಸಂಜೆಯ ಕಥಾ ಪ್ರಸಂಗ (೧೯೭೮) ಗಿರಿಯವರ ಗತಿ ಸ್ಥಿತಿ (೧೯೮೫) ಪೂರ್ಣ ಚಂದ್ರ ತೇಜಸ್ವಿಯರ ಕರ್ವಾಲೋ (೧೯೮೦) ಸ್ವರೂಪ (೧೯೬೬) ಚಿದಂಬರ ರಹಸ್ಯ (೧೯೮೫) ಶಂಕರ ಮೋಕಾಶಿ ಪುಣೇಕರರ ಗಂಗವ್ವ ಗಂಗಾಮಾಯಿ (೧೯೬೬) ಯು. ಆರ್. ಅನಂತಮೂರ್ತಿ ಸಂಸ್ಕಾರ (೧೯೬೬) ಭಾರತಿಪುರ (೧೯೭೭) ಅವಸ್ಥೆ (೧೯೭೮) ಯಶವಂತ ಚಿತ್ತಾಲರ ಮೂರುದಾರಿಗಳು (೧೯೬೪) ಛೇದ (೧೯೮೫) ಪುರುಷೋತ್ತಮ (೧೯೯೧) ಶಿಕಾರಿ (೧೯೭೯) ದೇವನೂರು ಮಹಾದೇವರ ಒಡಲಾಳ (೧೯೮೫) ಕುಸುಮ ಬಾಲೆ (೧೯೮೮) ಕಾ.ತ.ಚಿಕ್ಕಣ್ಣರ ಮುಂಜಾವು (೧೯೪೯) ಅರವಿಂದ ಮಾಲಗತ್ತಿಯವರ ಕಾರ್ಯ(೧೯೮೮) ಬಿ.ಟಿ.ಲಲಿತಾನಾಯಕರ ಗತಿ (೧೯೮೬) ಸಾರಾ ಅಬೂಬಕ್ಕರರ ಚಂದ್ರಗಿರಿಯ ತೀರದಲ್ಲಿ (೧೯೮೫) ರಾವಬಹದ್ದೂರರ ಗ್ರಾಮಾಯಣ (೧೯೫೭) ಶ್ರೀಕೃಷ್ಣ ಆಲನಹಳ್ಳಿ ಕಾಡು (೧೯೭೬) ಮುಂತಾದ ಕಾದಂಬರಿಗಳು ಕಾದಂಬರಿ ಸಾಹಿತ್ಯದಲ್ಲಿ ಮಹತ್ವದ ಕೃತಿಗಳಾಗಿವೆ. ಈ ಕೃತಿಗಳು ಕನ್ನಡ ಕಾದಂಬರಿ ಬೆಳೆದು

ಬಂದ ಪರಿಯನ್ನು ಗುರುತಿಸುವ ಕೃತಿಗಳು ಆಗಿವೆ.

'ಬದುಕು ಸದಾ ಚಲನಶೀಲ ಅಂತ ಹೇಳಿದರೂ, ಅದು ಒಂದು ನೆಲೆಯಲ್ಲಿ ಭೂತಕಾಲದಿಂದ ಬಂದ ಅನೇಕ ನಂಬಿಕೆಗಳು, ಮೌಲ್ಯಗಳು, ನೆನಪುಗಳು ಮಡುಗಟ್ಟಿನಿಂತ ವರ್ತಮಾನವಾಗಿರುತ್ತದೆ. ವರ್ತಮಾನದ ವ್ಯವಸ್ಥೆ ಸರಿಯಾಗಿಲ್ಲ; ಇದು ನಾನು ನಂಬಿದ ಮೌಲ್ಯಗಳ ದಿಕ್ಕಿನಲ್ಲಿ ಬದಲಾಗಬೇಕು; ಈ ಬದಲಾವಣೆಗೆ ಪೂರಕವಾದ ರೀತಿಯಲ್ಲಿ ನಾನು ಭಾಷೆಯನ್ನು ಕಲೆಯನ್ನು ಬಳಸಬೇಕು ಎಂದು ಪ್ರಜ್ಞಾಪೂರಕವಾಗಿ ಘೋಷಿಸಿಕೊಳ್ಳುವ ಸಾಹಿತಿ 'ಬದ್ಧ' ಸಾಹಿತಿಯಾಗುತ್ತಾನೆ! ಸಾಹಿತಿಗಳಿಗೆ ಅವರದೇ ಆದ ಬದ್ಧತೆ ಇರುತ್ತದೆ ಇನ್ನು ಕೆಲವರು ಇಂಥ 'ಬದ್ಧತೆ' ಗೆ ಒಳಗಾಗದೆಯೇ ಬರೆಯುತ್ತಿರಬಹುದು.

ನವೋದಯದ ಆಶಯಗಳು ಮತ್ತು ಅವರು ಭಾಷೆಯನ್ನು ಬಳಸಿ ಕೊಂಡ ರೀತಿ ಪ್ರಗತಿಶೀಲ ಪಂಥದವರಿಗೆ ರುಚಿಸದೇ ಇರುವದು ಇಂಥ ಬದ್ಧತೆಯು ಕಾಡಿದಾಗಲೇ ನವ್ಯ ಮತ್ತು ಪ್ರಗತಿಶೀಲರ ಆಶಯಗಳು ಧೋರಣೆ ತುಂಬಾ ಹಳತಾಗಿ ಹೊಸದಕ್ಕೆ ತುಡಿಯುವ ಮನೋಭಾವ ನವ್ಯರಲ್ಲಿ ಹುಟ್ಟಿಕೊಂಡಿದ್ದು ಈಗ ಇತಿಹಾಸವಾಗಿದೆ. ನವ್ಯದ ಕ್ಲಿಷ್ಟತೆ, ಪ್ರತಿಮೆ, ಸಂಕೇತಗಳು ಗೊಂದಲದಿಂದ ದಾಟಿ ಸಾಮಾಜಿಕ ಬದುಕಿಗೆ ತೀರ ಸನಿಹವಾದ ನಿಲುವನ್ನು ತಾಳಬೇಕೆಂದು, ಜೊತೆಗೆ ಪ್ರತಿಭಟನೆಯೂ ಇರಬೇಕೆಂದು ಮೈದಳೆದ ಬಂಡಾಯದಲ್ಲಿ ಮತ್ತು ಈ ಎಲ್ಲ ಕಾಲಘಟ್ಟಗಳಲ್ಲಿ ವೈಚಾರಿಕವಾದ, ಆರೋಗ್ಯವಾದ ನೂತನ ಬೆಳೆವಣಿಗೆಯನ್ನು ಗುರುತಿಸ ಬಹುದು. ಇಷ್ಟೆಲ್ಲ ಬೆಳವಣಿಗೆಗಳು ಘಟಿಸುತ್ತಿದ್ದರೂ ಈ ಪಂಥಗಳಿಂದ ದೂರ ನಿಂತುಕೊಂಡು ಸಾಹಿತ್ಯದ ಮೂಲಕ ಜೀವನಾನ್ವೇಷಣೆಗೆ ತೊಡುಗುವ ಭೈರಪ್ಪನವರ ಎಲ್ಲ ಕಾದಂಬರಿಗಳ 'ಸಾಂಸ್ಕೃತಿಕ' ವಿಚಾರಗಳನ್ನು ಗುರುತಿಸುವುದು ಈ ಸಂದರ್ಭದಲ್ಲಿ ಮುಖ್ಯವಾಗಿದೆ. ಧರ್ಮಶ್ರೀ (೧೯೬೧) ದೂರ ಸರಿದರು (೧೯೬೨) ಮತದಾನ (೧೯೬೫) ವಂಶವೃಕ್ಷ ( ೧೯೬೫) ಜಲಪಾತ (೧೯೬೭) ನಾಯಿ-ನೆರಳು (೧೯೬೮) ತಬ್ಬಲಿಯು ನೀನಾದೆ ಮಗನೆ (೧೯೬೮) ಗೃಹಭಂಗ (೧೯೭೦) ನಿರಾಕರಣ,(೧೯೭೧) ಗ್ರಹಣ (೧೯೭೨) ದಾಟು (೧೯೭೩) ಅನ್ವೇಷಣೆ (೧೯೭೬) ಪರ್ವ (೧೯೭೯) ನೆಲೆ (೧೯೮೨) ಸಾಕ್ಷಿ (೧೯೮೬) ಅಂಚು (೧೯೯೦) ತಂತು (೧೯೯೨) ಸಾರ್ಥ (೧೯೯೮) ಈ ಎಲ್ಲ ಕಾದಂಬರಿಗಳ ಸಾಂಸ್ಕೃತಿಕ ವಿಚಾರಗಳು ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಿವೆ.

'' ಇಂಡಿಯಾದ ಸಂದರ್ಭದಲ್ಲಿ 'ಯಥಾ ಸ್ಥಿತಿ' ಅಂದರೆ ಶ್ರೀಮಂತ ಬಡವ ಎಂಬ ವರ್ಗಭೇದ ; ಉಚ್ಚ -ನೀಚ ಎಂಬ ಜಾತಿಭೇದ ; ಗಂಡು - ಹೆಣ್ಣು ಎಂಬ ಲಿಂಗ ಭೇದ ಮುಂತಾದ 'ಅಸಮಾನತೆ ' ಗಳೆ ಶೋಷಕ ಶಕ್ತಿಗಳಾಗಿ ಸಾವಿರಾರು ವರ್ಷಗಳಿಂದ ಮುಂದುವರೆದಿರುವ ವ್ಯವಸ್ಥೆ ; ದೇವರು, ಅವತಾರ, ಕರ್ಮ, ಪುನರ್‌ಜನ್ಮ, ಪಾಪ - ಪುಣ್ಯ, ಸ್ವರ್ಗ - ನರಕ ಮುಂತಾದ ಪರಿಕಲ್ಪನೆಗಳೇ ಮನುಷ್ಯನ ಒಳಗಿನ ಹೊರಗಿನ ಎಲ್ಲ ಆಗುಹೋಗುಗಳನ್ನು ಕಂಟ್ರೋಲು ಮಾಡುವ ಪರಿಸ್ಥಿತಿ. ಇಂಥ ಸ್ಥಿತಿ ಖಾಯಂ ಆಗಿ ಇರಬೇಕೆನ್ನುವವರು ಈ ಎಲ್ಲ ಸತ್ಯಗಳನ್ನು ಒಂದಿಲ್ಲೊಂದು ರೀತಿಯಿಂದ ವೈಭವಿಕರಿಸುತ್ತಾರೆ ; ಇನ್ನು ಕೆಲವರು ಮೌನವಾಗಿದ್ದು ಬಿಡುತ್ತಾರೆ ಇದು ಅವರ ಬದ್ಧತೆ '' ೬ ಎಂದು ಸಾಹಿತಿಗಳ ಬದ್ಧತೆಯ ಬಗ್ಗೆ ಅಭಿಪ್ರಾಯವಿದೆ.

ಸಾಹಿತಿಗಳು ಕೆಲವರು ತಮ್ಮನ್ನು ತಾವೇ ಪ್ರಗತಿಗಾಮಿಗಳೆಂದು ಕರೆದು ಕೊಳ್ಳುತ್ತಾರೆ. ಇನ್ನು

ಕೆಲವರನ್ನು ಪ್ರತಿಗಾಮಿಗಳೆಂದು ಗುರುತಿಸುತ್ತಾರೆ ಪ್ರಗತಿಗಾಮಿಗಳಿಗೆ ಮಾರ್ಕ್ಸ್, ಲೋಹಿಯಾ, ಅಂಬೇಡ್ಕರ, ಪೆರಿಯಾರ್ ಮುಂತಾದವರು ಹಿನ್ನಲೆಯಾಗುತ್ತಾರೆ. ಮಾನವ ವಿರೋಧಿ ನೆಲೆಗಳನ್ನು ಗುರುತಿಸುತ್ತ ಬದಲಾವಣೆಗಾಗಿ ಕಾತರಿಸುತ್ತಾರೆ. ಈ ಬದಲಾವಣೆಯನ್ನು ಸಮಾಜ ಒಪ್ಪಿಕೊಳ್ಳುವ ನೈತಿಕ ಒತ್ತಡವನ್ನು ಲೇಖಕರು ರೂಪಿಸುತ್ತಾ ಸಾಗುತ್ತಾರೆ. ಬದಲಾವಣೆಯ ಗತಿ ನಿಧಾನವಾಗಿರಬಹುದು ವೇಗವಾಗಿರಬಹುದು ಆದರೆ ತಾವು ನಂಬಿದ ಪ್ರಾಮಾಣಿಕ ಆಶಯಗಳಿಗೆ ಅನುಗುಣವಾಗಿ ಸಾಹಿತ್ಯ ಸೃಷ್ಟಿಗೆ ತೊಡುಗುತ್ತಾರೆ.

ಬದಲಾದ ಸಾಮಾಜಿಕ, ಧಾರ್ಮಿಕ, ಸಂದರ್ಭಗಳಲ್ಲಿ ಲೇಖಕ ಪ್ರಾಚೀನ ಸಂಸ್ಕೃತಿಯ ಅತ್ಯುತ್ತಮ ಮೌಲ್ಯಗಳು ನಶಿಸಿ ಹೋಗುವದನ್ನು ಸಹಿಸಿಕೊಳ್ಳಲು ಆಗದೇ ಇರಬಹುದು ಅಂಥ ಮೌಲ್ಯಗಳನ್ನು ಪುನರ್ ಸ್ಥಾಪಿಸುವ ಭೈರಪ್ಪನವರ ಕಾದಂಬರಿಗಳ ಅಧ್ಯಯನ ಒಂದರ್ಥದಲ್ಲಿ ಭಾರತೀಯ ಸಾಮಾಜಿಕ ಬದುಕಿನ ಅಧ್ಯಯನವೂ ಆಗಿದೆ. ಧಾರ್ಮಿಕ ಬದುಕಿನ ಅಧ್ಯಯನವೂ ಆಗಿದೆ. ಹಿಂದೂ ಧರ್ಮದ , ತತ್ವಜ್ಞಾನದ ಎಷ್ಟೋ ವಿಷಯಗಳು ಕಾದಂಬರಿಯಂಥ ಜನಪ್ರಿಯ ಸಾಹಿತ್ಯ ಮಾಧ್ಯಮದ ಮೂಲಕ ಓದುಗರಿಗೆ ದೊರೆಯುವದು ಮಹತ್ವದ ವಿಷಯವಾಗಿದೆ. ತತ್ವಗಳನ್ನು , ದರ್ಶನಗಳನ್ನು, ರಾಜಕೀಯ ವಿಚಾರಗಳನ್ನು ಭೈರಪ್ಪನವರು ತುಂಬಾ ಆಕರ್ಷಕವಾಗಿ ಓದುಗರ ಮನಸ್ಸಿಗೆ ಮುಟ್ಟುವ ರೀತಿಯಲ್ಲಿ ಹೆಣೆಯುತ್ತಾರೆ.

ಭೈರಪ್ಪನವರು ಪ್ರತಿಗಾಮಿ ಲೇಖಕರು ಎಂದು ಬಹುಪಾಲು ವಿಮರ್ಶಕರು ನಿರ್ಧರಿಸಿದ್ದಾರೆ, ನವ್ಯದವರು ಭೈರಪ್ಪನವರ ಕೃತಿಗಳು ವಿಮರ್ಶೆಗೆ ಅರ್ಹವಾದ ಕೃತಿಗಳೇ ಅಲ್ಲವೆಂಬ ನಿಲುವನ್ನು ತಾಳಿದ್ದಾರೆ. ಆದರೂ ಭೈರಪ್ಪನವರ ಕೃತಿಗಳು ಬಹುಸಂಖ್ಯಾತ ಓದುಗರನ್ನು ಪಡೆದಿವೆ. ಭಾರತೀಯ ಸಂಸ್ಕೃತಿಯ ಪುನರ್ ಅವಲೋಕನಕ್ಕೆ ನೇರವಾಗಿ ಸಹಾಯಕವಾಗಿವೆ. ಸ್ವಾತಂತ್ರ್ಯ ಪೂರ್ವದ ಮತ್ತು ಸ್ವಾತಂತ್ರ್ಯಾ ನಂತರದ ರಾಜಕೀಯ, ಸಾಮಾಜಿಕ, ಧಾರ್ಮಿಕ ಬದುಕಿನಲ್ಲಾದ ಬದಲಾವಣೆಗಳನ್ನು ಈ ಕಾದಂಬರಿಗಳು ದಾಖಲಿಸುತ್ತವೆ. ಕಾದಂಬರಿಗಾಗಿ ಆಯ್ದುಕೊಂಡ ವಸ್ತುಗಳು ಸಶಕ್ತವಾಗಿವೆ, ಉತ್ತಮ ನಿರೂಪಣೆ, ಕಥನ ಕೌಶಲ ಮುಂತಾದವುಗಳಿಂದ ಆಯ್ದುಕೊಂಡ ವಿಷಯ ಗಂಭೀರವಾದುದಾದರೂ ಓದುಗರನ್ನು ತಲುಪುತ್ತದೆ.

ಬಹುಪಾಲು ಅವರ ಕಾದಂಬರಿಗಳು ಭೈರಪ್ಪನವರ ಬದುಕಿನ ಕೆಲವು ವಿವರಗಳನ್ನು ಚಿತ್ರಿಸುತ್ತವೆ. ಸಾಮಾಜಿಕ ಏಳು ಬೀಳುಗಳನ್ನು ಹಾಗು ಭಾರತದ ರಾಜಕೀಯ ಚಿತ್ರವನ್ನು ಮತದಾನ , ತಂತು, ಮುಂತಾದ ಕಾದಂಬರಿಗಳು ಚಿತ್ರಿಸುತ್ತವೆ.

ಲೇಖಕರ ಉದ್ದೇಶವನ್ನು ತಿಳಿದುಕೊಂಡು, ಅವರ ಪ್ರಮುಖ ಕಾಳಜಿಗಳನ್ನು ಅರ್ಥ ಮಾಡಿಕೊಳ್ಳುವುದರ ಮೂಲಕ ಓದುಗ ಕೃತಜ್ಞತೆಯನ್ನು ಹೊಂದುತ್ತಾನೆ..

# ಅಧ್ಯಯನದ ಹಿಂದಿನ ನಿಲುವುಗಳು

ಭೈರಪ್ಪನವರು ಪ್ರಕಟಿಸಿದ ಅವರ ಎಲ್ಲ ಕಾದಂಬರಿಗಳಲ್ಲಿ ಭಾರತದ ಸಾಮಾಜಿಕ, ಧಾರ್ಮಿಕ, ರಾಜಕೀಯ, ಆರ್ಥಿಕ ಬದುಕಿನ ಸ್ಥಿತಿ - ಗತಿಗಳು ಚರ್ಚೆಗೆ ಒಳಪಟ್ಟಿವೆ. ಸಮಾಜದ ಓರೆ ಕೋರೆಗಳನ್ನು ಸಾಹಿತ್ಯದ ಮೂಲಕ ತಿದ್ದಬೇಕು ಎಂಬ ಉದ್ದೇಶದಿಂದ ಪ್ರಾರಂಭವಾದ ಅವರ ಬರವಣಿಗೆಯಲ್ಲಿ ಸಾಹಿತ್ಯೇತರ ಉದ್ದೇಶವು ಪ್ರವೇಶಿಸಿದ್ದು ಕಂಡು ಬರುತ್ತದೆ. ಸ್ವತಃ ಲೇಖಕರು ಈ ವಿಷಯವನ್ನು ಒಪ್ಪಿಕೊಳ್ಳುತ್ತಾರೆ. ಲೇಖಕನ ಅಂತರಂಗದಲ್ಲಿರುವ ಸಾಹಿತ್ಯೇತರ ವಿಷಯಗಳೇ ಅವರ ಕೃತಿಗಳಲ್ಲಿ ಪ್ರಧಾನ ಸ್ಥಾನವನ್ನು ಆಕ್ರಮಿಸಿಕೊಂಡದ್ದನ್ನು ಗುರುತಿಸಬಹುದು. ಕಾದಂಬರಿಗೆ ಆಯ್ದುಕೊಂಡ ವಿಷಯವನ್ನು ಪರಿಚಯಿಸುವ, ಬೆಳೆಸುವ, ಚಿಂತನೆಗೆ ಗುರಿಮಾಡುವ, ನಿರ್ಣಯದ ಹದಕ್ಕೆ ತರುವ ಕಲೆ ಭೈರಪ್ಪನವರಿಗೆ ಸಿದ್ಧಿಸಿದೆ. ಅವರು ಬಳಸುವ ಅಷ್ಟು ಸರಳವೂ ಅಲ್ಲದ. ಅಷ್ಟು ಕಠಿಣವೂ ಅಲ್ಲದ ಭಾಷೆ, ಕನ್ನಡದ ಓದುಗರೆಲ್ಲರಿಗೆ ಹಿಡಿಸಿದೆ. ಕಾದಂಬರಿಯಲ್ಲಿ ವಿಶೇಷ ಕುತೂಹಲವನ್ನುಂಟು ಮಾಡುವ ಅವರ ತಂತ್ರ ಇಷ್ಟವಾಗುತ್ತದೆ. ವಿಷಯದ ಬಗ್ಗೆ ಓದುಗರಿಗೆ ವಿಶೇಷ ಕಾಳಜಿಯನ್ನು ಬೆಳೆಸುತ್ತ ಅದರ ಬಗ್ಗೆಯೇ ಮಮಕಾರವನ್ನುಂಟು ಮಾಡುತ್ತ ಅದರ ವಿರುದ್ಧವಾದ ವಿಷಯವನ್ನು ಕಾದಂಬರಿಯ ಅಂತ್ಯದಲ್ಲಿ ಸ್ಫೋಟಕ ರೀತಿಯಲ್ಲಿ ಹೇಳುವುದು ಅವರ ವಿಶೇಷತೆಯಾಗಿದೆ.

ನನ್ನ ಬರವಣಿಗೆಯ ಗುರಿ ಏನು ? ಎನ್ನುವ ಪ್ರಶ್ನೆ ಅವರಿಗೆ ಕಾಡಿದಂತೆ ಭೈರಪ್ಪನವರು ಯಾವ ಉದ್ದೇಶಗಳಿಗಾಗಿ ಬರೆಯುತ್ತಾರೆ ಎಂಬ ಪ್ರಶ್ನೆ ವಿಮರ್ಶಕರನ್ನು, ಚಿಂತಕರನ್ನೂ ಕಾಡಿದೆ. ಅವರ ಧರ್ಮಶ್ರೀ, ತಬ್ಬಲಿಯು ನೀನಾದೆ ಮಗನೆ, ವಂಶವೃಕ್ಷ, ನಾಯಿ - ನೆರಳು, ಸಾರ್ಥ ಕಾದಂಬರಿಗಳು ಹಿಂದೂ ಸಮಾಜ, ವೈದಿಕ ಧರ್ಮ ಬದಲಾದ ಸಾಮಾಜಿಕ, ರಾಜಕೀಯ ಸಂದರ್ಭದಲ್ಲಿ ಎದುರಿಸುವ ಒಂದೊಂದು ಸಮಸ್ಯೆಯ ಎಳೆಗಳನ್ನು ಹಿಡಿದು ಚಿತ್ರಿತಗೊಂಡಿದೆ. ಅವರ ಈ ಎಲ್ಲ ಕಾದಂಬರಿಗಳಲ್ಲಿ ಉಪನಿಷತ್ತಿನ ಪ್ರಭಾವ ಎದ್ದು ಕಾಣುತ್ತದೆ. ವೇದಗಳ ಮೂಲ ಆಶಯಗಳನ್ನು ತಿಳಿಸುವ ಪ್ರಯತ್ನವನ್ನು ಅವರು ಮಾಡುತ್ತಾರೆ. ''ಸ್ಥಿತ್ಯಂತರ ಕಾಲದಲ್ಲಿ ಬದುಕುವ ವ್ಯಕ್ತಿಗಳ ನೋವು, ಘರ್ಷಣೆ ಮೊದಲಾದವುಗಳನ್ನು ಚಿತ್ರಿಸುವುದು ಸಾಹಿತ್ಯದ ಗುರಿಯಾಗಬೇಕೆಂದು'' ೭ ತಮ್ಮ ಬರವಣಿಗೆಯ ಉದ್ದೇಶವನ್ನು ಸ್ಪಷ್ಟಪಡಿಸಿಕೊಂಡ ಭೈರಪ್ಪನವರು ಈ ಹಿನ್ನೆಲೆಯಲ್ಲಿಯೇ 'ವಂಶವೃಕ್ಷ' ಕಾದಂಬರಿಯನ್ನು ರಚಿಸುತ್ತಾರೆ.

ಆಧುನಿಕ ವಿಚಾರಗಳಿಗೆ ತಕ್ಕ ಹಾಗೆ ಬದಲಾವಣೆಗೊಳ್ಳುತ್ತಿರುವ ಸಮಾಜದಲ್ಲಿ ಪಾರಂಪರಿಕ

ನಂಬಿಕೆಗಳು, ಆಚಾರ - ವಿಚಾರಗಳು ತೀವ್ರ ಬಿಕ್ಕಟ್ಟನ್ನು ಎದುರಿಸತೊಡುಗುತ್ತವೆ. ಯಾವುದು 'ಧರ್ಮ' ಎಂದು ಅರ್ಥವನ್ನು ಪಡೆದುಕೊಂಡಿರುತ್ತದೆಯೇ ಅದೇ ಬದಲಾದ ಸಮಾಜದಲ್ಲಿ 'ಅಧರ್ಮ' ಎಂಬ ರೂಪವನ್ನು ಪಡೆದುಕೊಳ್ಳುವ ಸಾಧ್ಯತೆಗಳು ಉಂಟು. ಅದಕ್ಕೆ ಮಹಾಭಾರತದ ಭೀಷ್ಮರಿಗೂ 'ಧರ್ಮ' ಪದದ ಅರ್ಥವನ್ನು ಸೂಚಿಸುವುದು ಕಷ್ಟಕರವಾಗಿ ತೋರುತ್ತದೆ. 'ಬಲಾಢ್ಯರು ಯಾವುದನ್ನು ಧರ್ಮವೆಂದು ತಿಳಿಯುತ್ತಾರೆಯೇ ಅದೇ ಧರ್ಮವಾಗುವ ' ಅಪಾಯವನ್ನು ಅವರು ದ್ರೌಪದಿಯ ವಸ್ತ್ರಾಪರಹರಣದ ಸಂದರ್ಭದಲ್ಲಿ ದ್ರೌಪದಿಯ ಪ್ರಶ್ನೆಗೆ ಉತ್ತರ ಹೇಳುವ ಸಂದರ್ಭದಲ್ಲಿ ತಿಳಿಸುತ್ತಾರೆ. ಯಾವುದನ್ನು ಒಬ್ಬ ಲೇಖಕ ಶ್ರೇಷ್ಠವೆಂದು ಭಾವಿಸುತ್ತಾನೆಯೋ? ಅದೇ ಜನಸಾಮಾನ್ಯರಿಗೆ ಅಷ್ಟೊಂದು ಮಹತ್ವದ ವಸ್ತುವಾಗಿ ತೋರದೇ ಹೋಗಬಹುದು. ಭೈರಪ್ಪನವರು ಪ್ರಸ್ತಾಪಿಸುವ 'ಧರ್ಮ'ದ ವ್ಯಾಪ್ತಿ ಯಾವುದು? ಭಾರತದ ಸಮಗ್ರ ಜನತೆಯ ಆಶಯಗಳನ್ನು ಅದು ಬಿಂಬಿಸುವ ವೈಶಾಲ್ಯತೆಯನ್ನು ಪಡೆದುಕೊಂಡಿದೆಯೇ? ಒಟ್ಟಾರೆ ಭೈರಪ್ಪನವರು ಯಾವ ಮನೋಧರ್ಮದ ಹಿನ್ನಲೆಯಲ್ಲಿ ತಮ್ಮ ಕೃತಿಗಳನ್ನು ರಚಿಸಿದ್ದಾರೆ ಎಂದು ಗುರುತಿಸುವುದು ಮಹತ್ವದ ಅಂಶವಾಗಿದೆ. ತಮ್ಮ ಪ್ರಾರಂಭಿಕ ಕೃತಿಗಳಲ್ಲಿ ತತ್ವ, ಆದರ್ಶ ಮೊದಲಾವುಗಳನ್ನೇ ಪ್ರಮುಖ ನೆಲೆಯಲ್ಲಿ ಸ್ವೀಕರಿಸಿ ಬರವಣಿಗೆಯ ರೂಪ ಕೊಟ್ಟಿರುವದು ಕಂಡು ಬರುತ್ತದೆ. ಆದರೆ ಅವರ ಮನೋಭೂಮಿಕೆಯಲ್ಲಿ ಉಂಟಾದ ನಿರಂತರ ಅನ್ವೇಷಣೆಯ ಫಲವಾಗಿ ಮತ್ತೊಮ್ಮೆ ತಮ್ಮ ಬರವಣಿಗೆಯ ಉದ್ದೇಶ ಯಾವುದು? ಎಂಬ ಚಿಂತನೆಗೆ ಒಳಗಾಗುತ್ತಾರೆ. ''ನೇರವಾಗಿ ಜೀವನವನ್ನು ನೋಡಿ ಅದರ ನಾಡಿಯ ಮಿಡಿತವನ್ನು ಸಾಹಿತ್ಯದಲ್ಲಿ ಮೂಡಿಸುವುದೇ ಬರವಣಿಗೆಯ ಗುರಿಯಾಗಬೇಕು... ಸತ್ಯಾನ್ವೇಷಣೆಯೇ ಬರವಣಿಗೆಯ ಗುರಿಯಾಗಬೇಕು ಎಂಬ ದೃಷ್ಟಿ ''ಯಿಂದ ಕೃತಿ ರಚನೆಗೆ ತೊಡಗಿದುದು ಕಂಡು ಬರುತ್ತದೆ. ಭೈರಪ್ಪನವರ ಸೃಜನಶೀಲ ಕ್ರಿಯೆ ಸಮೃದ್ಧವಾದದು. ಹಲವಾರು ಕಾದಂಬರಿಗಳಿಗೆ ಆಯ್ದುಕೊಂಡ 'ವಸ್ತು' ಪ್ರಧಾನವಾಗಿ ಭಾರತೀಯ ಸಮಾಜದಲ್ಲಿ ಅನ್ಯ ಸಂಸ್ಕೃತಿಗಳ ಆಗಮನದಿಂದ ಉಂಟಾದ ಸಮಸ್ಯೆಗಳ ಸ್ವರೂಪವನ್ನು ವಿಶ್ಲೇಷಿಸುವುದೇ ಆಗಿದೆ. ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಅವರನ್ನು ಆಕರ್ಷಿಸಿದ್ದು ಕಾದಂಬರಿ ಪ್ರಕಾರ ಅವರೆ ತಮ್ಮ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯನ್ನು ಸ್ವಿಕರಿಸವ ಸಂದರ್ಭದ ಭಾಷಣದಲ್ಲಿ ಈ ರೀತಿ ಹೇಳುತ್ತಾರೆ ''ಸಾಹಿತ್ಯ ಪ್ರಕಾರಗಳಲ್ಲೆಲ್ಲಾ ಕಾದಂಬರಿಯು ಅತ್ಯಂತ ಉಪಯುಕ್ತವಾದದು ಎಂಬುದನ್ನು ಕಂಡುಕೊಂಡೆ . ಏಕೆಂದರೆ ಅದು ಬದುಕಿಗೆ ತೀರ ಹತ್ತಿರವಾದುದು, ಬದುಕಿನ ಎಲ್ಲಾ ಮುಖಗಳನ್ನು ಪರೀಕ್ಷಿಸಲು, ನಿರೂಪಿಸಲು ಅತ್ಯಂತ ವ್ಯಾಪಕವಾದ ಅವಕಾಶವನ್ನು ನೀಡುವಂಥಹದು ಓದುಗರೊಂದಿಗೆ ಅತ್ಯಂತ ಸುಲಭವಾದ, ನೇರವಾದ ಹೃದಯ ಸಂವಾದವನ್ನು ಸ್ಥಾಪಿಸಿರುವ ಸಾಹಿತ್ಯ ಪ್ರಕಾರ ಅದು. ಆದ್ದರಿಂದ ನಾನು ಕಾದಂಬರಿಗಳ ಮೂಲಕ ನನ್ನ ಅನ್ವೇಷಣೆ ಪ್ರಾರಂಭಿಸಿದೆ. ನನ್ನನ್ನು ಕಾಡುತ್ತಿದ್ದ ಕೆಲವು ಸಮಸ್ಯೆಗಳನ್ನೂ ಅನುಭವ ಕ್ಷೇತ್ರಗಳನ್ನು ಆಳವಾಗಿ ಪರೀಕ್ಷಿಸಲು ಪ್ರಯತ್ನಿಸಿದೆ. ಈ ಕ್ರಮ ಒಂದು ಆತ್ಮ ಶೋಧನೆಯಾಯಿತು. ಪ್ರತಿ ಕಾದಂಬರಿಯು ನನ್ನನ್ನು ರಹಸ್ಯದ ಕೇಂದ್ರಕ್ಕೆ ಒಂದೆಹೆಜ್ಜೆ ಹತ್ತಿರ ಒಯ್ದಿದೆ. ಜೀವನದ ಸಂಕೀರ್ಣ ರಚನೆ ಹಾಗೂ ಅರ್ಥಗಳ ಹೆಚ್ಚಿನ ಅರಿವು ನೀಡಿದೆ. '' ಈ ರೀತಿ ತಮ್ಮ ಸೃಜನಶೀಲ ಕ್ರಿಯೆಗೆ ಕಾದಂಬರಿಯು ಉಪಯುಕ್ತವಾದದು ಎಂದು ಆಯ್ಕೆಮಾಡಿಕೊಂಡ ಭೈರಪ್ಪನವರು ಓದುಗರೊಂದಿಗೆ ಹೃದಯ ಸಂವಾದವನ್ನು

ಏರ್ಪಡಿಸಿಕೊಂಡಿರುವುದು ಅವರ ಕಾದಂಬರಿಗಳಿಗೆ ದೊರೆತ ಅಪಾರ ಜನಪ್ರಿಯತೆಯಿಂದ ಸಾಬೀತಾಗಿದೆ. ಅವರದು ಕೇವಲ ರಂಜಿಸುವ ಬರವಣಿಗೆಯಂತೂ ಅಲ್ಲ. ನಿರೂಪಣಾ ವಿಧಾನ ಸಶಕ್ತವಾದದು. ವೈದಿಕ ಧರ್ಮದ ವಿಚಾರಗಳ ಬಗ್ಗೆ ಅಪಾರವಾದ ಗೌರವ ಮೂಡುವಂತೆ ವಿಷಯಗಳ ಮಂಡನೆ ಮಾಡಿರುವುದು, ಅವರ ಕಾದಂಬರಿಯಲ್ಲಿ ಎದ್ದು ಕಾಣುವ ವಿಚಾರವಾಗಿದೆ. ಧರ್ಮ, ಕಾಮ, ನೀತಿ, ಮೌಲ್ಯಗಳು ಬದಲಾಗುತ್ತಿರುವ ಸಮಾಜದಲ್ಲಿ ಪಡೆದುಕೊಳ್ಳುತ್ತಿರುವ ಸ್ಥಾನ ಮತ್ತು ಶೋಧನೆಗೆ ಒಳಪಟ್ಟಿವೆ. ಅವರ ಸೃಜನಶೀಲ ಕ್ರಿಯೆ ಬತ್ತದ ತೊರೆಯಂತೆ ಸಾಗುತ್ತಿದೆ. ಅವರ ಎಲ್ಲಾ ಕೃತಿಗಳಲ್ಲೂ ಸಾಮಾಜಿಕ ಬದಲಾವಣೆ ಅಷ್ಟು ತೀವ್ರವಾಗಿ ಆಗುವಂತದಲ್ಲ ಎನ್ನುವ ಅಭಿಪ್ರಾಯ ಕಂಡು ಬರುತ್ತದೆ. ಭೈರಪ್ಪನವರು ತಮ್ಮ ಕಾದಂಬರಿಗಳಲ್ಲಿ ಸಮಕಾಲೀನ ವ್ಯವಸ್ಥೆಗಳನ್ನು ಪಾರಂಪರಿಕ ನೆಲೆಯಿಂದ ವ್ಯಾಖ್ಯಾನಿಸುವ ಉದ್ದೇಶವನ್ನು ಹೊಂದಿದ್ದಾರೆ. ಭಾರತೀಯರು ತಮ್ಮ ಸಂಸ್ಕೃತಿ ಮತ್ತು ಪರಂಪರೆಯ ಮೂಲಕವೇ ತಮ್ಮ ಬದುಕನ್ನು ರೂಪಿಸಿಕೊಳ್ಳಲು ಅತ್ಯುತ್ತಮ ಸಾಧ್ಯತೆಗಳಿರುವುದರ ಕಡೆಗೆ ಗಮನವನ್ನು ಸೆಳೆಯುವ ಪ್ರಯತ್ನವಿದೆ. ಅವರ ಕಾದಂಬರಿಗಳಲ್ಲಿ ವೈಚಾರಿಕತೆಯು ತೀರ ಸೂಕ್ಷ್ಮ ಸ್ತರಗಳಲ್ಲಿ ನೆಲೆಪಡೆದುಕೊಳ್ಳುತ್ತ ಸಾಗಿ ಪ್ರತಿಗಾಮಿ ಅಂಶಗಳತ್ತ ವಾಲುತ್ತಿದೆಯೇ ? ಎಂಬ ವಿಚಾರ ಮಹತ್ವದ್ದಾಗಿದೆ. ವಂಶವೃಕ್ಷದ ಕಾತ್ಯಾಯನಿಯ ಸೋಲು, 'ದಾಟು' ಕಾದಂಬರಿಯ ಸತ್ಯಳ ಸೋಲು, 'ಸಾರ್ಥ'ದಲ್ಲಿ ಬೌದ್ಧ ಧರ್ಮಕ್ಕೆ ಉಂಟಾದ ಹಿನ್ನಡೆ, 'ಸಾಕ್ಷಿ' ಕಾದಂಬರಿಯಲ್ಲಿ ಮಂಜಯ್ಯನಂಥ ವಿಕೃತಕಾಮ ಪ್ರತೀಕ ಪಡೆದುಕೊಳ್ಳುವ ವ್ಯಾಪಕತೆ ವಿಶೇಷವಾಗಿ ಅಧ್ಯಯನಕ್ಕೆ ಒಳಪಡಿಸುವ ಸಂಗತಿಗಳಾಗಿವೆ.

ಭೈರಪ್ಪನವರು ತಮ್ಮ ಪ್ರತಿಯೊಂದು ಕೃತಿಯನ್ನು ರಚಿಸುವಾಗ ಆ ಕೃತಿಗೆ ಬೇಕಾದ ಸಮಗ್ರ ಸಿದ್ಧತೆಯನ್ನು ಮಾಡಿಕೊಂಡಿರುತ್ತಾರೆ. ಆಯ್ಕೆಮಾಡಿದ ವಸ್ತುವಿಗೆ ಅಗತ್ಯವಿದ್ದ ತಾತ್ವಿಕ, ಧಾರ್ಮಿಕ, ರಾಜಕೀಯ ವಿಚಾರಗಳು ಸ್ಪುಟವಾಗಿ, ಸಮಗ್ರವಾಗಿ ಅನುಭವದ ಹಿನ್ನಲೆಯಲ್ಲಿ ಚಿತ್ರಣಗೊಂಡಿವೆ. ಒಂದು ಸಂಸ್ಕೃತಿ ತನ್ನ ಅಸ್ತಿತ್ವಕ್ಕಾಗಿ, ಉಳಿವಿಗಾಗಿ ಬೇರೆ ಸಂಸ್ಕೃತಿಗಳಿಂದ ಎದುರಾಗುವ ಸವಾಲನ್ನು ಎದುರಿಸುವ ಒಳನೋಟಗಳು ಕಾದಂಬರಿಯಲ್ಲಿ ದೊರೆಯುತ್ತವೆ. ಹೊಸ ಕಾಲದ ಅಗತ್ಯಗಳನ್ನು ಚರ್ಚೆಗೆ ಎತ್ತಿಕೊಂಡು ಆ ಹಂತದಲ್ಲಿ ನಡೆಯುವ ಮೌಲ್ಯಗಳ ಸಂಘರ್ಷ ಯಾವ ಪರಿಯದು ಎಂದು ಅರ್ಥೈಸುವ ಪ್ರಯತ್ನವನ್ನು ನಾವು ಭೈರಪ್ಪನವರ ಕಾದಂಬರಿಗಳಲ್ಲಿ ಗುರುತಿಸಬಹುದು. ಬ್ರಾಹ್ಮಣ ಸಂಸ್ಕೃತಿ ಆಧುನಿಕತೆಗೆ ಬದಲಾಗುವ ಪರಿಣಾಮವನ್ನು ಅನಂತಮೂರ್ತಿಯವರ ಸಂಸ್ಕಾರ ಕಾದಂಬರಿಯಲ್ಲಿ ನೋಡಬಹುದು. ಆದರೆ ಭೈರಪ್ಪನವರ ಕಾದಂಬರಿಗಳಲ್ಲಿ ಇದೇ ಬ್ರಾಹ್ಮಣ ಸಂಸ್ಕೃತಿ ಆಧುನಿಕತೆಗೆ ಬದಲಾಗುವ ಸಂಘರ್ಷವನ್ನು ಅನುಭವಿಸಿ, ಮತ್ತೆ ಸಂಪ್ರದಾಯ, ಪರಂಪರೆಗೆ ಹಿಂತಿರುಗುವ ಪರಿಣಾಮಗಳಿವೆ.

ಭಾರತಕ್ಕೆ ಇಸ್ಲಾಂನ ಆಗಮನ, ಪಾಶ್ಚಿಮಾತ್ಯರ ಆಗಮನ, ಇಂಗ್ಲೀಷ ಭಾಷೆಯ ಆಗಮನ ಮಹತ್ವದ ಪರಿಣಾಮಗಳನ್ನು ತಂದಿತು. ಭಾರತದ ಸಂಸ್ಕೃತಿಯು ತನ್ನ ಜೀವಂತಿಕೆಯನ್ನು ಪ್ರಕಟಿಸಲು ಹಲವು ಮಾರ್ಗಗಳನ್ನು ಉದ್ದಕ್ಕೂ ಅನುಸರಿಸಿಕೊಂಡು ಬಂದಿದೆ. ವೈದಿಕ ಧರ್ಮದ ನಂತರ, ಶ್ರಮಣ ಧರ್ಮ ವೈದಿಕೇತರ ಧರ್ಮಗಳೆಂದು ಕರೆಸಿಕೊಂಡ ಬೌದ್ಧ ಧರ್ಮ, ಜೈನ ಧರ್ಮಗಳಿಂದಲೂ ಈ ಸಂಸ್ಕೃತಿ ತನ್ನ ಜೀವಂತಿಕೆಗಾಗಿ ಸ್ವೀಕರಣ, ನಿರಾಕರಣ ಕ್ರಿಯೆಯನ್ನು ಅನುಸರಿಸಿಕೊಂಡು ಬಂದಿತು. ಇಸ್ಲಾಂ, ಕ್ರಿಶ್ಚಿಯನ್

ಧರ್ಮಗಳ ಆಗಮನದಿಂದಲೂ ಈ ಸ್ವೀಕರಣ, ನಿರಾಕರಣ ಕ್ರಿಯೆ ಜರುಗುತ್ತ ಬಂದಿದೆ. ಹೀಗಾಗಿ ಹಲವು ಕಾಲದಲ್ಲಿ ಹಲವಾರು ಪ್ರಭಾವ ಪ್ರೇರಣೆಗಳಿಗೆ ಒಳಗಾಗುತ್ತ ಬಂದ ಭಾರತದ ಸಂಸ್ಕೃತಿಗೆ ತನ್ನ ಮೂಲ ಸ್ವರೂಪದಲ್ಲಿ ಬದಲಾವಣೆಯನ್ನು ತಂದುಕೊಳ್ಳುವುದು ಅನಿವಾರ್ಯವಾಯಿತು. ಇಂಥ ಸಂದರ್ಭದಲ್ಲಿ ಭಾರತೀಯರ ಜೀವನ ವೈಶಿಷ್ಟ್ಯಗಳು ಮರೆಯಾಗುವ ಪ್ರಕ್ರಿಯೆ ಪ್ರಾರಂಭವಾಯಿತು. ಜೀವನ ಮೌಲ್ಯಗಳು ಮರೆಯಾಗಹತ್ತಿದವು. ಪ್ರತಿಯೊಂದು ವ್ಯವಹಾರಿಕ ನೆಲೆಗೆ ಪಲ್ಲಟಗೊಳ್ಳುವುದು ಪ್ರಾರಂಭವಾಯಿತು. ವ್ಯವಹಾರಿಕ ನೆಲೆಯ ಮೇಲೆಯೇ ಕಟ್ಟಲ್ಪಟ್ಟ ಬದುಕಿನ ದುರಂತವನ್ನು ಶೋಧಿಸುವ ಕಾರ್ಯವನ್ನು ಭೈರಪ್ಪನವರ ಕಾದಂಬರಿಗಳು ಪರಿಣಾಮಕಾರಿಯಾಗಿ ಮಾಡುತ್ತವೆ.

ಭೈರಪ್ಪನವರ ಬರವಣಿಗೆಗೆ ಅವರದೇ ಆದ ಧೋರಣೆ ಇದೆ. ಯಾವ ವಿಮರ್ಶಕ ಏನೇ ಹೇಳಿದರೂ ಅವರು ತಮ್ಮ ಮೂಲ ಉದ್ದೇಶದಿಂದ ವಿಚಲಿತರಾದಂತೆ ಕಂಡುಬರುವುದಿಲ್ಲ. ವಿಮರ್ಶೆಯನ್ನು ಗಮನಿಸುತ್ತಾರೆ, ಆದರೆ ಆ ವಿಮರ್ಶೆಯ ಬಗ್ಗೆ ಅಸಮಾಧಾನವು ಇದೆ. ''ಭೈರಪ್ಪನವರು ಪ್ರತಿಗಾಮಿ, ಪ್ರಗತಿ ವಿರೋಧಿ ಆದುದರಿಂದ ಅಪಾಯಕಾರಿ ಲೇಖಕ ಎಂಬ ಪ್ರಚಾರವನ್ನು ಕೆಲವರು ತಮ್ಮ ಸ್ವಂತ ದಂದೆಯಾಗಿಯೆ ಮಾಡಿಕೊಂಡಿರುವುದು ನನಗೆ ಗೊತ್ತಿದೆ, ವೈದಿಕ ಮೌಲ್ಯ ಪರಿವರ್ತನೆಗೆಂದೇ ಇವರು ಕೃತಿ ರಚನೆ ಮಾಡುತ್ತಾರೆ. ಎಂಬ ಜಗುದ್ಗರು ಆಚಾರ್ಯತ್ವವನ್ನು ಒಂದೆರೆಡು ಓಣಿಯವರು ನನಗೆ ಕೊಟ್ಟಿದ್ದಾರೆ. ಸಾಹಿತ್ಯ ಕೃತಿಗಳನ್ನು ಸಾಹಿತ್ಯೇತರ ದೃಷ್ಟಿಗಳಿಂದ ವಿಮರ್ಶಿಸುವ ಮಾತುಗಳಿಗೆ ನಾನು ಯಾವ ಬೆಲೆಯನ್ನು ಕೊಡುವುದಿಲ್ಲ.'' ಎಂದು ಭೈರಪ್ಪನವರೇ ವಿಮರ್ಶೆಯನ್ನು ಉಪೇಕ್ಷಿಸುವ ನಿಲುವನ್ನು ತಾಳಿರುವುದು ಕಂಡು ಬರುತ್ತದೆ.

ಭೈರಪ್ಪನವರ ಕಾದಂಬರಿಗಳಲ್ಲಿ ಬಡತನ, ಅಜ್ಞಾನ, ಶೋಷಣೆ ಮುಂತಾದವುಗಳ ಚಿತ್ರಣ ದೊರೆಯುತ್ತದೆ. ಅವರ ದಾಟು, ಗೃಹಭಂಗ, ವಂಶವೃಕ್ಷ, ಮತದಾನ ಮುಂತಾದ ಕಾದಂಬರಿಗಳಲ್ಲಿ 'ವಾಸ್ತವತೆ'ಯ ಪರಿಣಾಮ ದಟ್ಟವಾಗಿ ಚಿತ್ರಣಗೊಂಡಿದೆ. ಆದರೆ 'ನಾಯಿ -ನೆರಳು' ಅವಾಸ್ತವವಾದ, ಅವೈಜ್ಞಾನಿಕವಾದ ವಿಷಯವನ್ನು ಚಿತ್ರಿಸುವ ಪ್ರಯತ್ನವಾಗಿದೆ.ತಾವು ಒಪ್ಪಿಕೊಂಡ ಮೌಲ್ಯಗಳು ಶ್ರೇಷ್ಠವೆಂದು ಸಾಧಿಸುವ ಬರದಲ್ಲಿ ಕಾತ್ಯಾಯನಿಯ ಪಾತ್ರವನ್ನು, ಕಾಳಿಂಗನ ಪಾತ್ರವನ್ನು, ಸಾರ್ಥದಲ್ಲಿ ಬೌದ್ಧ ಧರ್ಮದ ಸ್ಥಾನವನ್ನು ಗೌಣಗೊಳಿಸಿರುವುದು ತೋರುತ್ತದೆ. ತಮ್ಮದೇ ಆದ ಮೌಲಿಕ ನಿರ್ಣಯ ಮತ್ತು ಉಪಸಂಹಾರಗಳನ್ನು ಕಾದಂಬರಿಗೆ ಒದಗಿಸುವುದರಿಂದ ಓದುಗರ ಮೇಲೆ ತಮ್ಮ ಧೋರಣೆಗಳನ್ನು ಹೇರುತ್ತಾರೆ ಎಂಬ ಭಾವನೆ ಕಾಡುತ್ತದೆ.

ಭೈರಪ್ಪನವರ ಕಾದಂಬರಿಗಳಲ್ಲಿ ಪ್ರಧಾನವಾಗಿ ಬ್ರಾಹ್ಮಣ ಸಮಾಜದ ಚಿತ್ರಣವಿದೆ. ಭಾರತದಲ್ಲಿಯೇ ಅತ್ಯಂತ ಮುಂದುವರೆದ ವರ್ಗವೆಂದು ಗುರುತಿಸುವ ಬ್ರಾಹ್ಮಣ ಸಮಾಜದಲ್ಲಿ ಬಡತನದಿಂದ ನರಳುವ ಕುಟುಂಬಗಳಿವೆ ಎಂಬ ವಾಸ್ತವ ಚಿತ್ರಣವನ್ನು 'ಗೃಹಭಂಗ' ಕಾದಂಬರಿಯಲ್ಲಿ ಕಾದಂಬರಿಕಾರರು ಹೃದಯಂಗಮವಾಗಿ ಚಿತ್ರಿಸಿದ್ದಾರೆ. ಕಥನ ಮಾರ್ಗದ ವೈವಿಧ್ಯವನ್ನು, ಅವರ ಕಾದಂಬರಿಗಳಲ್ಲಿ ಗುರುತಿಸಿಬಹುದು. ಪೌರಾಣಿಕ ಸಂಗತಿಗಳನ್ನು, ಗಾದೆ ಮಾತುಗಳನ್ನು ಹೇರಳವಾಗಿ ತಮ್ಮ ಕಾದಂಬರಿಗಳಲ್ಲಿ ಬಳಸಿಕೊಂಡಿದ್ದಾರೆ. ಪ್ರತಿಯೊಂದು ಕಾದಂಬರಿಯು ಅವರ ಜ್ಞಾನ ಮತ್ತು ಅನುಭವಗಳ

ಸಂಗಮ. ಸಾಂಪ್ರದಾಯಕ ಮೌಲ್ಯಗಳಿಗೂ ಆಧುನಿಕ ಮೌಲ್ಯಗಳಿಗೂ ಏರ್ಪಡುವ ಸಂವಾದಗಳನ್ನು ಅವರ ತಬ್ಬಲಿಯು ನೀನಾದೆ ಮಗನೆ, ವಂಶವೃಕ್ಷ ಮುಂತಾದ ಕಾದಂಬರಿಗಳಲ್ಲಿ ನೋಡುತ್ತೇವೆ.

ಭೈರಪ್ಪರವರ ಕಾದಂಬರಿಗಳಲ್ಲಿ ಹೆಚ್ಚಾಗಿ ಬ್ರಾಹ್ಮಣ ಸಮಾಜದ ಪಾತ್ರಗಳೇ ತುಂಬಿಕೊಂಡಿವೆ. ಶ್ರೀನಿವಾಸ ಶೋತ್ರಿಯಂಥ ಬೌದ್ಧಿಕ ಪರಕಾಷ್ಠೆಯನ್ನು ತಲುಪಿಸಿದ ವ್ಯಕ್ತಿ ಒಂದು ಕಡೆ ಇದ್ದರೆ, ಸೋಮಾರಿ ಚೆನ್ನಿಗರಾಯನಂಥ ಪಾತ್ರಗಳು ಇವೆ. ಪಾರಂಪರಿಕ ಮೌಲ್ಯಗಳ ಕುಣಿಕೆಗೆ ಸಿಕ್ಕು ಸೊರಗಿ, ಕೊರಗಿ ಪ್ರಾಣತ್ಯಾಗ ಮಾಡುವ ಕಾತ್ಯಾಯನಿ ಒಂದು ಕಡೆ. ಏನೆಲ್ಲಾ ಮಾನಸಿಕ ನೋವುಗಳಿದ್ದರೂ ಬದುಕನ್ನು ಗೆಲ್ಲುವ ಛಲ ತೋರಿಸುವ ಅಮೃತಾ ಮತ್ತೊಂದು ಕಡೆ ಸಮರ್ಥವಾಗಿ ಚಿತ್ರಣಗೊಂಡಿದ್ದಾರೆ.



---

**ಅಡಿಟಿಪ್ಪಣಿಗಳು**

೧. ಕನ್ನಡ ಸಾಹಿತ್ಯಮೀಮಾಂಸೆ : ಸಂ: ರಹಮತ್ ತರಿಕೆರೆ ಟಿಪ್ಪಣಿ ಬರಹ, ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾಲಯ ಹಂಪಿ - , ಪು.೩೨೦,

೨. ಕೃತಿ ಅದೇ ಪು.೩೧೫

೩. ರೂಪ ಸ್ವರೂಪ : ವಿಠ್ಠಲರಾವ್.ಟಿ. ಪುಟ :೪.

೪. ಶ್ರೀನಿವಾಸ ಹಾವನೂರು ; ಹೊಸಗನ್ನಡ ಅರುಣೋದಯ

೫. ಜಿ. ಎಸ್. ಅಮೂರ ಕನ್ನಡ ಕಥನ ಸಾಹಿತ್ಯ ಕಾದಂಬರಿ

೬. ಬರಗೂರ ರಾಮಚಂದ್ರಪ್ಪ ಸಂಸ್ಕೃತಿ ಶ್ರಮ ಮತ್ತು ಸೃಜನಶೀಲತೆ

೭. ನಾನೇಕೆ ಬರೆಯುತ್ತೇನೆ ಪು -೨, ಶ್ರಮ ಮತ್ತು ಸೃಜನಶಿಲತೆ

೮. ಕೃತಿ ಅದೇ ಪು -೬

# ಅಧ್ಯಾಯ ೨

೨.೧ ಸಂಸ್ಕೃತಿ ಕುರಿತ ಚಿಂತನೆಗಳು

೨.೨ ಸಂಸ್ಕೃತಿಯ ಮಹತ್ವ ಮತ್ತು ಸ್ವರೂಪ

೨.೩ ಕರ್ನಾಟಕ ಸಂಸ್ಕೃತಿಯ ವಿಚಾರಗಳು

೨.೪ ಭಾರತೀಯ ಸಂಸ್ಕೃತಿಯ ವಿಚಾರಗಳು

# ಸಂಸ್ಕೃತಿ ಎಂದರೇನು ?

ಶಿಲಾಯುಗದ ಮನುಷ್ಯನಿಂದ ಆಧುನಿಕ ಕಾಲದ ಮನುಷ್ಯನವರೆಗೆ ಅವರ ಜೀವನ ವಿಧಾನಗಳಲ್ಲಿ ಅಪಾರವಾದ ಬದಲಾವಣೆಯನ್ನು ಗುರುತಿಸಬಹುದಾಗಿದೆ. ಪ್ರಾಣಿ ಸಮುದಾಯದಲ್ಲಿ ಒಬ್ಬನಾಗಿದ್ದ ಮಾನವ ತನ್ನದೇ ಆದ ಆಲೋಚನೆಗಳಿಂದ, ಅವಿಷ್ಕಾರಗಳಿಂದ ಈ ಪ್ರಪಂಚದ ಜೀವ ಸಮುದಾಯದಲ್ಲಿ ವಿಶಿಷ್ಟವೂ ವಿಭಿನ್ನವೂ ಆಗಿದ್ದಾನೆ. ಹಲವು ಕಾಲ ಘಟ್ಟಗಳಲ್ಲಿ ತನ್ನದೇ ಆದ ಸಂಸ್ಕೃತಿ ಮತ್ತು ನಾಗರಿಕತೆಗಳ ಉಗಮಕ್ಕೆ, ವಿಕಾಸಕ್ಕೆ ಕಾರಣನಾಗಿದ್ದಾನೆ. ಒಂದೊಂದು ಪ್ರದೇಶವೂ ಭಾಷೆ, ಸಂಪ್ರದಾಯ, ಆಚಾರ - ವಿಚಾರ, ವೇಷ - ಭೂಷಣಗಳು, ಸಾಹಿತ್ಯ, ಕಲೆ ಮುಂತಾದ ಪರಿಕರಣಗಳಿಂದ ಭಿನ್ನತೆಯನ್ನು ಪಡೆದುಕೊಂಡಿವೆ. ಈ ಭಿನ್ನತೆಯ ಆಧಾರಗಳಿಂದ ಆಯಾ ಪ್ರದೇಶದ ಸಂಸ್ಕೃತಿಯನ್ನು ವಿಶೇಷವಾಗಿಯೇ ಗುರುತಿಸಲಾಗುತ್ತಿದೆ. ಪೌರ್ವಾತ್ಯ ಸಂಸ್ಕೃತಿ, ಪಾಶ್ಚಾತ್ಯ ಸಂಸ್ಕೃತಿ, ಹಿಂದೂ ಸಂಸ್ಕೃತಿ, ಮುಸ್ಲಿಂ ಸಂಸ್ಕೃತಿ ಕರ್ನಾಟಕ ಸಂಸ್ಕೃತಿ, ಭಾರತೀಯ ಸಂಸ್ಕೃತಿ, ಶಿಲಾಯುಗದ ಸಂಸ್ಕೃತಿ, ಆಧುನಿಕ ಸಂಸ್ಕೃತಿ, ವೈದಿಕ ಸಂಸ್ಕೃತಿ ಹೀಗೆ ಭಿನ್ನ ಭಿನ್ನ ನೆಲೆಗಳಲ್ಲಿ 'ಸಂಸ್ಕೃತಿ' ಯನ್ನು ಗುರುತಿಸುವದನ್ನು ಮತ್ತು 'ಸಂಸ್ಕೃತಿ' ಶಬ್ದದ ಬಳಕೆಯನ್ನು ಕಾಣುತ್ತೇವೆ. ಸಂಸ್ಕೃತಿ ನಾಗರಿಕತೆಗಿಂತ ಪ್ರಾಚೀನವಾದುದು ಎಂಬ ಅಭಿಪ್ರಾಯವೂ ಇದೆ. 'ಸಂಸ್ಕೃತಿ' ಎಂಬ ಶಬ್ದ ವಿವಿಧ ಅರ್ಥವನ್ನು ಪಡೆಯುತ್ತಾ ಬಂದಿರುವುದನ್ನು ವಿವಿಧ ವಿದ್ವಾಂಸರ ಅಭಿಪ್ರಾಯಗಳಿಂದ ತಿಳಿಯ ಬಹುದಾಗಿದೆ.

'ಸಂಸ್ಕೃತಿ' ಎಂಬ ಶಬ್ದವನ್ನು ಇಂಗ್ಲಿಷಿನ 'Culture' ಎಂಬ ಪದಕ್ಕೆ ಸಂವಾದಿಯಾಗಿ ಉಪಯೋಗಿಸಲಾಗುತ್ತಿದೆ. 'Culture' ಎಂಬುದರ ಮೂಲ ರೂಪ ಲ್ಯಾಟಿನ್ ಭಾಷೆಯ 'Cult' ಅಥವಾ ಕಲ್ಟಸ್ ಎಂಬುದು. ಈ ಪದದ ಮೂಲಾರ್ಥ ಗೌರವಿಸು, ಆರಾಧಿಸು, ಸೇವೆ ಮಾಡು ಮುಂತಾದ ಅರ್ಥಗಳನ್ನು ಇದು ಕೊಡುತ್ತದೆ. ಆ ಮಾತಿನಿಂದ ಕ್ರಮೇಣ ಎರಡು ಅರ್ಥಗಳು ಹೊರಟವು

೧) ದೈವ ಭಕ್ತಿ ವ್ರತದೀಕ್ಷೆ, ಮತ ಸಿದ್ಧಾಂತ
೨) ಭೂದೇವಿಯ ಆರಾಧನೆ, ಕೃಷಿ ಎಂಬ ಅರ್ಥವನ್ನು ಪಡೆಯಿತು. ೧

'Culture' ಈ ಶಬ್ದವು ರೂಢಿಗೆ ಬಂದಿರುವುದು ಸುಮಾರು ೧೫೦ ವರ್ಷಗಳಿಂದ ಎಂದು ಡಿ.ವಿ.ಜಿ. ಯವರು ಗುರುತಿಸಿದ್ದಾರೆ. ಕಲ್ಟಸ್ ಎಂಬ ಪದಕ್ಕೆ 'ವ್ಯವಸಾಯ' ಎಂಬ ಅರ್ಥ ಪ್ರಾಪ್ತವಾದ ನಂತರ 'ಅಗ್ರಿಕಲ್ಚರ್' ಸೀರಿ ಕಲ್ಚರ್, ಟಿಶ್ಯೂ ಕಲ್ಚರ್ ಎಂಬ ಪದಗಳ ಬಳಕೆಯೂ ಪ್ರಾರಂಭವಾಗಿರಬೇಕು.

''ಕಲ್ಚರ ಎಂಬುದು ಒಂದು ಬಗೆಯ ವ್ಯವಸಾಯವೇ, ಭೂಮಿಯನ್ನು ಉತ್ತಿ ಬಿತ್ತಿ ನೀರು ಗೊಬ್ಬರ ಹಾಕಿ ಹಸನು ಮಾಡುವಂತೆ ಮನುಷ್ಯನಲ್ಲಿರುವ ವಿಶೇಷವಾದ ಶಕ್ತಿಗಳು ಮೊಳಕೆಯೊಡೆದು ಬೆಳೆಯುವದಕ್ಕಾಗಿ ಮಾಡಬೇಕಾದ ಅಂತರಂಗದ ವ್ಯವಸಾಯ ಸಂಸ್ಕೃತಿ'' ೨ ಎಂದು ಡಾ॥ ಎಚ್. ತಿಪ್ಪೆರುದ್ರಸ್ವಾಮಿಯವರು ಅಭಿಪ್ರಾಯ ಪಡುತ್ತಾರೆ.

ಪ್ರಾರಂಭದಲ್ಲಿ ಸಂಸ್ಕೃತಿಯೆಂದರೆ ಮತಧರ್ಮಗಳ ಆಚರಣೆ ವ್ರತ ದೀಕ್ಷೆಗಳು, ಸಂಪ್ರದಾಯಗಳು, ನಂಬಿಕೆಗಳು ಎನ್ನುವ ಅರ್ಥದಲ್ಲಿಯೇ ಅರ್ಥ ವಿವರಣೆ ನೀಡಲಾಗಿದೆ. Cult ಎಂಬ ಪದಕ್ಕೆ ಇರುವ ಅರ್ಥವನ್ನು ಈ ಸಂದರ್ಭದಲ್ಲಿ ನಾವು ಗಮನಿಸುವುದು ಯೋಗ್ಯವಾಗಿದೆ. ಆ ಅರ್ಥವಿವರಣೆ ಕೆಳಗಿನಂತಿದೆ. ಕ್ಯಾಂಬ್ರಿಜ್ ವಿಶ್ವಕೋಶದಲ್ಲಿ ಈ ರೀತಿ ಅರ್ಥ ವಿವರಣೆ ಇದೆ

Cult : Any set of beliefs and praetices associated with
a particular god or group of gods forming
a distinetive past of a larger religious body
The focus of the Worship or devotion of a
cult is usually a god or gods, Sprit or Spirits,
associated with particular objcets and places,
The focas of devotion may be an animal
a particular deity or even a deified human being -3

ಗುಹೆಯಲ್ಲಿ ವಾಸಮಾಡುತ್ತಿದ್ದ ಮಾನವ ತನ್ನದೇ ಆದ ನಂಬಿಕೆಗಳನ್ನು ಆಚರಣೆಗಳನ್ನು ಹೊಂದುತ್ತಾ ಅಂಥ ನಂಬಿಕೆಗಳನ್ನು ತನ್ನ ಗುಂಪಿಗೂ ವಿಸ್ತರಿಸುತ್ತಾ ಸಾಗಿರುವ ರೀತಿಯು ಸಂಸ್ಕೃತಿಯ ಸ್ವರೂಪವನ್ನು ಪಡೆಯುತ್ತಾ ಬಂದಿರುವುದು ಐತಿಹಾಸಿಕ ಸತ್ಯವಾಗಿದೆ.

'ಸಂಸ್ಕೃತಿ' ಕುರಿತು ಡಿ.ವಿ.ಜಿ, ಮಾಸ್ತಿ, ದೇವುಡು ಮುಂತಾದವರು ತಮ್ಮ ತಮ್ಮ ಚಿಂತನೆಗಳನ್ನು ಮಂಡಿಸಿದ್ದಾರೆ. ಆಂಗ್ಲ ಭಾಷೆಯಲ್ಲಿ ಮ್ಯಾಥ್ಯೂ ಅರ್ನಾಲ್ಡ, ಟಿ. ಎಸ್. ಎಲಿಯಟ್, ವಿಲ್ ಡುರಾಂಟ್ ಇನ್ನೂ ಹಲವು ಚಿಂತಕರು 'ಸಂಸ್ಕೃತಿ' ಕುರಿತು ವ್ಯಾಖ್ಯೆಗಳನ್ನು ಮಂಡಿಸಿದ್ದಾರೆ.

ಡಿ.ವಿ.ಜಿ. ಮಾಸ್ತಿ, ದೇವುಡು ಮುಂತಾದ ಲೇಖಕರು, ಸಂಸ್ಕೃತಿ ಎಂಬುದು ಅಂತರಂಗದ ಪಾಕ ಉತ್ತಮ ನಡೆನುಡಿ, ಒಳ್ಳೆಯದನ್ನು ಕಂಡುಕೊಳ್ಳುವ ಪ್ರಯತ್ನ, ನಾನಾ ಧ್ಯೇಯಗಳ, ತತ್ವಗಳ, ಧರ್ಮಗಳ ತಾರತಮ್ಯ ಜ್ಞಾನದಿಂದಾದ ಸಮನ್ವಯ ಸ್ವಾರಸ್ಯ ಸಂಸ್ಕೃತಿಯೆಂಬುದು ಮನಸ್ಸನ್ನು ತಿಕ್ಕಿ ಶುಚಿಮಾಡುವಂಥದು - ಮುಂತಾಗಿ ಅರ್ಥೈಸುತ್ತಾರೆ. ಮ್ಯಾಥ್ಯೂ ಅರ್ನಾಲ್ಡನೂ ಕೂಡಾ ಸುಪ್ರಸಿದ್ಧವಾದ 'ಕಲ್ಚರ್ ಆ್ಯಂಡ್ ಆನಾರ್ಕಿ ' ಎಂಬ ಪ್ರಬಂಧದಲ್ಲಿ ಇದೇ ಅರ್ಥವನ್ನು ಬೀರುವ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾನೆ.

'' ಮನುಷ್ಯ ಸ್ವಭಾವಕ್ಕೆ ಸೌಂದರ್ಯವನ್ನು ಬೆಲೆಯನ್ನೂ ಕೊಡುವ ಎಲ್ಲ ಶಕ್ತಿಗಳ

ಸುಸಂಗತ ವಿಕಾಸವೇ ಸಂಸ್ಕೃತಿ'' ಈ ಎಲ್ಲ ಅಭಿಪ್ರಾಯಗಳು ಮನುಷ್ಯನ ಸ್ವಭಾವ ಸೌಂದರ್ಯಕ್ಕೆ, ಅಂತರಂಗದ ಮಾಧುರ್ಯಕ್ಕೆ ಒತ್ತು ನೀಡುತ್ತವೆ. ಬಾಹ್ಯ ಬದುಕಿನ ರೀತಿ ನೀತಿಗಳ ಕುರಿತು ಅಷ್ಟಾಗಿ ಚಿಂತಿಸುವುದಿಲ್ಲ.

'ಸಂಸ್ಕೃತಿ' ಪದವನ್ನು ಈ ರೀತಿ ಭೇದ ಮಾಡಿಯೂ ಅದರ ಅರ್ಥ ಕಂಡುಕೊಳ್ಳಬಹುದಾಗಿದೆ.

ಸಂ + ಸ + ಕೃತಿ = ಸಂಸ್ಕೃತಿ

ಸಂ + ಸ್ಕೃತಿ = ಸಂಸ್ಕೃತಿ

'ಸಂ' ಎಂಬುದಕ್ಕೆ ೧. ಶ್ರೇಷ್ಠವಾದ, ಅಧಿಕವಾದ ಅತಿಶಯವಾದ, ಕೂಡಿದ್ದು, ಶುದ್ಧಿ ಎಂಬ ಅರ್ಥಗಳ ಜೊತೆಗೆ

೨. ಸೌಂದರ್ಯ, ಪೂರ್ಣತೆ, ಚೆನ್ನಾಗಿ ಎಂಬ ಅರ್ಥಗಳೂ ಇವೆ - ೪

ಇದೇ ಅರ್ಥದಲ್ಲಿ 'ಸಂಸ್ಕಾರ' 'ಸಂಸ್ಕೃತಿ' 'ಸಮೃದ್ಧಿ' ಎಂಬ ಪದಗಳು ಕ್ರಮವಾಗಿ ಶುದ್ಧಿ ಮಾಡಿದ, ಉತ್ತಮವಾಗಿರುವುದು, ಅಧಿಕವಾದ ವೃದ್ಧಿ ಎಂಬ ಅರ್ಥಗಳನ್ನು ಬೀರುತ್ತವೆ. ಇದೇ ರೀತಿ

ಸಂ + ಸ + ಕೃತಿ = ಸಂಸ್ಕೃತಿ

ಶ್ರೇಷ್ಠವಾದ ಕಾರ್ಯ, ಅತ್ಯುತ್ತಮವಾದ ವಿಚಾರ, ಉತ್ತಮ ನಡವಳಿಕೆ ಎಂಬ ಅರ್ಥವನ್ನು ಕೊಡುತ್ತದೆ. 'ಸಂಸ್ಕೃತಿ' ಮನುಷ್ಯನ ಅತ್ಯುತ್ತಮವಾದ ಮಾನಸಿಕ ಮತ್ತು ಬೌದ್ಧಿಕ ಸಾಹಚರ್ಯದಿಂದ ಉಂಟಾದ ಕಾರ್ಯ ಎಂದೂ ಅರ್ಥೈಸಬಹುದಾಗಿದೆ. ಪ್ರಾಣಿಗಳಿಂದ ಭಿನ್ನವಾಗಿ ಬದುಕುವ ಕಲೆಯನ್ನು ಕಲಿತ ಮಾನವ ಕೃಷಿ, ಭಾಷೆ, ಸಾಹಿತ್ಯ, ಸಂಗೀತ ಮುಂತಾದವುಗಳನ್ನು ಶೋಧಿಸುತ್ತಲೆ ಆಯುಧಗಳು, ಉಪಕರಣಗಳು, ವಸ್ತ್ರಗಳು, ಅಲಂಕಾರ ಸಾಧನಗಳು, ಆಹಾರ ಬೇಯಿಸುವ ವಿಧಾನ, ಕುಟುಂಬ, ಸಮಾಜ, ಮದುವೆ, ಧರ್ಮ ಮುಂತಾದ ಪರಿಕಲ್ಪನೆಗಳನ್ನು ಹೊಂದುತ್ತ ಸಾಗಿ ಜೀವ ಸಮುದಾಯದಲ್ಲಿಯೇ ಬದುಕಿನ ವಿಶಿಷ್ಟ ವಿಧಾನವನ್ನು ರೂಢಿಸಿಕೊಳ್ಳುತ್ತಾ ಸಾಗಿರುವುದನ್ನು ಗಮನಿಸಿದಾಗ ಈ ವಿಶಿಷ್ಟ ಬದುಕುವ ವಿಧಾನವೇ ಸಂಸ್ಕೃತಿ ರೂಪವನ್ನು ಪಡೆದುಕೊಳ್ಳುತ್ತಾ ಸಾಗಿರುವುದನ್ನು ಗುರುತಿಸಬಹುದಾಗಿದೆ. ಪ್ರಕೃತಿಯಲ್ಲಿ ಮನುಷ್ಯ ತನ್ನ ವಿವೇಕವನ್ನು ಬೆರೆಸಿ ಅದಕ್ಕೊಂದು ಹೊಸ ರೂಪವನ್ನು ಕೊಡುತ್ತಾನೆ. ಡಿವಿಜಿಯವರ ಮಾತಿನಲ್ಲಿ ಇದನ್ನು ಹೀಗೆ ವಿಸ್ತರಿಸಬಹುದು '' ಮನುಷ್ಯನು ಪ್ರಕೃತಿಯಿಂದ ಮೇಲ್ಮಟ್ಟಕ್ಕೆದ್ದಾಗ ಸಂಸ್ಕೃತಿ, ಶ್ರವಣ ಬೆಳಗೊಳದ ದೊಡ್ಡ ಬೆಟ್ಟ ಪ್ರಕೃತಿ ಅದರ ಶಿಖರದ ಗೊಮ್ಮಟಮೂರ್ತಿ ಸಂಸ್ಕೃತಿ, ಕಾವೇರಿ ಪ್ರಕೃತಿ, ಅದರ ಇಕ್ಕೆಲದ ಗದ್ದೆಗಳು ತೋಟಗಳು ಸಂಸ್ಕೃತಿ, ಭತ್ತದ ಕಾಳು ಪ್ರಕೃತಿ ಅನ್ನ ಪರಮಾನ್ನಗಳು ಸಂಸ್ಕೃತಿ, ಕೂದಲು ಪ್ರಕೃತಿ, ಹೆರಳು, ತುರುಬು ಸಂಸ್ಕೃತಿ, ಹತ್ತಿ ಪ್ರಕೃತಿ, ಸೀರೆ ಧೋತ್ರ ಸಂಸ್ಕೃತಿ, ಗಂಟಲು ಕಿರಿಚು ಪ್ರಕೃತಿ, ಸಂಗೀತ ಸಂಸ್ಕೃತಿ .......... ಹೀಗೆ ಪ್ರಕೃತಿಯೊಡನೆ ಪೌರುಷ ವಿವೇಕ ಬೆರೆತಾಗ ಸಂಸ್ಕೃತಿ - ೬

ಪ್ರಕೃತಿಗೆ ಮನುಷ್ಯ ನೀಡಬಹುದಾದ ಬದಲಾವಣೆಯ ಕೃತಿಗಳೆಲ್ಲ ಸಂಸ್ಕೃತಿಯ ಪರಿಧಿಯಲ್ಲಿ ಅಂತರ್ಗತವಾಗುತ್ತವೆ ಎಂಬ ಅಭಿಪ್ರಾಯವನ್ನು ಡಿ.ವಿ.ಜಿ. ವ್ಯಕ್ತಪಡಿಸುತ್ತಾರೆ.

'ಸಂಸ್ಕೃತಿ' ಪದದ ಅರ್ಥವಿವರಣೆ ವಿವಿಧ ರೀತಿಯ ವ್ಯಾಪಕತೆಯನ್ನು ಪಡೆಯುತ್ತಾ ಸಾಗಿದೆ. ಮಾನವನ ಅಂತರಂಗದ ವಿಕಾಸವೇ ಸಂಸ್ಕೃತಿ ಎಂದು ಅರ್ಥೈಸಿರುವದನ್ನು ಮೊದ ಮೊದಲು ನಾವು

ನೋಡಬಹುದು, ನಂತರ ಬಂದ ಸಂಸ್ಕೃತಿ ಕುರಿತ ಚಿಂತಕರು 'ಸಂಸ್ಕೃತಿ ಎಂಬುದು ಬದುಕಿನ ವಿಧಾನ' ಎಂದು ತುಂಬಾ ವ್ಯಾಪಕವಾದ ಅರ್ಥವನ್ನು ನೀಡಿದ್ದಾರೆ. ಸಂಸ್ಕೃತಿ ಅಂತರಂಗಕ್ಕೆ ಮಾತ್ರ ಸಂಬಂಧಿಸಿದ್ದು ಎನ್ನುವಾಗ 'ಯಜಮಾನ ಸಂಸ್ಕೃತಿಯ ಪ್ರಭಾವವನ್ನು ಕಾಣಲಾಗುತ್ತಿದೆ. ಯಜಮಾನ ಸಂಸ್ಕೃತಿಗೆ ಹೊರತಾದ ಸಂಸ್ಕೃತಿಗಳು ಈ ರೀತಿಯ ಅರ್ಥ ವಿವರಣೆಯಿಂದ ಹೊರಗುಳಿಯುವ ಅಪಾಯವಿದೆ ಆದ ಕಾರಣ 'ಸಂಸ್ಕೃತಿಯೆಂಬುದು ಮಾನವನ ಬದುಕಿನ ವಿಧಾನ' ಈ ಬದುಕುವ ವಿಧಾನದಲ್ಲಿ ಬರುವ ಹಳತು ಹೊಸತು, ಸೃಷ್ಟಿ ವಿನಾಶ, ಏನೆಲ್ಲ ಸಾಧ್ಯತೆಗಳಿವೆಯೋ ಅವೆಲ್ಲ 'ಸಂಸ್ಕೃತಿ' ಅರ್ಥ ವ್ಯಾಪ್ತಿಯೊಳಗೆ ಸೇರಿಕೊಳ್ಳುತ್ತವೆ.



# ಸಂಸ್ಕೃತಿ ಮಹತ್ವ ಮತ್ತು ಸ್ವರೂಪ

ಮನುಷ್ಯರಿಲ್ಲದ ನೆಲದಲ್ಲಿ ಯಾವ ಸಂಸ್ಕೃತಿಯೂ ಅರಳಲಾರದು. ಅಂದರೆ ಸಂಸ್ಕೃತಿಯೆಂಬುದು ಮಾನವ ನಿರ್ಮಿತವಾದುದಾಗಿದೆ. ಒಂದು ಜನಾಂಗ ತನ್ನ ಅನುಭವಗಳಿಂದ, ಬೌದ್ಧಿಕ ಶಕ್ತಿಯಿಂದ, ಭಾವನೆಗಳಿಂದ ಉಂಟಾದ ಎಲ್ಲ ತಿಳುವಳಿಕೆಯನ್ನು ಮುಂದಿನ ಜನಾಂಗಕ್ಕೆ ಸಂಸ್ಕೃತಿ ಮೂಲಕವೇ ಹಸ್ತಾಂತರ ಮಾಡುತ್ತದೆ. ಸಂಸ್ಕೃತಿಯೆಂಬುದು ಮನುಕುಲವನ್ನು ಹೆಚ್ಚು ಪರಿಪೂರ್ಣತೆಯತ್ತ ಸಾಗಿಸುವ ಸಾಧನವಾಗಿಯೂ ಕಾರ್ಯ ನಿರ್ವಹಿಸುತ್ತದೆ. ಈ ನಿಟ್ಟಿನಲ್ಲಿ ಯು. ಆರ್. ಅನಂತಮೂರ್ತಿಯವರ ಮಾತುಗಳು ಮನನೀಯವಾಗಿವೆ '' ಮನುಷ್ಯನ ಬುದ್ಧಿ ಮತ್ತು ಭಾವನೆಗಳು ಎಚ್ಚರದಲ್ಲಿ ಸೃಷ್ಟಿಸುವ ಮೌಲ್ಯಗಳು, ಒಂದು ಸಂಸ್ಕೃತಿಯನ್ನು ಕಟ್ಟುತ್ತವೆ. ವ್ಯಕ್ತಿ ಸಮಾಜ ಮತ್ತು ಮಾನವೇತರ ಜಗತ್ತು ಈ ಮೂರರ ನಡುವೆ ಸಂಬಂಧಗಳನ್ನು ಸೃಷ್ಟಿಸುವುದು, ಅದನ್ನು ನಮ್ಮ ನಡೆನುಡಿಗಳಲ್ಲಿ ರೂಢಿಸುವುದು ,ಸಂಸ್ಕೃತಿಯ ಕೆಲಸ. ಸಂಸ್ಕೃತಿಯ ಶಿಸ್ತು ಸಂಯಮ, ವ್ರತಗಳ ಮೂಲಕ ಮನುಷ್ಯ ಪರಿಪಕ್ವನಾಗಿ ತನ್ನ ಖಾಸಗಿತನವನ್ನು ತಾನಿರುವ ಸಮಷ್ಟಿಗೂ ತನ್ನಿಂದ ಹೊರತಾದ ಜಗತ್ತಿಗೂ ಘರ್ಷಣೆಯಾಗದಂತೆ ಬದುಕಬೇಕು ಇದು ಕಷ್ಟದ ವಿಷಯ. ಪರಮ ಸ್ವಾರ್ಥದಲ್ಲಿ ವ್ಯಕ್ತಿ ರಾಕ್ಷಸನಾದನು. ರಾಜಕೀಯ ವಿಚಾರದಲ್ಲಿ ಸಮಾಜ ವ್ಯಕ್ತಿಯನ್ನು ನುಂಗಬಹುದು ಆತ್ಮರಥನಾದ ಮನುಷ್ಯ ಈ ಜಗತ್ತಿನಲ್ಲಿ ತಾನೊಬ್ಬ ಅತಿಥಿ ಎಂಬುದನ್ನು ಮರೆಯಬಹುದು. ಈ ಮೂರರ ನೆಲೆಯಲ್ಲಿರುವ ಶಕ್ತಿಗಳೂ ವ್ಯಯವಾಗದಂತೆ, ಒಂದು ಇನ್ನೊಂದನ್ನು ನಾಶಮಾಡದಂತೆ, ಜೀವಿಸುವುದನ್ನು ಕಲಿಸುವುದು ಸಂಸ್ಕೃತಿ. ಒಂದು ಜೀವಂತ ಸಂಸ್ಕೃತಿ ವರ್ತಮಾನಕ್ಕೆ ಸ್ಪಂದಿಸಬೇಕು ಅದರ ಬೇರುಗಳು ಭೂತದಲ್ಲಿರಬೇಕು. ಈ ಜಗತ್ತಿನಲ್ಲಿ ಹಿಂದೆ ಇದ್ದವರು ಈಗಿನ ನಮಗೆ ಕಲಿಸುವುದು ಸಾಧ್ಯವಾಗುವುದು ಸಂಸ್ಕೃತಿಯ ಮೂಲಕ. ವರ್ತಮಾನ ಕಾಲದ ಒಂದು ಸಮಾಜ ಕುಟುಂಬುವಾಗವದು ಸಂಸ್ಕೃತಿಯ ಮೂಲಕ '' ೭

ಈ ಭೂಮಿಯ ಮೇಲೆ ಮನುಕುಲದ ಉಗಮದಿಂದ ಇಂದಿನ ತನಕ ಉಂಟಾದ ಎಲ್ಲ ಬದಲಾವಣೆಗಳು, ಬೆಳವಣಿಗೆಗಳು, ನಿರ್ಮಾಣಗಳು ಸಂಸ್ಕೃತಿಯ ಸ್ವರೂಪದ ಫಲಗಳೆ ಆಗಿವೆ. ಕಾಲದಿಂದ ಕಾಲಕ್ಕೆ ನಿರಂತರವಾಗಿ, ಚಲನಶೀಲತೆಯನ್ನು ಪಡೆದುಕೊಳ್ಳುತ್ತಲೆ 'ಸಂಸ್ಕೃತಿ' ಎಂಬುದು ಸಾಗುತ್ತದೆ. ಭಾಷೆಯ ಮೂಲಕ, ಕಲೆಯ ಮೂಲಕ, ಬೌದ್ಧಿಕತೆಯ ಮೂಲಕ 'ಸಂಸ್ಕೃತಿ' ರೂಪ ಸ್ವರೂಪಗಳನ್ನು ಪಡೆಯುತ್ತ ಸಾಗುತ್ತದೆ. ಪ್ರತಿಯೊಬ್ಬ ವ್ಯಕ್ತಿಯೂ ಸಂಸ್ಕೃತಿಗೆ ಹೊರತಾಗಿ ಉಳಿಯುವುದು ಅಸಾಧ್ಯವಾಗುತ್ತದೆ. ಮನುಷ್ಯನ ಕ್ರಿಯೆ ಸಂಸ್ಕೃತಿಯ ನಿರ್ಮಾಣದಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತದೆ.

ಅದು ಬೌದ್ಧಿಕ ಕ್ರಿಯೆಯಾಗಿರಬಹುದು, ಭಾವನಾತ್ಮಕ ಕ್ರಿಯೆಯಾಗಿರಬಹುದು, ಸಂಸ್ಕೃತಿಯ ವಿನ್ಯಾಸಗಳನ್ನು ರೂಪಿಸುವಲ್ಲಿ ಅದು ಪ್ರಮುಖ ಪಾತ್ರ ವಹಿಸುತ್ತದೆ. ಮನುಷ್ಯ ಸಂಸ್ಕೃತಿಯ ಪ್ರಭಾವದಿಂದ ಪರಿಪಕ್ವನಾಗುತ್ತ ಸಾಗುತ್ತಾನೆ ಅವನೇ ರೂಪಿಸಿದ ಸಂಸ್ಕೃತಿ ಅಪರೋಕ್ಷವಾಗಿ ಅವನನ್ನೇ ರೂಪಿಸುತ್ತಾ ಸಾಗುತ್ತದೆ.

ದೇವರನ್ನು ಸೃಷ್ಟಿಸುವುದು ಧರ್ಮವನ್ನು ಸೃಷ್ಟಿಸುವುದು, ತತ್ವಗಳನ್ನು ಸೃಷ್ಟಿಸುವುದು, ಆಡಳಿತವನ್ನು ಸೃಷ್ಟಿಸುವುದು, ರಾಜ, ಮಂತ್ರಿಯಾಗುವುದು, ನೆಲಕ್ಕಾಗಿ ಮಾಡುವು ಹೋರಾಟ, ಬಳಸುವ ಯುದ್ಧ ತಂತ್ರಗಳು, ಆಯುಧಗಳು, ಸನ್ನಿವೇಶಗಳಿಂದ ಕಲಿಯುವ ಪಾಠಗಳು ಎಲ್ಲವೂ ಒಂದು ಸಂಸ್ಕೃತಿಯಾಗಿ ರೂಪುಗೊಳ್ಳುತ್ತದೆ.

'ಸಂಸ್ಕೃತಿ' ಕೇವಲ ಆಳುವ ವರ್ಗದ ನೆಲೆಯಿಂದಲೇ ಬಿಂಬಿತವಾಗುತ್ತ ಬಂದರೆ ಅಥವಾ ಅದೇ ಪ್ರಧಾನವೆಂಬ ಭಾವನೆಯಿಂದ ಸ್ವೀಕರಣಕ್ಕೆ ಒಳಗಾದರೆ 'ಸಂಸ್ಕೃತಿಯ ವಿವಿಧ ನೆಲೆಯ ಬಣ್ಣ - ಬೆಡಗುಗಳು ನಮಗೆ ಕಾಣದೇ ಹೋಗವ ಸಾಧ್ಯತೆ ಇದೆ. 'ಸಂಸ್ಕೃತಿ' ಎಂಬುದು ಈಗಾಗಲೇ ಜರುಗಿ ಹೋದ ಸಂಗತಿಯಲ್ಲ. ಅದು ಸದಾ ಜರುಗುತ್ತಿರುವ ಸಂಗತಿಯಾಗಿದೆ.

ಸಂಸ್ಕೃತಿಯನ್ನು ಮನುಷ್ಯನ ಅಂತರಂಗಕ್ಕಷ್ಟೆ ಸೀಮಿತಗೊಳಿಸುವದು ಯುಕ್ತವಾದುದಲ್ಲ ಅಂತರಂಗ - ಬಹಿರಂಗಗಳ ಪರಿಕರವನ್ನಾಗಿ ಸಂಸ್ಕೃತಿಯನ್ನು ಸ್ವೀಕರಿಸುವುದು ಉತ್ತಮ.

ಕೇವಲ ಹಳ್ಳಿಯ ಆಕೃತಿಗಳನ್ನು ಆರಾಧಿಸುವ ಪ್ರಧಾನ ನೆಲೆಯ ದೃಷ್ಟಿ ಕೋನ ಅಷ್ಟು ಸರಿಯಾದುದಲ್ಲ ಏಕೆಂದರೆ ಪ್ರತಿಯೊಂದು ಜನಾಂಗಕ್ಕೆ ತನ್ನದೇ ಆದ ಒಂದು 'ಸಂಸ್ಕೃತಿ' ಇದೆ. ಈ ದೃಷ್ಟಿಯಿಂದ ಬರಗೂರು ರಾಮಚಂದ್ರಪ್ಪನವರು ಈ ಮಾತುಗಳು ವಿಚಾರಾರ್ಹವಾಗಿವೆ. ''ಸಂಸ್ಕೃತಿಯೆನ್ನುವುದು ಬಹಿರಂಗದಿಂದ ಬೇರೆಯಾದದ್ದು ಎಂಬ ಮಾತು ಎಷ್ಟು ಸರಿ ? ಮನುಷ್ಯನ ಅಂತರಂಗವಾಗಲಿ, ಬಹಿರಂಗವಾಗಲಿ ತನಗೆ ತಾನೇ ಸ್ವತಂತ್ರವಾದ ಘಟಕಗಳಲ್ಲ . ಒಂದು ಇನ್ನೊಂದನ್ನು ಅವಲಂಬಿಸಿಯೆ ಆಕಾರ ಪಡೆಯುವ ಪ್ರಕ್ರಿಯೆಯನ್ನು ನಾವು ಗಮನಿಸಿಬೇಕು. ಒಬ್ಬನ ಬಹಿರಂಗ ಬದುಕು ಅಂತರಂಗದ ಆಲೋಚನೆಗಳನ್ನು ನಿಯಂತ್ರಿಸಬಲ್ಲದು. ಅದಕ್ಕನುಗುಣವಾಗಿ ಅಂತರಂಗದ ಆಕೃತಿಗಳನ್ನು ನಿಯಂತ್ರಿಸ ಬಲ್ಲದು, ಅದಕ್ಕನುಗುಣವಾಗಿ ಆಕೃತಿಗಳುನ್ನು ಕಡೆಗಣಿಸ ಬಲ್ಲದು. ನಯ, ವಿನಯ, ಸೊಬಗು ಇತ್ಯಾದಿಗಳು ನಮ್ಮ ಸಾಮಾಜಿಕ ಸಂದರ್ಭದಲ್ಲಿ ಸಾಪೇಕ್ಷ ನೆಲೆಗಳನ್ನು ಪಡೆದುಕೊಂಡಿವೆ. ಹಳ್ಳಿಯ ಅಥವಾ ಕೊಳಗೇರಿಯ ಮನುಷ್ಯನಲ್ಲಿ ಸಾಮಾಜಿಕ, ಆರ್ಥಿಕ, ಶಕ್ತರ ನಿರೀಕ್ಷೆಯ ನಯ, ವಿನಯ, ಸೊಬಗು ಸಿಗದೇ ಇರಬಹುದು, ಅಂದ ಕೂಡಲೇ ಅವರಲ್ಲಿ 'ಸಂಸ್ಕೃತಿ' ಇಲ್ಲ ಎಂದು ತೀರ್ಮಾನಿಸಲಾಗದು.'' ೮

ಮೇಲಿನ ಅಭಿಪ್ರಾಯದಲ್ಲಿ ಸಂಸ್ಕೃತಿಯ ಒಟ್ಟು ನೋಟವಿದೆ. ಸಂಸ್ಕೃತಿ ಅಂತರಂಗ - ಬಹಿರಂಗಕ್ಕೆ ಸಂಬಂಧಪಟ್ಟದ್ದಾಗಿದೆ. ಬಹಿರಂಗ ಅಂತರಂಗದ ಮೇಲೆ ಅಂತರಂಗ ಬಹಿರಂಗದ ಮೇಲೆ ಪ್ರಭಾವ ಬೀರುವ ಶಕ್ತಿಯನ್ನು ಪಡೆದುಕೊಂಡಿವೆ. ಧಾರ್ಮಿಕ ಆಚರಣೆಗಳು ಅಂತರಂಗಕ್ಕೂ ಬಾಹ್ಯಕ್ಕೂ ಸಂಬಂಧ ಪಟ್ಟಿದ್ದನ್ನು ಇಲ್ಲಿ ಸ್ಮರಿಸಬಹುದು ವೀರಶೈವರಲ್ಲಿ ಅಷ್ಟಾವರಣಗಳು ದೇಹದ ಮೇಲೆ ಧರಿಸುವಂತವುಗಳಾಗಿವೆ. ಆದರೆ ಇವುಗಳು ಅಂತರಂಗದ ಮೇಲೆ ಪ್ರಭಾವ ಬೀರುವ ಶಕ್ತಿ ಪಡೆದಿವೆ ಎಂದು ನಂಬಲಾಗುತ್ತದೆ.

# ಕರ್ನಾಟಕ ಸಂಸ್ಕೃತಿ ಎಂದರೇನು ?

'ಕನ್ನಡ' ಎಂಬುದು ಒಂದು ಭಾಷೆಯನ್ನು 'ಕರ್ನಾಟಕ' ಎಂಬುದು ಕನ್ನಡ ಭಾಷೆಯನ್ನು ಮಾತನಾಡುವ ಜನಗಳು ವಾಸಿಸುವ ಭೂಪ್ರದೇಶವನ್ನೂ ಸೂಚಿಸುತ್ತದೆ ಎಂಬುದು ಎಲ್ಲರಿಗೂ ಇಂದು ತಿಳಿದ ವಿಷಯವಾಗಿದೆ. ''ಭರತ ಖಂಡದ ಸಂಸ್ಕೃತಿಯ ಚೌಕಟ್ಟಿನಲ್ಲಿಯೇ ಆಳವಟ್ಟು ಸುಂದರವಾಗಿ ಅರಳಿರುವ ಕುಸುಮಗಳಲ್ಲಿ ಕರ್ನಾಟಕದ ಸ್ಥಾನ ಬಹಳ ಹಿರಿದು ಮತ್ತು ವಿಶಿಷ್ಟವಾದುದು. ಪ್ರಾಚೀನ ಕಾಲದಿಂದಲೂ ಭಾರತೀಯ ಸಂಸ್ಕೃತಿಗೆ, ಶ್ರೀಮಂತಿಕೆಗೆ ಕರ್ನಾಟಕ ಸಂಸ್ಕೃತಿ ಕಾರಣವಾಗಿದೆ''. ೯

ಕನ್ನಡ ಭಾಷೆಯನ್ನು ಮಾತನಾಡುವ ಜನಾಂಗ ಮತ್ತು ಅದು ವಾಸಮಾಡಿದ ಭೂಪ್ರದೇಶದಲ್ಲಿ ಅರಳಿ ನಿಂತ ಸಂಸ್ಕೃತಿಯನ್ನು 'ಕರ್ನಾಟಕ ಸಂಸ್ಕೃತಿ' ಎಂದು ಗುರುತಿಸಬಹುದು. ಕನ್ನಡಿಗರು ಬಾಳಿದ ರೀತಿ ಆಚಾರ - ವಿಚಾರಗಳು, ವೇಷ - ಭೂಷಣಗಳು, ಜಾತಿ - ಮತಗಳು, ಧರ್ಮಗಳು, ಆಡಳಿತ ವಿಧಾನಗಳು, ಸಾಹಿತ್ಯ ರಾಶಿ, ಶಾಸನ ಸಂಪದ, ಈ ಪ್ರದೇಶದ ದೇವಾಲಯಗಳು, ಧರಿಸಿದ ಆಭರಣಗಳು, ಜನಪದ ನಂಬಿಕೆಗಳು, ಸಾಹಿತ್ಯ ಒಟ್ಟಾರೆ ಈ ಜನರ ಜೀವನ ವಿಧಾನ ಈ ಒಟ್ಟು ಪರಿಕರವನ್ನು ವಿಶೇಷತೆಯನ್ನು 'ಕರ್ನಾಟಕ ಸಂಸ್ಕೃತಿ' ಎಂದು ಹೇಳಬಹುದು.

# ಪ್ರಾಚೀನತೆ

ಕನ್ನಡ ಭಾಷೆಯನ್ನಾಡುವ ಜನವುಳ್ಳ ಪ್ರದೇಶವನ್ನು ನಿಶ್ಚಿತವಾಗಿ ಗುರುತಿಸುವದು ಎಷ್ಟು ಕಷ್ಟಕರವಾದುದೋ, ಅಷ್ಟೇ ಕರ್ನಾಟಕದ ಪ್ರಾಚೀನತೆಯನ್ನು ಗುರುತಿಸುವುದು ಕಷ್ಟಕರವಾದುದಾಗಿದೆ. '' ಕನ್ನಡ ಭಾಷೆ ಮತ್ತು ಅದನ್ನಾಡುವ ಜನವುಳ್ಳ ದೇಶ ಇವು ಕ್ರಿಸ್ತ ಪೂರ್ವದ ೨ನೇ ಶತಕದಿಂದಲೂ ಇದ್ದವೆಂಬುದಕ್ಕೆ ಎಲ್ಲರೂ ಒಪ್ಪಬಹುದಾದ ನಿದರ್ಶನಗಳಿರುತ್ತವೆ''. - ೧೦ ಎಂದು ರಂ.ಶ್ರೀಮುಗಳಿಯವರು ಅಭಿಪ್ರಾಯ ಪಡುತ್ತಾರೆ. '' ಇತಿಹಾಸಕ್ಕೆ ಪೂರ್ವದ ಪ್ರಾಚೀನ ಯುಗದಿಂದ ಹಿಡಿದು, ನಾಗರೀಕತೆಯ ಎಲ್ಲ ಘಟ್ಟಗಳನ್ನೂ ಕರ್ನಾಟಕದ ಜನಜೀವನ ಕಂಡಂತೆ ತೋರುತ್ತದೆ.'' - ೧೧

'ಕರ್ನಾಟಕ' ಎಂಬ ಹೆಸರು ಮೊಟ್ಟ ಮೊದಲು ದೊರೆಯುವುದು ಮಹಾಭಾರತದಲ್ಲಿ. ಕರ್ನಾಟಕದ ಇತರ ಭಾಗಗಳಾದ ಮಹಿಷಕ, ಕುಂತಲ ಈ ಮೊದಲಾದ ಹೆಸರುಗಳು ಮಹಾಭಾರತದ ಸಭಾಪರ್ವ ಮತ್ತು

ಭೀಷ್ಮ ಪರ್ವಗಳಲ್ಲಿ ಕಂಡುಬರುತ್ತವೆ.

ಕ್ರಿ.ಶ.೧ನೇ ಶತಮಾನ ಅಥವಾ ೨ನೇ ಶತಮಾನದಲ್ಲಿ ರಚಿತವಾದ ತಮಿಳಿನ ಕೃತಿ 'ಶಿಲಪ್ಪದಿಗಾರಂ' ಎಂಬುದರಲ್ಲಿ 'ಕರುನಾಟರ್' ಎಂಬ ಶಬ್ದ ಎರಡು ಸಾರಿ ದೊರೆಯುತ್ತದೆಂದು ವಿದ್ವಾಂಸರು ಕರ್ನಾಟಕದ ಪ್ರಾಚೀನತೆಯ ಬಗ್ಗೆ ಕೊಡುವ ಮತ್ತೊಂದು ಸಾಕ್ಷಿಯಾಗಿದೆ.

ಶೂದ್ರಕ ಕವಿಯ ಮೃಚ್ಛಕಟಿಕ ನಾಟಕದಲ್ಲಿ 'ಕರ್ನಾಟಕ್' ಎಂಬ ಶಬ್ದ ಎರಡು ಬಾರಿ ಬರುತ್ತದೆ. ಆ ನಾಟಕದ ಆರನೇ ಅಂಕದಲ್ಲಿ ವೀರಕ ಮತ್ತು ಚಂದನಕ ಇವರ ಸಂಭಾಷಣೆಯಲ್ಲಿ ಈ ಮಾತು ಬರುತ್ತದೆ.

ಕರ್ನಾಟಕವು ಕ್ರಿಸ್ತಶಕದ ಪ್ರಾರಂಭದ ವೇಳೆಗೆ ತನ್ನ ಸ್ವಂತ ಅಸ್ತಿತ್ವವನ್ನು ವಿಶಿಷ್ಟತೆಯನ್ನು ಗಳಿಸಿಕೊಂಡಿತೆಂಬುದರಲ್ಲಿ ಯಾವ ಸಂದೇಹವೂ ಇಲ್ಲವೆನ್ನಬಹುದು.

ಕ್ರಿ.ಶ. ೧೫೦ರಲ್ಲಿ ಗ್ರೀಕ್ ದೇಶದಿಂದ ಕರ್ನಾಟಕಕ್ಕೆ ಬಂದಿದ್ದ ಟಾಲೆಮಿ ಎಂಬುವನು ತನ್ನ ಗ್ರಂಥದಲ್ಲಿ ಕರ್ನಾಟಕದ ಅನೇಕ ಪ್ರಸಿದ್ಧ ಸ್ಥಳಗಳನ್ನು ಹೆಸರಿಸಿದ್ದಾನೆ. ಅವುಗಳಲ್ಲಿ

೧. ಬಾದಿಯಾಮೊಯಿ - ಬಾದಾಮಿ
೨. ಇಂಡೆ - ಇಂಡಿ
೩. ಕಲ್ಲಿಗೇರಿಸ್ - ಕಲ್ಲಿಗೇರಿ
೪. ಮೊದೊಗಾಲ - ಮುದಗಲ್
೫. ಪೆಟರಗಾಲ್ - ಪಟ್ಟದಕಲ್ಲು
೬. ಬನೋವಾಸಿ - ಬನವಾಸಿ

ಈ ಮೇಲಿನ ಊರುಗಳು ಕರ್ನಾಟಕದಲ್ಲಿ ಇಂದಿಗೂ ಪ್ರಸಿದ್ಧವಾಗಿವೆ.

ಕನ್ನಡಿಗರ ಪ್ರಾಚೀನತೆಯನ್ನು ವೇದಯುಗದ ಪ್ರಾಚೀನತೆಗೆ ತೆಗೆದುಕೊಂಡು ಹೋಗುವ ಪ್ರಯತ್ನವನ್ನು ಶಂಬಾ ಜೋಶಿಯವರು ಮಾಡಿದ್ದಾರೆ. ಕನ್ನಡ ಎಂಬ ಪದ ದೇಶಿಯವಾದುದು. ಇದರ ಸಂಸ್ಕೃತ ರೂಪ ಕರ್ನಾಟಕ ಆಗಿರಬೇಕು. ಕನ್ ಮತ್ತು ನಾಡು ಎಂಬ ಎರಡೂ ಶಬ್ದಗಳು ಸೇರಿ ಕನ್ನಾಡು ಅಥವಾ ಕನ್ನಡ ಆಗಿರಬೇಕು. ಇಲ್ಲಿ 'ಕನ್ ಅಥವಾ ಕಣ್' ಎಂಬುದು ಜನಾಂಗವನ್ನು ಸೂಚಿಸುತ್ತದೆ. ಅಂದರೆ ಕಣ್ಣರ ನಾಡು ಎಂಬ ಅರ್ಥವನ್ನು ಇದು ಕೊಡುತ್ತದೆ ಕನ್ನರು ಅಥವಾ ಕಣ್ಣರು ಆರ್ಯ ಪೂರ್ವದ ಜನಾಂಗವಾದ ಕಳವರ್ ಅಥವಾ ಕಳ್ಳರ್ ಎಂಬ ಗುಂಪಿಗೆ ಸೇರಿದವರು. ಈ ಕಳ್ಳರ ಅಥವಾ ಕಳವರೇ ಮೂಲ ದ್ರಾವಿಡ ಜನಾಂಗ ಕಣ್ಣರು ಆರ್ಯರ ಸಂಪರ್ಕವನ್ನು ಪಡೆದು ಉಂಟಾದ ಆರ್ಯ ದ್ರಾವಿಡ ಜನಾಂಗ. ಹೀಗೆ ಋಗ್ವೇದದ ಕಾಲದಲ್ಲಿಯೇ ಆರ್ಯ ದ್ರಾವಿಡರ ಸಂಪರ್ಕ ಪ್ರಾರಂಭವಾಗಿ ಅದರಿಂದ ಕರ್ನಾಟಕ ಸಂಸ್ಕೃತಿ ರೂಪುಗೊಳ್ಳಲು ಪ್ರಾರಂಭವಾಯಿತು.೧೨

ಕರ್ನಾಟಕದಲ್ಲಿ ಅನೇಕ ಧರ್ಮಗಳು ಆಶ್ರಯ ಪಡೆದುಕೊಂಡಿವೆ. ಅವುಗಳಲ್ಲಿ ಜೈನ ಧರ್ಮ, ಬೌದ್ಧ ಧರ್ಮ, ವೀರಶೈವ ಧರ್ಮ, ವೈದಿಕ, ಇಸ್ಲಾಂ, ಕ್ರಿಶ್ಚಿಯನ್, ಶಿಖ್ ಧರ್ಮಗಳು ಪ್ರಮುಖವಾಗಿವೆ. ಈ ಧರ್ಮಗಳನ್ನು ಆಚರಿಸುವ ಜನಸಮುದಾಯ ಕರ್ನಾಟಕದಲ್ಲಿ ದೊರೆಯುತ್ತದೆ. ಕೆಲವು ಧರ್ಮಗಳಿಗೆ ರಾಜಾಶ್ರಯ ದೊರೆತದ್ದು ಅವುಗಳ ಬೆಳೆವಣಿಗೆಯಲ್ಲಿ ಮಹತ್ವದ ಪಾತ್ರವನ್ನು ವಹಿಸುವಂಥಾಗಿದೆ. ರಾಜಾಶ್ರಯಗಳನ್ನು ಕಳೆದುಕೊಂಡ ನಂತರ ಆಯಾ ಧರ್ಮಗಳು ಮೊದಲಿನ ಪ್ರಾಮುಖ್ಯತೆಯನ್ನು ಕಳೆದುಕೊಂಡಿವೆ. ಒಂದು ಧಾರ್ಮಿಕ ಸಂಸ್ಕೃತಿಯ ಸ್ಥಳದಲ್ಲಿ ಮತ್ತೊಂದು ಧಾರ್ಮಿಕ ಸಂಸ್ಕೃತಿ ವಿಜೃಂಭಿಸಿದೆ. ಯಾವ ನೆಲದಲ್ಲಿ ಜೈನಧರ್ಮ ಮತ್ತು ಅದರ ಸಂಸ್ಕೃತಿ ಮೆರೆದಾಡಿತ್ತೊ ಅಂಥ ಪ್ರದೇಶಗಳಲ್ಲಿಯೇ ತನ್ನ ನೆಲೆ ಕಳೆದುಕೊಂಡು ಅನಾಥ ಸ್ಥಿತಿಯನ್ನು ಅನುಭವಿಸಿದ ಪ್ರಸಂಗಗಳನ್ನು ಐತಿಹಾಸಿಕ ಸಂದರ್ಭಗಳಲ್ಲಿ ಗುರುತಿಸಬಹುದಾಗಿದೆ. ೧೨ನೇಯ ಶತಮಾನದ ನಂತರ ಕರ್ನಾಟಕದಲ್ಲಿ ವೀರಶೈವ ಧರ್ಮ ಪ್ರಮುಖ ನೆಲೆಯನ್ನು ಪಡೆದುಕೊಂಡಿದೆ. ವೀರಶೈವ ಮಠಮಾನ್ಯಗಳು ಬೆಳೆದು ಬಂದಿವೆ. ಕರ್ನಾಟಕದಲ್ಲಿ ಮಠಗಳು ಬೆಳೆದುಕೊಂಡು ಬಂದು ಆಯಾ ಧರ್ಮದ ಶ್ರದ್ಧೆಯನ್ನು ಪೋಷಿಸಿಕೊಂಡು ಬಂದು ಸಂಸ್ಕೃತಿಯ ಬೆಳವಣಿಗೆಗೆ ತಮ್ಮ ಸೇವೆಯನ್ನು ಸಲ್ಲಿಸಿವೆ. ವೀರಶೈವ ವಚನ ಚಳುವಳಿ ಕರ್ನಾಟಕ ಸಂಸ್ಕೃತಿಗೆ ವಿಶೇಷ ತಿರುವನ್ನು ಒದಗಿಸಿತು. ಜಾತಿವ್ಯವಸ್ಥೆಯನ್ನು ವಿರೋಧಿಸಿ ಬೆಳೆದ ಈ ಸಂಸ್ಕೃತಿ ಸಮಾಜದಲ್ಲಿ ಸಮಾನತೆಯನ್ನು ಸ್ಥಾಪಿಸುವುದಕ್ಕಾಗಿ ಪ್ರಯತ್ನಿಸಿತು.

ಜೈನರು, ಬೌದ್ಧರು, ವೈದಿಕರು, ವೀರಶೈವರು ಮುಂತಾದ ಜನಾಂಗಗಳಿಂದ ಕರ್ನಾಟಕದ ಸಂಸ್ಕೃತಿ ನಿರ್ಮಾಣವಾಯಿತು. ಈ ಧರ್ಮಗಳ ಅನೇಕ ತತ್ವಗಳು, ಆದರ್ಶಗಳು ಕರ್ನಾಟಕದ ಜನರಲ್ಲಿ ತಾಳ್ಮೆ, ಉದಾರತೆ, ಸ್ವೀಕರಣ ಮನೋಭಾವ ಮುಂತಾದ ಗುಣಗಳನ್ನು ಬೆಳೆಸಿದವು.

# ಕರ್ನಾಟಕದಲ್ಲಿ ಜೈನಧರ್ಮ

ಪ್ರಾಚೀನ ಕರ್ನಾಟಕದಲ್ಲಿ ಜೈನಧರ್ಮ ಒಂದು ಪ್ರಬಲವಾದ ಧರ್ಮವಾಗಿತ್ತು ಎಂಬುದಕ್ಕೆ ಇಂದಿಗೂ ಕರ್ನಾಟಕದಲ್ಲಿ ನಂಬಲರ್ಹವಾದ ಹಲವು ಬಗೆಯ ಸಾಕ್ಷ್ಯಾಧಾರಗಳು ದೊರೆಯುತ್ತವೆ. ''ದಕ್ಷಿಣ ಭಾರತದ ಜೈನಧರ್ಮದ ಇತಿಹಾಸವೆಂದರೆ ಕರ್ನಾಟಕ ಜೈನಧರ್ಮದ ಇತಿಹಾಸವೇ ಆಗಿದೆ.''೧೪ ಎನ್ನುವಷ್ಟು ಪ್ರಾಮುಖ್ಯತೆ ಕರ್ನಾಟಕದಲ್ಲಿ ಹರಡಿ ನಿಂತ ಜೈನಧರ್ಮಕ್ಕಿರುವದನ್ನು ಗುರುತಿಸಬಹುದಾಗಿದೆ. ಮೊದಮೊದಲು ಜೈನಧರ್ಮವು ಬೌದ್ಧ ಧರ್ಮದ ಪ್ರಭೇದವೆಂದು ಕೆಲವು ವಿದ್ವಾಂಸರು ಭಾವಿಸಿದ್ದರು. ನಂತರದ ಸಂಶೋಧನೆಗಳಿಂದ ಜೈನಧರ್ಮವೂ ಒಂದು ಪ್ರತ್ಯೇಕವಾದ ಧರ್ಮವೆಂದು ಬೌದ್ಧ ಧರ್ಮಕ್ಕಿಂತ ಸ್ವಲ್ಪ ಪ್ರಾಚೀನ ಧರ್ಮವೆಂದು ಸ್ಥಿರಪಟ್ಟಿದೆ. ಜೈನರು ಇಪ್ಪತ್ತನಾಲ್ಕು ತೀರ್ಥಂಕರರನ್ನು ಪೂಜಿಸುತ್ತಾರೆ. ಆದರೆ ಈ ಎಲ್ಲ ತೀರ್ಥಂಕರರು ಐತಿಹಾಸಿಕ ಪುರುಷರಲ್ಲ ಎಂಬುದನ್ನು ವಿದ್ವಾಂಸರು ಒಪ್ಪುತ್ತಾರೆ. ಕೊನೆಯ ತೀರ್ಥಂಕರನಾದ ಮಹಾವೀರನು ಬುದ್ಧನ ಸಮಕಾಲೀನ (ಅವನಿಗಿಂತ ಹಿಂದೆ ಎಂದರೆ) ಕ್ರಿ.ಪೂ. ಎಂಟನೆ ಶತಮಾನದಲ್ಲಿ ಇಪ್ಪತ್ಮೂರನೇ ತೀರ್ಥಂಕರನಾದ ಪಾರ್ಶ್ವನಾಥನು ಬಾಳಿ ಬದುಕಿದನು. ಜೈನಧರ್ಮದ ಇತಿಹಾಸದಲ್ಲಿ ಹೆಚ್ಚು ಎಂದರೆ ಪಾರ್ಶ್ವನಾಥರವರೆಗೆ ಹೋಗಬಹುದು. ಅವನಿಂದಾಚೆ ಪೌರಾಣಿಕ ಕಟ್ಟುಕಥೆಗಳ ಮಂಜು ಮುಸುಕಿದೆ ಎಂದು ಯಾಕೂಬಿಯವರು ಅಭಿಪ್ರಾಯ ಪಡುತ್ತಾರೆ. -೧೫

ಪಾರ್ಶ್ವನಾಥ ಮಹಾವೀರರು ಪ್ರಚಾರ ಮಾಡಿದ ಜೈನ ಧರ್ಮದಲ್ಲಿ ಬೇರೆ ಬೇರೆ ಪಂಗಡಗಳಿರಲಿಲ್ಲ. ಮಹಾವೀರನಿಂದ ಈಚೆಗೆ ಜೈನಧರ್ಮದ ಶ್ವೇತಾಂಬರ, ದಿಗಂಬರವೆಂದು ಎರಡು ಪ್ರಮುಖ ಪಂಗಡಗಳಾಗಿ ಒಡೆಯಿತು. ಈಗ ಶ್ವೇತಾಂಬರ ಸಂಪ್ರದಾಯವು ಉತ್ತರಭಾರತದಲ್ಲಿಯೂ ಪ್ರಚಲಿತವಾಗಿದೆ. ಪ್ರಾಚೀನ ಕರ್ನಾಟಕದಲ್ಲಿ ಅಲ್ಲಲ್ಲಿ ಶ್ವೇತಾಂಬರರು ಇದ್ದರೂ ಈ ಪಂಗಡ ಅಷ್ಟು ಪ್ರಬಲವಾಗಿರಲಿಲ್ಲ ದಿಗಂಬರ ಸಂಪ್ರದಾಯವೇ ಅತ್ಯಂತ ಪ್ರಬಲವಾದುದಾಗಿತ್ತು. ಕರ್ನಾಟಕದಲ್ಲಿ ಜೈನಧರ್ಮವೆಂದರೆ ಮುಖ್ಯವಾಗಿ ದಿಗಂಬರ ಸಂಪ್ರದಾಯ ಜೈನ ಧರ್ಮವೆಂದೇ ಅರ್ಥ. ಶ್ವೇತಾಂಬರ ಮತ್ತು ಯಾಪನೀಯ ಮುಂತಾದ ಶಾಖೆಗಳಿಗಿಂತ ಅತ್ಯಂತ ಪ್ರಬಲವಾಗಿದ್ದ ಜೈನ ಶಾಖೆಯದು. ಕ್ರಿ.ಶ. ಪೂರ್ವದ ಶತಕಗಳಲ್ಲಿಯೇ ಇವರು ಕರ್ನಾಟಕಕ್ಕೆ ಬಂದರು. ಭದ್ರಬಾಹುವಿನ ನೇತೃತ್ವ ಇವರಿಗೆ ದೊರೆಯಿತು. ಮೊದಮೊದಲು ಬೆಟ್ಟಗುಡ್ಡಗಳಲ್ಲಿ ತಮ್ಮ ಕೇಂದ್ರಗಳನ್ನು ಸ್ಥಾಪಿಸಿಕೊಂಡು ಅಲ್ಲಿಂದ ಧರ್ಮವನ್ನು ಪ್ರಚಾರ ಮಾಡಿದರು. ಕರ್ನಾಟಕದಲ್ಲಿ ಜೈನರು ಆರಂಭದಲ್ಲಿ ಮುಖ್ಯವಾಗಿ ಆರಿಸಿಕೊಂಡ

ಸ್ಥಳಗಳು ಎರಡು, ಉತ್ತರ ಕರ್ನಾಟಕದ ಕೊಪ್ಪಳ, ದಕ್ಷಿಣ ಕರ್ನಾಟಕದ ಶ್ರವಣಬೆಳಗೊಳ.

ಕುಪಣ, ಕೊಪಣ ಎಂಬ ರೂಪಗಳು ಶಾಸನಗಳಲ್ಲಿ ಕಂಡುಬರುತ್ತವೆ. ಶ್ರೀವಿಜಯ ಕವಿರಾಜಮಾರ್ಗದಲ್ಲಿ ಕೊಪ್ಪಳವನ್ನು ಕನ್ನಡದ ತಿರುಳ್ ಎನ್ನಿಸಿಕೊಂಡ ಪ್ರದೇಶದ ಗಡಿಗಳಲ್ಲಿ ಒಂದು ಎಂದು ಗುರುತಿಸುತ್ತಾನೆ. ಶ್ರವಣ ಬೆಳಗೊಳದ ಶಾಸನಗಳಲ್ಲಿ ಇದನ್ನು ಆದಿತೀರ್ಥವೆಂದೂ ಕರೆದಿದೆ. ದಂಡನಾಯಕ ಗಂಗರಾಜನು ಅನೇಕ ಜಿನಾಲಯಗಳನ್ನು ಜೀರ್ಣೋದ್ಧಾರ ಮಾಡಿಸಿ ಹೊಸದಾಗಿ ಕಟ್ಟಿಸಿದ್ದರಿಂದ, 'ಗಂಗವಾಡಿ ತೊಂಬತ್ತಾರು ಸಾಸಿರಂ ಕೊಪಣಮಾದುದು' ಎಂದಿದೆ ಶಾಸನವೊಂದರಲ್ಲಿ. - ೧೬/ ರನ್ನನು ಅತ್ತಿಮಬ್ಬೆಯ ಚರಿತವನ್ನು ವರ್ಣಿಸುವಾಗ ಅದು ನೆಗಳ್ದ ಕೊಪಣಾಚಲದಂತೆ'' -೧೭ ಪೂಜನೀಯವಾಗಿತ್ತೆಂದು ಹೇಳುತ್ತಾನೆ.

ಶ್ರವಣ ಬೆಳಗೊಳದಲ್ಲಿನ ಅತ್ಯಂತ ಪ್ರಾಚೀನ ಶಾಸನವೆಂದರೆ ಸು ೬೦೦ರ ಶಾಸನ. ಅದರಲ್ಲಿ ಶ್ರವಣಬೆಳಗೊಳದ ಚಿಕ್ಕಬೆಟ್ಟವನ್ನು 'ಕಟವಪ್ರ' ಎಂದು ಕರೆದಿದೆ. ಇದು ಬಹುಶಃ ಕನ್ನಡದ 'ಕಳ್ವಪ್ಪು' ಎಂಬ ಪದದ ಸಂಸ್ಕೃತೀಕರಣವಿರಬೇಕು. ಕನ್ನಡ ಶಾಸನಗಳಲ್ಲಿ ಚಿಕ್ಕಬೆಟ್ಟವನ್ನು 'ಕಳ್ವಪ್ಪು' ಎಂದೂ ದೊಡ್ಡಬೆಟ್ಟವನ್ನು 'ಪೆರ್ಗಳ್ವಪ್ಪು' ಎಂದೂ ಕರೆದಿದೆ. ಶ್ರವಣಬೆಳಗೊಳದಲ್ಲಿ ಈಗಲೂ ಇರುವ ಸುಂದರ ಕೊಳದಿಂದ ಆ ಊರಿಗೆ ಆ ಹೆಸರು ಬಂದಿತು.

ಕರ್ನಾಟಕದಲ್ಲಿ ಜೈನಧರ್ಮಕ್ಕೆ ಕದಂಬರು, ಗಂಗರು, ರಾಷ್ಟ್ರಕೂಟರು, ಚಾಳುಕ್ಯರು, ಹೊಯ್ಸಳರು ಪ್ರೋತ್ಸಾಹ ನೀಡಿದರು. ಇವರ ಪ್ರೋತ್ಸಾಹದಿಂದ ಜೈನಧರ್ಮ ಕರ್ನಾಟಕದಲ್ಲಿ ಹನ್ನೆರಡನೆ ಶತಮಾನದವರೆಗೆ ಬೆಳೆದು ತುಂಬಾ ಪ್ರಭಾವಯುತವಾದ ಧರ್ಮವಾಗಿ ಬೆಳಗಿತು. ಗಂಗರ ರಾಷ್ಟ್ರೀಯ ಧರ್ಮವೇ ಜೈನ ಧರ್ಮವಾಗಿತ್ತು . ಕದಂಬರು ವೈದಿಕರಾಗಿದ್ದರೂ ಜೈನಧರ್ಮಕ್ಕೆ ಪ್ರೋತ್ಸಾಹ ಕೊಟ್ಟಿದ್ದರು. ಆ ಕಾಲದ ತಾಮ್ರ ಫಲಕವೊಂದರ ಕೊನೆಯಲ್ಲಿ ''ಎಲ್ಲಿ ಜಿನೇಂದ್ರ ಪೂಜೆ ನಡೆಯುತ್ತದೆಯೋ ಆ ದೇಶವೂ ವೃದ್ಧಿಯಾಗುತ್ತದೆ, ನಗರಗಳು ನಿರ್ಭಯವಾಗಿರುತ್ತವೆ, ಆ ದೇಶದ ರಾಜನು ಊರ್ಜಿತನಾಗುತ್ತಾನೆ ಎಂದಿದೆ.'' - ೧೮ ರಾಷ್ಟ್ರಕೂಟರು ಶಿವಭಕ್ತರಾಗಿದ್ದರೂ ಜೈನಧರ್ಮದ ಕಡೆಗೆ ಅವರ ಒಲವು ವಿಶೇಷವಾಗಿದ್ದಿತು. ಕ್ರಿ.ಶ. ೯೮೦ ಸೌದತ್ತಿಯ ಶಾಸನವೊಂದರಲ್ಲಿ ಬಸದಿಯೊಂದನ್ನು 'ರಟ್ಟರ ಪಟ್ಟಜಿನಾಲಯ'ವೆಂದು ಕರೆದು ರಾಷ್ಟ್ರಕೂಟರಿಂದ ಜಿನ ಧರ್ಮವು ಪಡೆದ ಪ್ರೋತ್ಸಾಹದ ವಿವರಗಳನ್ನು ಕೊಟ್ಟಿದೆ. ಹತ್ತನೇಯ ಶತಮಾನದಲ್ಲಿ ಗಂಗ ಚಮೂಪತಿ, ಚಾವುಂಡರಾಯ, ರಾಷ್ಟ್ರಕೂಟ ರಾಜ್ಯದ ಶಂಕರಗಂಡ, ಚಾಲುಕ್ಯ ರಾಜ್ಯದಲ್ಲಿದ್ದ ಅತ್ತಿಮಬ್ಬೆ ಇವರ ಜೈನನಿಷ್ಠೆಯ ಸಾರವನ್ನು ಉಂಡು ಜೈನಧರ್ಮವು ಪುಷ್ಟವಾಯಿತು.

ಜೈನಧರ್ಮವನ್ನು ಜನಪ್ರಿಯಗೊಳಿಸಲು ಕನ್ನಡ ಕವಿಗಳು ಕಾವ್ಯಗಳನ್ನು ರಚಿಸಿದರು. ಅದರಲ್ಲಿ ಪಂಪ, ಪೊನ್ನ, ರನ್ನ, ಜನ್ನ, ನಾಗವರ್ಮ ಮುಂತಾದವರು ಪ್ರಮುಖರು ಹನ್ನೆರಡನೇ ಶತಮಾನದಲ್ಲಿ ಶಾಂತಲೆ, ಕನಕಿಯಬ್ಬರಸಿ ಮುಂತಾದವರಿಂದ ಈ ಧರ್ಮಕ್ಕೆ ಪ್ರೋತ್ಸಾಹ ದೊರಕಿತು. '' ಕರ್ನಾಟಕದಲ್ಲಿ ಜೈನಧರ್ಮದ ಇಳಿಮುಖದ ಚಿಹ್ನೆಗಳು ಹನ್ನೊಂದನೇ ಶತಮಾನದಲ್ಲಿ ಕಾಣಿಸಿಕೊಳ್ಳಲಾರಂಭವಾಗಿ ಹನ್ನೆರಡನೇ ಶತಮಾನದ ಕೊನೆಯ ಹೊತ್ತಿಗೆ ಅವು ಸ್ಪಷ್ಟವಾಗಿ ಕಣ್ಣಿಗೆ ಗೋಚರವಾಗುತ್ತವೆ.'' -೧೯

ಜೈನಧರ್ಮವು ಕನ್ನಡ ಸಂಸ್ಕೃತಿಗೆ ನೀಡಿದ ಕಾಣಿಕೆಯು ಅಪರಿಮಿತ ಮತ್ತು ಉಪಮಾತೀತ. ಕನ್ನಡ ಸಾಹಿತ್ಯದ ಆರಂಭದ ದೆಸೆಯಲ್ಲಿ ಕೃಷಿ ಮಾಡಿ ಅತ್ಯಮೂಲ್ಯ ಕೃತಿಗಳನ್ನು ರಚಿಸಿದವರು ಜೈನರು. ಕರ್ನಾಟಕದ ವಾಸ್ತು ಮತ್ತು ಶಿಲ್ಪಗಳಿಗೆ ಅವರದೇ ಆದ ವಿಶಿಷ್ಟ ಕೊಡುಗೆಗಳಿವೆ. ಕರ್ನಾಟಕಕ್ಕೆ ಅತ್ತಿಮಬ್ಬೆ ಮತ್ತು ಚಾವುಂಡರಾಯರಂತಹ ಮಹಾವ್ಯಕ್ತಿಗಳನ್ನು ಒದಗಿಸಿದ್ದು ಜೈನಧರ್ಮವೇ. ಅಹಿಂಸೆಯನ್ನೇ ಪ್ರತಿಪಾದಿಸುವ ಜೈನಧರ್ಮವು ಕರ್ನಾಟಕಕ್ಕೆ ಅನೇಕ ಯುದ್ಧ ವೀರರನ್ನು ಒದಗಿಸಿಕೊಟ್ಟಿತು. ಕನ್ನಡನಾಡಿನ ಜೀವನಕ್ಕೆ ಶಾಸ್ತ್ರದ ಬೆಳಕನ್ನು, ಕಾವ್ಯದ ತಂಪನ್ನು ತಂದುಕೊಟ್ಟ ಅದನ್ನು ರೂಪಿಸಿದವರು ಜೈನರು. - ೨೦ ಎಂದು ಡಾ. ಎಂ. ಚಿದಾನಂದ ಮೂರ್ತಿ ಅಭಿಪ್ರಾಯ ಪಡುತ್ತಾರೆ.

# ಕರ್ನಾಟಕದಲ್ಲಿ ಬೌದ್ಧ ಧರ್ಮ

ಕ್ರಿ.ಪೂ. ಮೂರನೇ ಶತಮಾನದಿಂದ ಕ್ರಿ.ಶ ಹದಿನಾರನೇ ಶತಮಾನದವರೆಗೆ ಕರ್ನಾಟಕದಲ್ಲಿ ಬೌದ್ಧ ಧರ್ಮವು ಪ್ರಚಲಿತವಾಗಿದ್ದಿತು ಎಂಬುದಕ್ಕೆ ಆಧಾರಗಳಿವೆ. ಆದರೆ ಈ ಧರ್ಮ ಕರ್ನಾಟಕದಲ್ಲಿ ಯಾವಾಗಲೂ ಪ್ರಬಲವಾದ ಧರ್ಮವಾಗಿರಲಿಲ್ಲ. ಆರಂಭದಿಂದ ಕ್ರಿ.ಶ. ಒಂದನೇ ಶತಮಾನದವರೆಗೆ ಹೀನಾಯಾನವೂ, ಇಲ್ಲಿಂದ ಮುಂದೆ ಆರೇಳು ಶತಮಾನಗಳವರೆಗೆ ಮಹಾಯಾನವೂ, ಸುಮಾರು ಏಳು ಎಂಟನೇ ಶತಮಾನಗಳಿಂದ ವಜ್ರಾಯಾನವೂ ಕರ್ನಾಟಕದಲ್ಲಿ ಪ್ರಚಾರಗೊಂಡವು. ಕರ್ನಾಟಕ ಸಂಸ್ಕೃತಿಗೆ ಬೌದ್ಧ ಧರ್ಮದ ಕೊಡುಗೆ ಏನು ಎಂಬುದನ್ನು ನಿರ್ಧರಿಸುವುದು ಸಧ್ಯದಲ್ಲಿ ಕಷ್ಟವಾಗಿದೆ. - ೨೧

ಕರ್ನಾಟಕದಲ್ಲಿ ಬೌದ್ಧ ಧರ್ಮದ ಅತ್ಯಂತ ಪ್ರಾಚೀನ ಕುರುಹುಗಳೆಂದರೆ ಮಧ್ಯ ಕರ್ನಾಟಕದ ಚಿತ್ರದುರ್ಗ ಜಿಲ್ಲೆಯ ಸಿದ್ದಾಪುರ, ಜಟಿಂಗ ರಾಮೇಶ್ವರ, ಬ್ರಹ್ಮಗಿರಿಗಳಲ್ಲಿ, ಉತ್ತರ ಕರ್ನಾಟಕದ ಮಸ್ಕಿ ಮತ್ತು ಕೊಪ್ಪಳಗಳಲ್ಲಿ ಸಿಕ್ಕಿರುವ ಅಶೋಕನ ಕ್ರಿಸ್ತಪೂರ್ವ ಮೂರನೇ ಶತಮಾನದ ಶಾಸನಗಳು. ಈ ಶಾಸನಗಳು ಮೌರ್ಯ ಸಾಮ್ರಾಜ್ಯ ಇಲ್ಲಿಯವರೆಗೆ ಹಬ್ಬಿತ್ತು ಎಂಬುದಕ್ಕೆ ಇವು ಪ್ರಬಲವಾದ ಸಾಧನಗಳು. ಮಹಾವೀರ ಮತ್ತು ದೀಪವಂಶಗಳ ಪ್ರಕಾರ ಮೊಗ್ಗಲಿಪುತ್ರ ತಿಸ್ಸನು (ಅಶೋಕನನ್ನು ಬೌದ್ಧಧರ್ಮಕ್ಕೆ ಮತಾಂತರಗೊಳಿಸಿದವನು) ಥೇರನಾದ ಮಹಾದೇವನನ್ನೂ ಮಹಿಷಮಂಡಲಕ್ಕೂ ( ಈಗಿನ ಮೈಸೂರು) ರಖ್ಖಿತ ಎಂಬ ಥೇರನನ್ನು ವನವಾಸಿಗೂ ( ಈಗಿನ ಬನವಾಸಿ) ಬೌದ್ಧ ಧರ್ಮ ಪ್ರಚಾರಕ್ಕೆ ಕಳುಹಿಸಿಕೊಟ್ಟನು.

ಕ್ರಿಸ್ತಪೂರ್ವದ ಆರಂಭದ ಶತಕಗಳಲ್ಲಿ ಉನ್ನತಿಯನ್ನು ಹೊಂದಿದ್ದ ಚಂದ್ರವಳ್ಳಿಯಲ್ಲಿ ಬುದ್ಧನ ವಿಗ್ರಹಗಳು ಸಿಕ್ಕಿರುವುದರಿಂದ ಅಲ್ಲಿ ಬೌದ್ಧ ಧರ್ಮದ ಅನುಯಾಯಿಗಳಿದ್ದರು ಎಂದು ಊಹಿಸ ಬಹುದಾಗಿದೆ. -೨೨ ಕ್ರಿಸ್ತಶಕದ ಆರಂಭದ ಶತಮಾನಗಳಿಗೆ ಸೇರುವ ಗುಲ್ಬರ್ಗಾ ಜಿಲ್ಲೆ ಸನ್ನತಿಯ ಸುಮಾರು ಮೂವತ್ತಕ್ಕೂ ಮೀರಿದ ಚಿಕ್ಕ ಚಿಕ್ಕ ಪ್ರಾಕೃತ ಶಾಸನಗಳು ಬೌದ್ಧ ಧರ್ಮಕ್ಕೆ ಸಂಬಂಧಿಸಿವೆ. ಅಲ್ಲಿ ಸ್ತೂಪವೂ ಇತ್ತೆಂಬುದರ ಆಧಾರಗಳಿವೆ . ಸನ್ನತಿ ಒಂದು ಬೌದ್ಧ ಕೇಂದ್ರ ವೆಂಬ ಸಂಗತಿಯನ್ನು ಎಲ್ಲರ ಗಮನಕ್ಕೆ ತಂದವರು ಎಸ್.ನಾಗರಾಜ, ೧೯೬೨ ಸುಮಾರಿನಲ್ಲಿ ಆದರೆ ಅಲ್ಲಿಯ ಬೌದ್ಧಸ್ಮಾರಕಗಳನ್ನು ಕುರಿತು ಕಪಟರಾಳ ಕೃಷ್ಣರಾಯರು ೧೯೫೪ರಲ್ಲಿ ಲೇಖನ ಬರೆದಿದ್ದುದು ಗಮನಾರ್ಹ. (ಕರ್ನಾಟಕ ಸಂಸ್ಕೃತಿ ಸಂಶೋಧನೆ ಪು.೨೫೮-೯) ಕ್ರಿಸ್ತಶಕ ಆರಂಭದಲ್ಲಿ ಈ ಭಾಗವನ್ನು ಆಳುತ್ತಿದ್ದ ಶಾತವಾಹನರು ಬೌದ್ಧ ಧರ್ಮದ ಪಕ್ಷಪಾತಿಗಳಾಗಿದ್ದರು. ಕ್ರಿಸ್ತಶಕ ನಾಲ್ಕನೇಯ ಶತಮಾನದ

ತಾಮ್ರಲೇಖನವೊಂದು ' ಓಂ ನಮಃ ಶಿವಾಯ' ಎಂದು ಆರಂಭವಾಗಿ ಮಧ್ಯದಲ್ಲಿ ರಾಜನನ್ನು "ಪ್ರಾಣಿಗಳಿಗೆ ದಯೆತೋರುವುದರಲ್ಲಿ ಬೋಧಿಸತ್ವನನ್ನು ಹೋಲುವನು ಎಂದು ಹೊಗಳಿವೆ" - ೨೩

ಹೂಯೇನ್‌ತ್ಸಾಂಗನ ಪ್ರಕಾರ ಕೊಪ್ಪಳ ಅವನ ಕಾಲದಲ್ಲಿ ಬೌದ್ಧ ಕೇಂದ್ರವಾಗಿತ್ತು ಅವನು ಅದನ್ನು 'ಕೊಂಕಿನ ಪುಲೋ' ಎಂದು ಕರೆಯುತ್ತಾನೆ. - ೨೪

"ಒಂದು ಜನಾಂಗದ ಸಂಸ್ಕೃತಿಯ ಸಾಧನೆ ಸ್ಪಷ್ಟವಾಗಿ ಗೋಚರವಾಗುವುದು ಅದರ ಸಾಹಿತ್ಯದಲ್ಲಿ" ಭಾವನೆ ಮತ್ತು ಅನುಭವಗಳ ಅಭಿವ್ಯಕ್ತಿ ರೂಪವೇ ಸಾಹಿತ್ಯ ಕನ್ನಡದ ಮೊಟ್ಟಮೊದಲ ಶಾಸನ ಹಲ್ಮಿಡಿ ಶಾಸನದಿಂದ ಈವರೆಗೆ ರಚಿತವಾದ ಶಾಸನಗಳು ಕನ್ನಡ ಸಂಸ್ಕೃತಿಯನ್ನು ತೆರದಿಡುತ್ತವೆ. ಇದೇ ರೀತಿ ಕವಿರಾಜ ಮಾರ್ಗದಿಂದ ಹಿಡಿದು ಇಂದಿನವರೆಗೆ ರಚಿತವಾದ ಸಾಹಿತ್ಯದಲ್ಲಿ ಕನ್ನಡ ಸಂಸ್ಕೃತಿಯ ವಿವಿಧ ಮಜಲುಗಳನ್ನು, ಆಯಾಮುಗಳನ್ನು ಗುರುತಿಸಬಹುದಾಗಿದೆ. ಕವಿರಾಜಮಾರ್ಗಕಾರ ಕನ್ನಡ ನಾಡಿನ ವಿಸ್ತಾರವನ್ನು ವರ್ಣಿಸುತ್ತ ಕನ್ನಡ ನಾಡಿನ ಸಂಸ್ಕೃತಿ ಸ್ವರೂಪವನ್ನು ತಿಳಿಸುತ್ತಾನೆ,

ಕಾವೇರಿಯಿಂದಮಾ ಗೋ
ದಾವರಿವರ ಮಿರ್ಪ ನಾಡದಾ ಕನ್ನಡದೊಳ್
ಭಾವಿಸಿದ ಜನಪದಂ ವಸು
ಧಾವಳಯ ವಿಲೀನ ವಿಶದ ವಿಷಯ ವಿಶೇಷಂ.

ಕಾವೇರಿಯಿಂದ ಗೋದಾವರಿ ನದಿಗಳವರೆಗೆ ಇರುವ ನಾಡನ್ನು ಕರ್ನಾಟಕವೆಂದು ಶ್ರೀವಿಜಯ ಕವಿ ತಿಳಿಸುತ್ತಾನೆ. ಕನ್ನಡಿಗರ ರೂಪ, ಸ್ವಭಾವ, ವೀರತನ ಮುಂತಾದ ವಿಷಯಗಳನ್ನು ಮತ್ತು ಅವರ ಗುಣವಿಶೇಷವನ್ನು ತನ್ನ ಪದ್ಯಗಳಲ್ಲಿ ವ್ಯಕ್ತಪಡಿಸುತ್ತಾನೆ.

ಪದನರಿದು ನುಡಿಯಲುಂ
ನುಡಿದು ದನರಿದಾರಯಲುಮಾರ್ಪರಾ ನಾಡವರ್ಗಳ್
ಚದುರರ್ ನಿಜದಿಂ ಕುರಿತೋ
ದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್

ಕನ್ನಡ ನಾಡಿನ ಜನತೆ ವಿದ್ವತ್ ಸಂಪನ್ನರು, ಅರಿತು ಮಾತನಾಡುವ ಜಾಣ್ಮೆ ಮಾತಿನ ಅರ್ಥವನ್ನು ಅರಿಯಬಲ್ಲ ಚತುರತೆ " ಕುರಿತೋದದೆಯೇ ಕಾವ್ಯ ಪ್ರಯೋಗದಲ್ಲಿ ಪರಿಣತರಾದವರು ಕರ್ನಾಟಕದ ಜನತೆ ಎಂದು ಅಭಿಮಾನದಿಂದ ನುಡಿದಿದ್ದಾನೆ." ಕನ್ನಡ ಸಾಹಿತ್ಯಕ್ಕೆ ಧರ್ಮಶ್ರದ್ಧೆ ಮತ್ತು ವೀರ ಜೀವನಗಳೇ ಪ್ರಮುಖ ಪ್ರೇರಕ ಶಕ್ತಿಯಾಗಿವೆ. - ಎನ್ನುವ ತಿಪ್ಪೇರುದ್ರಸ್ವಾಮಿಯವರ ಮಾತು ಒಪ್ಪುವಂಥಹದಾಗಿದೆ. ಪಂಪನಿಂದ ಹಿಡಿದು ಹೊಸಗನ್ನಡ ಸಾಹಿತ್ಯ ಪ್ರಾರಂಭದವರೆಗೆ ಈ ಎರಡು ಪ್ರೇರಣೆಗಳು ಕನ್ನಡ ಸಾಹಿತ್ಯವನ್ನು ಮುನ್ನಡೆಸಿದವು.

# ಕರ್ನಾಟಕದ ವ್ಯಾಪ್ತಿ

ಇಂದಿನ ಕರ್ನಾಟಕ ೨೭ ಜಿಲ್ಲೆಗಳನ್ನೊಳಗೊಂಡ ಭೂಪ್ರದೇಶ. ಉತ್ತರದ ಬೀದರ್ ಜಿಲ್ಲೆಯಿಂದ ದಕ್ಷಿಣದ ಮೈಸೂರು ಜಿಲ್ಲೆಯವರೆಗೆ ಪೂರ್ವದ ಬಳ್ಳಾರಿಯಿಂದ ಪಶ್ಚಿಮದ ಕರಾವಳಿ ಜಿಲ್ಲೆಗಳಾದ ಉತ್ತರ ಕನ್ನಡ, ದಕ್ಷಿಣ ಕನ್ನಡ ಜಿಲ್ಲೆಗಳವರೆಗೆ ಹಬ್ಬಿರುವುದು ತಿಳಿದಿರುವ ವಿಷಯ.

ಪ್ರಾಚೀನ ಕರ್ನಾಟಕದ ಭೂಪ್ರದೇಶದ ವ್ಯಾಪ್ತಿಯನ್ನು ಮೊಟ್ಟಮೊದಲ ಬಾರಿಗೆ ಎಲ್ಲ ದೃಷ್ಟಿಯಿಂದಲೂ ಕನ್ನಡ ಆದ್ಯಗ್ರಂಥವಾದ ಕವಿರಾಜ ಮಾರ್ಗವು ಪ್ರಸ್ತಾಪಿಸುತ್ತದೆ. ಈ ಗ್ರಂಥವು ಕವಿ ಶ್ರೀವಿಜಯನು ಕನ್ನಡಿಗರ ಗುಣವಿಶೇಷವನ್ನು ಹೇಳುತ್ತ ಕರ್ನಾಟಕದ ವ್ಯಾಪ್ತಿಯನ್ನು ಸ್ಪಷ್ಟಪಡಿಸುತ್ತದೆ.

'ಕಾವೇರಿಯಿಂದಾ ಗೋದಾವರಿವರ ಮಿರ್ಪ ನಾಡದಾ ಕನ್ನಡದೊಳ್' ಎನ್ನುವ ಪದ್ಯವನ್ನೋದಿದಾಗ ಕನ್ನಡ ಮಾತನಾಡುವ ಜನಾಂಗ ಇದ್ದ ಪ್ರದೇಶ ಗೋದಾವರಿ ನದಿ ಪ್ರದೇಶದ ವರೆಗೆ ಹಬ್ಬಿತ್ತು ಎನ್ನುವ ವಿಚಾರ ತಿಳಿದು ಬರುತ್ತದೆ. ಆದರೆ ಇಂದು ಗೋದಾವರಿ ನದಿ ಮಹಾರಾಷ್ಟ್ರದ ಭೂಪಟದಲ್ಲಿ ಇರುವುದನ್ನು ಕಾಣಬಹುದಾಗಿದೆ.

ಡಾ|| ಎಂ.ಚಿದಾನಂದ ಮೂರ್ತಿಯವರು ಕನ್ನಡ ಸಂಸ್ಕೃತಿಯ ನೆಲೆಗಳನ್ನು ನೇಪಾಳ ಪ್ರದೇಶದಲ್ಲಿಯೂ ಇತ್ತೀಚೆಗೆ ಗುರುತಿಸಿದ್ದಾರೆ. ಶಂ.ಬಾ. ಜೋಶಿಯವರು ಮಹಾರಾಷ್ಟ್ರದ ಬಹುಪ್ರದೇಶ ಕನ್ನಡಿಗರದ್ದೇ ಆಗಿತ್ತು ನಂತರ ಮರ್‍ಹಾಟ ಎನ್ನುವ ಜನಾಂಗ ಮಹಾರಾಷ್ಟ್ರದ ಉಗಮಕ್ಕೆ ಕಾರಣವಾಗುವ ಅಂಶಗಳನ್ನು ಗುರುತಿಸಿದ್ದಾರೆ. ಕನ್ನಡಿಗರ ಉದಾರ ಮನೋಭಾವ ಸ್ವೀಕರಣ ಮನೋಭಾವ ಕರ್ನಾಟಕದ ವಿಶೇಷ ಸಂಸ್ಕೃತಿಗೆ ಕಾರಣವಾದರೂ ಭೌಗೋಳಿಕವಾಗಿ ಭೂಪ್ರದೇಶ ಸಂಕುಚಿತಗೊಳ್ಳುತ್ತ ಬಂದದ್ದು ವಿಪರ್ಯಾಸವಾಗಿದೆ. ಈಗಲೂ ಮಹಾರಾಷ್ಟ್ರದ ಗಡಿಯಲ್ಲಿ ಮರಾಠ ಭಾಷಿಕರಿಂದ, ತೆಲುಗು ಗಡಿ ಪ್ರದೇಶಗಳಲ್ಲಿ ತೆಲುಗು ಭಾಷಿಕರಿಂದ, ತಮಿಳುನಾಡಿನಲ್ಲಿ ತಮಿಳು ಭಾಷಿಕರಿಂದ ಒತ್ತುವರಿ ಸಂಸ್ಕೃತಿಗೆ ಒಳಗಾಗುತ್ತಿರುವುದು ಐತಿಹಾಸಿಕ ಸತ್ಯವೇ ಆಗಿದೆ. ಕರ್ನಾಟಕದ ನೆಲ ಜಲಗಳು ಅನ್ಯ ಭಾಷಿಕರ ಆಕ್ರಮಣಕ್ಕೆ ತುತ್ತಾಗಿ ಕನ್ನಡ ಸಂಸ್ಕೃತಿ ಗಡಿ ಭಾಗದಲ್ಲಿ ಅಪಾಯವನ್ನು ಎದುರಿಸುವಂತಾಗಿರುವದು ಆಧುನಿಕ ಕರ್ನಾಟಕದ ಸಮಸ್ಯೆಗಳಲ್ಲಿ ಒಂದಾಗಿದೆ.

# ಕರ್ನಾಟಕದಲ್ಲಿ ಧರ್ಮ ಸಮನ್ವಯ

ಕರ್ನಾಟಕ ಧರ್ಮ ಸಮನ್ವಯ ಭೂಮಿ. ಅನೇಕ ಧರ್ಮಗಳಿಗೆ ಅದು ಅಶ್ರಯಸ್ಥಾನವಾಯಿತು. ನಾಡಿನ ಇತಿಹಾಸದ ಪ್ರಾರಂಭದಲ್ಲಿಯೇ ಜೈನಧರ್ಮ ಇಲ್ಲಿಗೆ ಕಾಲಿಟ್ಟು ರಕ್ಷಣೆಯನ್ನು ಪಡೆದು ಬೆಳೆಯಿತು. ಅಶೋಕನ ಬೌದ್ಧ ಧರ್ಮ ಪ್ರಚಾರಕ್ಕೆ ಇದು ಕೇಂದ್ರವಾಗಿತ್ತು. ಅನಂತರ ಶೈವ ಧರ್ಮ ವಿಶೇಷ ಪ್ರಾಬಲ್ಯಕ್ಕೆ ಬಂದಿತು, ಶಂಕರಾಚಾರ್ಯರ ಅದ್ವೈತ ಪೀಠ ಇಲ್ಲಿ ಸ್ಥಾಪಿತವಾಯಿತು. ವೀರಶೈವ ಧರ್ಮವೂ ಹೊಸ ತತ್ವದ ತಳಹದಿಯ ಮೇಲೆ ಬೆಳೆಯಿತು. ಶ್ರೀರಾಮಾನುಜರನ್ನು ಅವರ ಜನ್ಮಭೂಮಿಯಾದ ತಮಿಳುನಾಡು ಹೊರದೂಡಲು ಕನ್ನಡ ದೇಶ ಅವರಿಗೆ ಆಶ್ರಯವನ್ನಿತ್ತು ವೈಷ್ಣವ ಧರ್ಮವನ್ನು ಸ್ವಾಗತಿಸಿತು. ಮದ್ವಾಚಾರ್ಯರಂತೂ ಕನ್ನಡದ ನೆಲದಲ್ಲಿಯೇ ಹುಟ್ಟಿ ಬೆಳೆದು ತಮ್ಮ ಸಿದ್ಧಾಂತವನ್ನು ಪ್ರತಿಷ್ಠಾಪಿಸಿದ ಆಚಾರ್ಯರು. ಹೀಗೆ ಎಲ್ಲ ಧರ್ಮಗಳನ್ನು ಸಮಾನಭಾವನೆಯಿಂದ ಕಾಣುವ ಸಮನ್ವಯ ಸಂಸ್ಕೃತಿ ಕರ್ನಾಟಕದ ಸಹಜ ಗುಣ, ಕನ್ನಡ ರಾಜರ ಉದಾತ್ತ ಆದರ್ಶ. - ೨೫

'ಕರ್ನಾಟಕ ಸಂಸ್ಕೃತಿ' ಯ ಚಿತ್ರವನ್ನು ಮೇಲಿನ ಮಾತು ಚೆನ್ನಾಗಿ ಬಿಂಬಿಸುತ್ತದೆ. ಶೈವ, ವೈಷ್ಣವ, ವೀರಶೈವ, ಜೈನ, ಬೌದ್ಧ ಧರ್ಮಗಳ ಸಮನ್ವಯ ಕರ್ನಾಟಕದಲ್ಲಿ ಕಾಣುತ್ತೇವೆ. ಬ್ರಹ್ಮ, ವಿಷ್ಣು, ಮಹೇಶ್ವರ ಈ ಮೂರ್ತಿಗಳನ್ನು ಏಕ ಕಾಲದಲ್ಲಿ ಸ್ಥಾಪನೆ ಮಾಡಿದುದನ್ನು ಬಾದಾಮಿಯ ಶಾಸನ - ೨೬.ತಿಳಿಸುತ್ತದೆ.

೨ನೇ ಜಯಸಿಂಹನ ಅಕ್ಕ ಅಕ್ಕಾದೇವಿ ಎನ್ನುವವಳು ಜೈನ, ಬೌದ್ಧ, ವೈಷ್ಣವ, ಶೈವ ಈ ಎಲ್ಲ ಧರ್ಮಗಳ ಪ್ರಕ್ರಿಯೆಗಳನ್ನು ತಾನೇ ಸ್ವತಃ ಆಚರಿಸಿ ತೋರುತ್ತಿದ್ದಳಂತೆ -೨೭

ಹೊಯ್ಸಳ ಅರಸರು, ವಿಜಯನಗರ ಅರಸರು ಧಾರ್ಮಿಕ ಸಾಮರಸ್ಯಕ್ಕೆ ತಮ್ಮದೇ ಆದ ಕೊಡುಗೆಗಳನ್ನು ಸಲ್ಲಿಸಿದ ಬಗ್ಗೆ ಶಾಸನಗಳಲ್ಲಿ ವಿವರಗಳು ದೊರೆಯುತ್ತವೆ. ಹೊಯ್ಸಳ ಅರಸು ವಿಷ್ಣುವರ್ಧನನು ರಾಮಾನುಜರ ಪ್ರಭಾವದಿಂದ ವೈಷ್ಣವ ಮತಕ್ಕೆ ಮತಾಂತರಗೊಂಡರೂ, ೧೧೨೮ರಲ್ಲಿ ಯಾದವಪುರದ ಒಂದು ಶಿವಾಲಯಕ್ಕೆ ದಾನಕೊಟ್ಟಿರುವದು ಉಕ್ತಿಯಾಗಿದೆ.

# ಕರ್ನಾಟಕ ಸಂಸ್ಕೃತಿಯಲ್ಲಿ ಶರಣ ಸಾಹಿತ್ಯ ಮತ್ತು ಚಳುವಳಿ

ಕರ್ನಾಟಕದಲ್ಲಿ ವೀರಶೈವ ಶರಣ ಚಳುವಳಿಯು ಕರ್ನಾಟಕ 'ಸಂಸ್ಕೃತಿ' ಶ್ರೀಮಂತಿಕೆಗೆ ವಿಶೇಷ ಕಾರಣವಾಗಿದೆ. ಸಾಮಾಜಿಕ, ಸಮಾನತೆ ಮತ್ತು ಧಾರ್ಮಿಕ ತಾತ್ವಿಕ ನೆಲೆಗಟ್ಟಿನ ಮೇಲೆ ಜನ್ಮ ತಳೆದ ಈ ಸಂಸ್ಕೃತಿ ವಿಶ್ವಮಾನ್ಯ ಸಂಸ್ಕೃತಿಗೆ ಸಮಾನವಾಗಿ ನಿಲ್ಲುವಂತಹದಾಗಿದೆ. ವೈಚಾರಿಕ ನಿಲುವುಗಳು, ಹೊಸ ದೃಷ್ಟಿಯೊಂದಿಗೆ ಬೆರೆತು ಸಾಮಾಜಿಕ ಜಾಢ್ಯವನ್ನು ದೂರಮಾಡಿದವು. ಜಡ್ಡುಗಟ್ಟಿದ ವ್ಯವಸ್ಥೆಗೆ ಕನ್ನಡಿ ಹಿಡಿದು ಅದರ ವಿರೂಪವನ್ನು ವಚನಗಳ ಮೂಲಕ ಅನಾವರಣಗೊಳಿಸುತ್ತ ಸಾಗಿ, ವರ್ಣಾಶ್ರಮ ಧರ್ಮದ ಲೋಪ - ದೋಷಗಳಿಗೆ ವಚನ ಕ್ರಾಂತಿಯ ಮೂಲಕ ಔಷಧೋಪಚಾರವನ್ನು ಈ ಸಂಸ್ಕೃತಿ ನೀಡಿತು. ಬಸವಣ್ಣ, ಅಲ್ಲಮಪ್ರಭು, ದೇವರ ದಾಸಿಮಯ್ಯ, ಸಿದ್ದರಾಮ, ಅಕ್ಕಮಹಾದೇವಿ ಮೊದಲಾದ ಶಿವಶರಣರು ಪ್ರತಿಭಟನೆಯ ಹೊನಲುಗಳನ್ನು ಸೇರಿಸಿಕೊಂಡು ೧೨ನೇ ಶತಮಾನದಲ್ಲಿ ಎಸಗಿದ ಕ್ರಾಂತಿ ಕರ್ನಾಟಕದ ಧಾರ್ಮಿಕ ಮತ್ತು ಸಾಮಾಜಿಕ ಬದುಕಿಗೆ ಒಂದು ಹೊಸ ಆಯಾಮವನ್ನು ಕಲ್ಪಿಸಿಕೊಟ್ಟಿತು.

ದಲಿತರಾದ ಡೋಹರಕಕ್ಕಯ್ಯ, ಮಾದಾರ ಚೆನ್ನಯ್ಯ, ಮಹಿಳೆಯರಾದ ಅಕ್ಕಮಹಾದೇವಿ, ಮುಕ್ತಾಯಕ್ಕ ಮುಂತಾದವರು ವಚನಗಳನ್ನು ರಚಿಸುವುದರ ಮೂಲಕ ಈ ವೈಚಾರಿಕ ಕ್ರಾಂತಿಗೆ ತಮ್ಮ ಕೊಡುಗೆ ಸಲ್ಲಿಸಿದರು. ಕರ್ನಾಟಕದಲ್ಲಿ ಸ್ತ್ರೀ ಸ್ವಾತಂತ್ರ್ಯವನ್ನು ಈ ಚಳುವಳಿ ಎತ್ತಿ ಹಿಡಿಯಿತು. ದಲಿತರಿಗೆ ಸಾಮಾಜಿಕ, ರಾಜಕೀಯ, ಆರ್ಥಿಕ ಸ್ಥಾನಮಾನಗಳನ್ನು ನೀಡುವ ಪ್ರಯತ್ನ ನಡೆಯಿತು. ಮುಖ್ಯ ಪ್ರವಾಹದಲ್ಲಿ ಸ್ತ್ರೀಯರನ್ನು ದಲಿತರನ್ನು ಈ ಚಳುವಳಿ ಸೇರಿಸಿಕೊಂಡಿತು. ಈ ಚಳುವಳಿಯ ಕೇಂದ್ರ ವ್ಯಕ್ತಿ ಬಸವಣ್ಣನೆಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಬಸವಣ್ಣನಂಥ ಆದರ್ಶ ದಾರ್ಶನಿಕ ವ್ಯಕಿ ಕರ್ನಾಟಕದಲ್ಲಿ ಈ ಚಳುವಳಿಯ ನೇತಾರನಾಗಿ, ಸಮಾನ ಮನಸ್ಕ ಶರಣರೊಂದಿಗೆ ಕೂಡಿಕೊಂಡು ಹೊಸ ಯುಗದ ಹರಿಕಾರರಾದುದು ಸ್ಮರಣಾರ್ಹವಾದುದಾಗಿದೆ. ಹಿರಿಯ ವಚನಕಾರ ಮೊದಲ ವೀರಶೈವನೆಂದರೆ ಈ ವರೆಗೆ ತಿಳಿದ ಪ್ರಕಾರ ದೇವರ ದಾಸಿಮಯ್ಯ ಇವನು ಕ್ರಿ.ಶ. ೧೦೪೦ರಲ್ಲಿ ಆಳುತ್ತಿದ್ದ ಚಾಲುಕ್ಯ ಚಕ್ರವರ್ತಿ ಜಯಸಿಂಹನ ಪತ್ನಿ ಸುಗ್ಗಲೆಯ ಗುರು ಮತ್ತು ವಾದದಲ್ಲಿ ಜೈನರನ್ನು ಸೋಲಿಸವನೆಂದು ತಿಳಿದು ಬರುತ್ತದೆ. ಮೊದಲ ವೀರಶೈವ ಕವಿ ಕೊಂಡಗುಳಿ ಕೇಸಿರಾಜ. ಕ್ರಿ.ಶ. ೧೧೨೦.

ವಚನಕಾರರು ಮಾಡಿದ ಕೆಲಸವೆಂದರೆ ವರ್ಣ ಸಮಾಜದ ಮೇಲ್ತುದಿಯಲ್ಲಿರುವವರ 'ಶ್ರೇಷ್ಠತ್ವ'ವನ್ನು ಕೆಳಹಂತದಲ್ಲಿರುವ ಅಸ್ಪೃಶ್ಯರ 'ಕನಿಷ್ಠತ್ವ'ವನ್ನು ಒಂದೇ ಏಟಿಗೆ ನಿರಾಕರಿಸಿದ್ದು

ಎಂದು ರಹಮತ್ ತರಿಕೆರೆ ಗುರುತಿಸುತ್ತಾರೆ. (ಪ್ರತಿಸಂಸ್ಕೃತಿ, ಪು-೧೦) ಕರ್ನಾರ್ಟಕದಲ್ಲಿ ಹುಟ್ಟಿಕೊಂಡು ವೀರಶೈವ ಚಳುವಳಿ ಕರ್ನಾಟಕದ ಜನ ಜೀವನದ ಮೇಲೆ ವಿಶೇಷ ಪ್ರಭಾವವನ್ನು ಬೀರಿತು. 'ಕಾಯಕವೇ ಕೈಲಾಸ'ವೆಂಬ ವಿಷಯವನ್ನು ಜನತೆಗೆ ಬೋಧಿಸುತ್ತ ಜೀವನ್ಮುಕ್ತಿ ಪಡೆಯಲು ಯಜ್ಞಗಳನ್ನು ಮಾಡುವ ಅವಶ್ಯಕತೆಯಿಲ್ಲವೆಂದು ಸಾರಿದರು. ಕನ್ನಡ ಭಾಷೆಗೆ ದೈವತ್ವದ ಸ್ಥಾನಮಾನವನ್ನು ನೀಡಿ ಸಂಸ್ಕೃತ ಭಾಷೆಯನ್ನು ಇವರು ತಿರಸ್ಕರಿಸಿದರು. ವೀರಶೈವ ಧರ್ಮ ಶರಣ ಪರಂಪರೆಯನ್ನೇ ಕರ್ನಾಟಕದಲ್ಲಿ ಸೃಷ್ಟಿಸಿತು. ವಚನಗಳ ಮೂಲಕ ಸರಳ ಸಾಮಾನ್ಯ ಜೀವನ ತತ್ವಗಳನ್ನು ಇವರು ಪ್ರಚುರ ಪಡಿಸಿದರು.

# ಭಾರತೀಯ ಸಂಸ್ಕೃತಿಯ ವಿಚಾರಗಳು

ಪ್ರಪಂಚದಲ್ಲಿ ಭಾರತವೆಂದು ' ಇಂಡಿಯಾ ' ಎಂದು ಕರೆಯಿಸಿಕೊಳ್ಳುವ ಈ ದೇಶಕ್ಕೆ ತನ್ನದು ಎಂದು ಹೇಳಿಕೊಳ್ಳುವಂಥ ಒಂದು ಸಂಸ್ಕೃತಿ ಇದೆ. ಜಗತ್ತಿನ ಹಲವು ದೇಶಗಳ ಸಂಸ್ಕೃತಿಗಳಿಗಿಂತ ಭಾರತೀಯ 'ಸಂಸ್ಕೃತಿ' ಎಂಬುದು ಭಿನ್ನವಾಗಿದೆ. ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ಗುಜರಾತದಿಂದ ಸಿಕ್ಕಿಂ ರಾಜ್ಯದ ವ್ಯಾಪ್ತಿಯೊಳಗೆ ಇರುವ ಆಧುನಿಕ ಭಾರತವನ್ನು ಹೊರತುಪಡಿಸಿ ಪ್ರಾಚೀನ ಭಾರತದ ವ್ಯಾಪ್ತಿಯನ್ನು ಪ್ರಧಾನವಾಗಿಟ್ಟುಕೊಂಡು ನೋಡಿದರೂ ಭಾರತಕ್ಕೆ ಅದರದೇ ಆದ ಸಂಸ್ಕೃತಿ ಇರುವದನ್ನು ಗಮನಿಸಬಹುದು. ಆದರೆ ಈ ಸಂಸ್ಕೃತಿ ಎಂದಿನಿಂದ ಪ್ರಾರಂಭವಾಯಿತು ಮತ್ತು ಇದರ ಆದಿ ಯಾವುದು ಎಂಬುದು ಮಾತ್ರ ನಿರ್ಧರಿಸಲು ಸಾಧ್ಯವಾಗುವುದಿಲ್ಲ. ''ಮಹಾಮೇಧಾವಿಗಳಾದ ಹಲವು ಇತಿಹಾಸ ತಜ್ಞರು ಸಿಂಧೂ ಕಣಿವೆಯ ನಾಗರೀಕತೆಯು ಋಗ್ವೇದಕ್ಕಿಂತಲೂ ಪ್ರಾಚೀನವಾದುದೆಂದೂ ಹೇಳುತ್ತಾರೆ. ಈ ಅಭಿಪ್ರಾಯವನ್ನು ಸ್ವೀಕರಿಸಿ ಋಗ್ವೇದಕ್ಕಿಂತ ಇನ್ನೂ ಹಿಂದಕ್ಕೆ ಹೋಗಿ ನೋಡೋಣವೆಂದರೆ ಆಗಲೂ ಕೂಡಾ ಇಲ್ಲಿಯ ನಾಗರೀಕತೆಯು ನಮ್ಮನ್ನು ದಿಗ್ಭ್ರಾಂತಿಗೊಳಿಸುವಷ್ಟು ಅತ್ಯಂತ ಕೃತಕವಾದ ನಗರ ನಾಗರೀಕತೆಯಿಂದ ಕೂಡಿ ಪ್ರಗತಿಪರವಾದ ರೂಪದಿಂದ ದಿಗಂತದಲ್ಲಿ ಗೋಚರಿಸುತ್ತವೆ. ವಸ್ತುಸ್ಥಿತಿ ಹೀಗಿರುವುದರಿಂದ ಭಾರತ ಸಂಸ್ಕೃತಿಯು ಪ್ರಪ್ರಥಮವಾದ ಪ್ರಾರಂಭ ದೆಸೆಯನ್ನು ಕುರಿತು ವಿವೇಚಿಸುವದು ಬಹಳ ಕಷ್ಟ '' - ೨೮ ಈ ಮಾತು ಭಾರತೀಯ ಸಂಸ್ಕೃತಿಯ ಪ್ರಾರಂಭವನ್ನು ಗುರುತಿಸುವುದು ಕಷ್ಟಕರ ಎಂಬ ವಿಷಯದ ಮೇಲೆ ಬೆಳಕನ್ನು ಚೆಲ್ಲುತ್ತದೆ ಭಾರತದ ಸಂಸ್ಕೃತಿಗೆ ವೇದಗಳು ಮೂಲ ಎಂದು ಒಪ್ಪಿಕೊಂಡು ವೈದಿಕ ಸಂಸ್ಕೃತಿಯಿಂದ ಭಾರತೀಯವೆನ್ನಿಸಬಹುದಾದ ಒಂದು ಸಂಸ್ಕೃತಿ ಪ್ರಾರಂಭವಾಯಿತೆಂದು ಒಪ್ಪಿಕೊಂಡರೂ ಅದಕ್ಕಿಂತ ಹಿಂದೆ ಇದ್ದ ಸಂಸ್ಕೃತಿಯನ್ನು ನಿರಾಕರಿಸಿದಂತಾಗುತ್ತದೆ. '' ಭಾರತದ ಮೊಟ್ಟ ಮೊದಲ ಸಂಸ್ಕೃತಿಯನ್ನು ರೂಢಿಸಿ ಬೆಳೆಸಿದವರು ಎಂದರೆ ದ್ರಾವಿಡರು ಅವರ ಕೃಷಿ ಕಾರ್ಯಗಳು, ಉತ್ಪಾದನಾ ಪ್ರಯತ್ನಗಳು, ಗ್ರಾಮ ನಿರ್ಮಾಣ ಮತ್ತು ಸಾಮಾಜಿಕ ಜೀವನ ಸಾಕಷ್ಟು ಉನ್ನತ ದರ್ಜೆಯವು ಹಾಗೂ ಪ್ರಶಂಸನೀಯಸವಾಗಿರುವಂಥವು. ತನ್ನ ಏಳಿಗೆಯ ಅವಧಿಯ ಸಿಂಧೂ ಸಂಸ್ಕೃತಿಯ ಕಾಲದಲ್ಲಿ ಅವರ ಕಲೆಯನ್ನು ಅದ್ಭುತ ರೀತಿಯಲ್ಲಿ ವಿಕಾಸಗೊಳಿಸಿದ್ದರು ಹಾಗೂ ನಗರಗಳನ್ನು ಅಭೂತಪೂರ್ವ ರೀತಿಯಲ್ಲಿ ನಿರ್ಮಿಸಿದ್ದರು. ಅವರ ನಾಗರೀಕತೆಯಲ್ಲಿ ಈ ನಗರ ಸಂಸ್ಕೃತಿ ಚೆನ್ನಾಗಿ ವಿಕಾಸ ಗೊಂಡಿತು. ನಮ್ಮ ಸಾಂಸ್ಕೃತಿಕ ಇತಿಹಾಸದಲ್ಲಿ ಸಿಂಧೂ ತೀರದ ನಾಗರೀಕತೆಯ ಉತ್ಕರ್ಷ ನಿಜವಾಗಿಯೂ ಒಂದು ಬೆಳಕಿನ ಬಿಂದು.'' - ೨೯/ ಈ ಹೇಳಿಕೆಯನ್ನು ಮತ್ತು ಸಿಂಧೂ ಕಣಿವೆಯ ನಾಗರೀಕತೆಯ ಸಂಶೋಧನೆಗಳನ್ನು ಗಮನಿಸಿದಾಗ ವೇದ ಕಾಲಕ್ಕಿಂತ ಪೂರ್ವದ ಭಾರತದಲ್ಲಿ ಪರಿಪೂರ್ಣವಾಗಿ

ವಿಕಾಸಗೊಂಡ ಒಂದು ಸಂಸ್ಕೃತಿ ಅಸ್ತಿತ್ವದಲ್ಲಿ ಇತ್ತೆಂಬುದು ನಿರ್ವಿವಾದವಾದ ಸಂಗತಿಯಾಗಿದೆ. ಇಂಥ ಸಂಸ್ಕೃತಿಯನ್ನು ನಿರ್ಮಾಣ ಮಾಡಿದ ಜನಾಂಗ ಭಾರತದ ಮೂಲ ನಿವಾಸಿಗಳು ಮತ್ತು ದ್ರಾವಿಡ ಜನಾಂಗ ಎಂಬುದು ಒಪ್ಪುವಂತಹ ಸತ್ಯವಾಗಿದೆ. ಸಿಂಧೂ ನದಿ ತೀರದ ಸಂಸ್ಕೃತಿಯ ಕಾಲವ್ಯಾಪ್ತಿ ಕ್ರಿ.ಶ. ಪೂರ್ವ ೩೦೫೦ ರಿಂದ ೧೫೫೦ ಎಂದು ಗುರುತಿಸಲಾಗಿದೆ. ಕ್ರಿ.ಶ. ಪೂರ್ವ ಎರಡು ಸಾವಿರ ವರ್ಷಗಳ ಹಿಂದೆ ಆಗಮಿಸಿದರು ಎನ್ನಲಾದ, ಭಾರತದ ವಾಯುವ್ಯಗಡಿಯಿಂದ ಬಂದ ಆರ್ಯರು ಈ ಪ್ರಾಚೀನ ಸಂಸ್ಕೃತಿಯೊಂದಿಗೆ ಸೆಣಸಾಡುತ್ತಲೇ ಅದರ ಅವನತಿಗೆ ಕಾರಣವಾದರು. ಹೀಗೆ ನಾಶವಾದ ಈ ಸಂಸ್ಕೃತಿಯ ಜನರನ್ನು ಅವರು 'ಅನಾಸ'ರು (ಬಿಲ್ಲಿಲ್ಲದವರು) ಮೃಧ್ರವಾಚಿಗಳು ( ಒರಟು ಮಾತಿನವರು) ಶಿಶ್ನದೇವ (ಲಿಂಗವನ್ನು ಪೂಜಿಸುವವರು), ಆ ಯಜ್ಞನ್ (ಯಜ್ಞಯಗಾದಿಗಳನ್ನು ಮಾಡದಿರುವವರು )ದಾಸ ದಸ್ಯು ಎಂದೆಲ್ಲ ಕರೆಯತೊಡಗಿದರು. ಒಟ್ಟಿನಲ್ಲಿ ದ್ರಾವಿಡ ಸಂಸ್ಕೃತಿ ಮರೆಯಾಗಿ ಅಥವಾ ಅಲ್ಲಲ್ಲಿ ಅಲ್ಪ ಸ್ವಲ್ಪ ಉಳಿದುಕೊಂಡು ಬಂದರೂ ವೈದಿಕ ಸಂಸ್ಕೃತಿಯ ಪ್ರಭಾವಕ್ಕೆ ಮತ್ತು ಹೊಡೆತಕ್ಕೆ ಅದು ಸಿಕ್ಕು ನರಳುವಂತಾಯಿತು. ಈ ದ್ರಾವಿಡ ಸಂಸ್ಕೃತಿಯಲ್ಲಿ ಪಶುಪತಿಯ ಆರಾಧನೆ ಪ್ರಮುಖವಾಗಿರುವದು ಮತ್ತು ಶಿವನ ವೇಷ - ಭೂಷಣಗಳು ದ್ರಾವಿಡ ಸಂಸ್ಕೃತಿಯ ಸೂಚಕವಾಗಿವೆ.

ಸಿಂಧೂ ಸಂಸ್ಕೃತಿ ಹಲವಾರು ದೃಷ್ಟಿಯಿಂದ ನಮ್ಮಲ್ಲಿ ವಿಸ್ಮಯವನ್ನುಂಟು ಮಾಡುತ್ತದೆ. ಮನೆಯನ್ನು ಅನೇಕ ಕೋಣೆಗಳನ್ನಾಗಿ ವಿಂಗಡಿಸಿ, ಸ್ನಾನದ ಕೋಣೆಯನ್ನು ಪ್ರತ್ಯೇಕವಾಗಿರಿಸುವುದು ಮತ್ತು ಚರಂಡಿ ವ್ಯವಸ್ಥೆಯನ್ನು ನಗರದಲ್ಲಿ ಹೊಂದಿರುವದು ಅದ್ಭುತವಾಗಿದೆ. ಸಾರ್ವಜನಿಕ ಸ್ನಾನದ ತೊಟ್ಟಿಗಳು, ಮನೆಯ ಆವರಣದಲ್ಲಿ ಬಾವಿಗಳು, ಬಾವಿಗಳ ಒಳ ಆವರಣವನ್ನು ಇಟ್ಟಿಗೆಗಳಿಂದ ಕಟ್ಟಿರುವುದು ಮತ್ತು ಧಾನ್ಯ ಸಂಗ್ರಹಿಸಲು ಕಣಜಗಳನ್ನು ಹೊಂದಿರುವದು ನೋಡಿದರೆ ಸಿಂಧೂ ಸಂಸ್ಕೃತಿ ವೈದಿಕ ಸಂಸ್ಕೃತಿಗಿಂತ ಪೂರ್ವದಲ್ಲಿಯೇ ಒಂದು ಪ್ರಬದ್ಧವಾದ ಸಂಸ್ಕೃತಿಯಾಗಿತ್ತೆಂಬುದು ಗಮನಾರ್ಹವಾಗಿದೆ.

ಆಭರಣಗಳನ್ನು ಧರಿಸುವ, ಯುದ್ಧೋಪಕರಣಗಳನ್ನು ಮತ್ತು ಗ್ರಹೋಪಕರಣಗಳನ್ನು ನೋಡಿದಾಗ ಸಿಂಧೂ ಸಂಸ್ಕೃತಿ ಅಮೂಲ್ಯವಾದ ಸಂಸ್ಕೃತಿಯಾಗಿದೆ. '' ಸಿಂಧು ಜನಜೀವನದಲ್ಲಿ ಮೊದ ಮೊದಲು ಮರಗಳ ಮತ್ತು ಪ್ರಾಣಿಗಳ ಉಪಾಸನೆ ರೂಢಿಯಲ್ಲಿದ್ದಂತೆ ತೋರುತ್ತದೆ. ಅಶ್ವತ್ಥವೃಕ್ಷ, ಜಾಲಿಯಮರ ಮೊದಲಾದವುಗಳ ಚಿತ್ರಗಳು ಮುದ್ರೆಗಳ ಮೇಲೆ ಕಂಡು ಬರುತ್ತವೆ. ಪ್ರಾಣಿಗಳಲ್ಲಿ ಮುಖ್ಯವಾಗಿ ಕಾಡುಕೋಣ, ಘೇಂಡಾಮೃಗ, ಹುಲಿ, ಎಮ್ಮೆ ಮೊದಲಾದವು ಮುದ್ರೆಗಳ ಮೇಲೆ ಸ್ಥಾನ ಪಡೆದಿವೆ. ಕೆಲವು ಕಾಲ್ಪನಿಕ ಪ್ರಾಣಿಗಳನ್ನು ಚಿತ್ರಿಸಿರುವುದು ಕಾಣುತ್ತೇವೆ. ಅಂತೂ ಒಟ್ಟಿನಲ್ಲಿ ಸಿಂಧೂ ಸಂಸ್ಕೃತಿಯ ಧರ್ಮದಲ್ಲಿ ಒಂದು ಕಡೆ ಮಾತೃದೇವತೆ ವೃಕ್ಷಗಳು, ಪ್ರಾಣಿಗಳು ಅಂದರೆ ಪ್ರಕೃತಿ ಪೂಜೆಯನ್ನು ಕಂಡರೆ, ಇನ್ನೊಂದು ಕಡೆ ಆ ಪ್ರಕೃತಿಯನ್ನು ಅಂತರ್ಗತಗೊಳಿಸಿಕೊಂಡ ಶಿವನ ಮತ್ತು ಅವನ ಸಂಕೇತವಾದ ಲಿಂಗದ ಅನುಸಂಧಾನವನ್ನು ಕಾಣುತ್ತೇವೆ. '' - ೩೦

ಸಿಂಧೂ ಸಂಸ್ಕೃತಿ ದಾಳಿಯಿಂದ ನಾಶವಾಯಿತು ಎಂಬುದಕ್ಕೆ ಆಧಾರಗಳು ದೊರೆಯುತ್ತವೆ. ತುಂಬಾ ಬಲಿಷ್ಠರಾದ ಶತ್ರುಗಳು ಈ ಸಂಸ್ಕೃತಿಯನ್ನು ನಾಶಮಾಡಿರಬಹುದು. ಈ ಬಲಿಷ್ಠವಾದ ಶತ್ರುಗಳು ಆರ್ಯರೇ ಆಗಿರುವ ಸಾಧ್ಯತೆ ಇದೆ.

## ವೈದಿಕ ಸಂಸ್ಕೃತಿ :

ವೇದಗಳ ಕಾಲದ ಸಂಸ್ಕೃತಿಯನ್ನು ವೈದಿಕ ಸಂಸ್ಕೃತಿ ಎಂದು ಕರೆಯಲಾಗುತ್ತದೆ. ವೇದಗಳು ರಚಿತವಾದ ಕಾಲವನ್ನು ಕ್ರಿ.ಪೂ. ೧೫೦೦ - ೧೨೦೦ ಎಂದು ಗುರುತಿಸಲಾಗಿದೆ. 'ವೇದ' ಎಂದರೆ ಜ್ಞಾನ (ವಿದ್ = ತಿಳಿವುದು) ಋಗ್, ಯಜುರ್, ಸಾಮ, ಅಥರ್ವಣ ವೇದ ಎಂದು ಒಟ್ಟು ನಾಲ್ಕು ವೇದಗಳನ್ನು ಪರಂಪರೆಯುದ್ದಕ್ಕೂ ಗುರುತಿಸಿದೆ. ವೇದಗಳು ಅಪೌರುಷೇಯವೆಂದು, ಕೇಳಿಸಿಕೊಂಡ ಪವಿತ್ರವಾಣಿಯೆಂದು ಹೇಳುವುದರಿಂದ 'ಶೃತಿ' ಎಂದು ಅವುಗಳನ್ನು ಕರೆಯಲಾಗುತ್ತಿದೆ. ವೇದಗಳಲ್ಲಿ ಕರ್ಮಕಾಂಡ, ಜ್ಞಾನಕಾಂಡಗಳೆಂದು ಎರಡು ಭಾಗಗಳನ್ನು ಗುರುತಿಸುತ್ತಾರೆ. ಕರ್ಮಕಾಂಡವನ್ನು ಬರೆದವರು ಬ್ರಾಹ್ಮಣರು, ಜ್ಞಾನಕಾಂಡವನ್ನು (ಉಪನಿಷತ್) ಬರೆದವರು ಬಹುತೇಕ ಕ್ಷತ್ರಿಯರು ಎಂದು ಸ್ವಾಮಿ ವಿವೇಕಾನಂದರು ಅಭಿಪ್ರಾಯ ಪಟ್ಟಿದ್ದಾರೆ. (ಸ್ವಾಮಿ ವಿವೇಕಾನಂದ ಹಿಂದೂಯಿಸ್ಂ)

''ಭಾರತೀಯ ಸಂಸ್ಕೃತಿಯನ್ನು ಅರಿಯಲು ಇರುವ ಅತ್ಯಂತ ಪ್ರಾಚೀನವಾದ ಗ್ರಾಂಥಿಕ ಆಧಾರವೆಂದರೆ ವೇದಗಳು''- ೪

ವೇದಗಳಲ್ಲಿ ಅತ್ಯಂತ ಪ್ರಾಚೀನವಾದುದು 'ಋಗ್‌ವೇದ' ವೇದಗಳಲ್ಲಿ ಪ್ರಕೃತಿಯ ಒಂದೊಂದು ಶಕ್ತಿಗಳನ್ನು ದೇವತೆಗಳನ್ನಾಗಿ ಮಾಡಿ ಆರಾಧಿಸುವುದನ್ನು ಕಾಣುತ್ತೇವೆ. ಪ್ರಕೃತಿಯ ಆರಾಧನೆಯನ್ನು ಅಳವಡಿಸಿಕೊಂಡಿರುವುದರ ಹಿಂದೆ ಸಿಂಧೂ ಸಂಸ್ಕೃತಿಯ ಪ್ರಭಾವವಿರುವುದು ನಿಸ್ಸಂಶಯವಾಗಿದೆ.

ವರುಣ, ಮಿತ್ರ, ಸವಿತ್ರ
ಇಂದ್ರ, ವಾಯು, ಪರ್ಜನ್ಯ
ಪೃಥ್ವಿ, ಅಗ್ನಿ, ಸೋಮ

ವೇದಗಳ ಪ್ರಾರಂಭದಲ್ಲಿ ಈ ದೇವತೆಗಳ ಉಪಾಸನೆಯನ್ನು ಕಾಣುತ್ತೇವೆ. ಈ ಎಲ್ಲ ದೇವತೆಗಳು ಪ್ರಕೃತಿಯ ಒಂದೊಂದು ಶಕ್ತಿಯಾಗಿದ್ದಾರೆ.

ಆತ್ಮ ಮತ್ತು ಪರಮಾತ್ಮದ ವಿಷಯವನ್ನು ಕುರಿತ ಜಿಜ್ಞಾಸೆಯನ್ನು ಸೃಷ್ಟಿಯ ಉಗಮದ ಕುರಿತಾಗಿ ಪುರುಷ ಸೂಕ್ತದಲ್ಲಿ ಉಲ್ಲೇಖಿಸಲಾಗಿದೆ. ಯಜ್ಞಗಳು ಸಾಮಾನ್ಯವಾಗಿ ನಡೆಯುತ್ತಿದ್ದವು. ಯಜ್ಞಗಳನ್ನು ಮಾಡುವುದು ಒಂದು ಪವಿತ್ರ ಧಾರ್ಮಿಕ ಕಾರ್ಯವಾಗಿತ್ತು. ದೇವತೆಗಳನ್ನು ಸಂತುಷ್ಟಗೊಳಿಸುವುದರಿಂದ ತಮ್ಮ ಆಶಯಗಳು ಈಡೇರುತ್ತವೆ ಎಂಬ ನಂಬಿಕೆಯನ್ನು ಇಲ್ಲಿ ಕಾಣುತ್ತೇವೆ.

ವೇದಕಾಲದ 'ವಿವಾಹ' ಸಾಮಾಜಿಕವಾಗಿ ಒಪ್ಪಿಗೆಯನ್ನು ಪಡೆದ ಅತ್ಯಂತ ಪವಿತ್ರದ ಕಾರ್ಯವಾಗಿತ್ತು, ವಿವಾಹ ವಿಚ್ಛೇದನದ ಸೂಚನೆಗಳು ದೊರೆಯುವುದಿಲ್ಲ. ಶ್ರೀಮಂತರು ಮತ್ತು ಕ್ಷತ್ರಿಯರಲ್ಲಿ ಬಹುಪತ್ನಿತ್ವಕ್ಕೆ ಅವಕಾಶವಿದ್ದರೂ ಸಮಾಜ ಏಕಪತ್ನಿತ್ವವನ್ನು ಒಪ್ಪಿಕೊಂಡಿತ್ತು. ಪ್ರೇಮ ವಿವಾಹಗಳು ಜರುಗುತ್ತಿದ್ದವು. ಅವಿಭಕ್ತ ಕುಟುಂಬ ಪದ್ಧತಿ ರೂಢಿಯಲ್ಲಿತ್ತು ವೇದಕಾಲದಲ್ಲಿ

ಬಾಲ್ಯವಿವಾಹದ ಪ್ರಸ್ತಾಪವಾಗಲಿ, ಅಂಥ ಒಂದು ಪದ್ಧತಿ ಇತ್ತು ಎಂಬುದರ ಕುರಿತಾಗಲಿ ಎಲ್ಲಿಯೂ ಆಧಾರಗಳು ದೊರುಕುವುದಿಲ್ಲ.

ಸ್ತ್ರೀಯರು ಬ್ರಹ್ಮಚರ್ಯ ನಿಯಮವನ್ನು ಪಾಲಿಸುತ್ತಿದ್ದರು. ಅವರ ಸ್ಥಾನ ಗೌರವಯುತ ವಾಗಿತ್ತು ಮತ್ತು ತೃಪ್ತಿಕರವಾಗಿತ್ತು. ಹೆಣ್ಣು ಮಕ್ಕಳ ಉಪನಯನ ಪದ್ಧತಿಯು ಸೂತ್ರಗಳ ಕಾಲದವರೆಗೂ ಆಚರಣೆಯಲ್ಲಿರುವುದನ್ನು ಗುರುತಿಸಬಹುದಾಗಿದೆ. ಸ್ತ್ರೀಯರು ಸಾರ್ವಜನಿಕ ಸ್ಥಳಗಳಲ್ಲಿ ತಮ್ಮ ಪತಿಯೊಂದಿಗೆ ಅಥವಾ ಪ್ರಿಯಕರರೊಂದಿಗೆ ಆತಂಕಗಳಿಲ್ಲದೆ ವಿಹಾರವನ್ನು ಕೈಗೊಳ್ಳಬಹುದಾಗಿತ್ತು.

ಪುರುಷ ಸೂಕ್ತಕ್ಕಿಂತ ಪೂರ್ವದಲ್ಲಿ ಚತುರ್ವರ್ಣದ ಪ್ರಸ್ತಾಪ ಬರುವುದಿಲ್ಲ. ಆದರೆ ಪುರುಷ ಸೂಕ್ತದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ನಾಲ್ಕು ವರ್ಗಗಳ ಹೆಸುರುಗಳು ಅವುಗಳ ವಿಶೇಷ ಲಕ್ಷಣಗಳೊಂದಿಗೆ ಋಗ್ವೇದದ ಸುಪ್ರಸಿದ್ಧವಾದ ಪುರಷ ಸೂಕ್ತದಲ್ಲಿ ಉಲ್ಲೇಖಿತವಾಗಿದೆ.

ಬ್ರಾಹ್ಮಣೋಸ್ಯ ಮುಖಮಾಸೀತ್ ಬಾಹುರಾಜನ್ಯಃ ಕೃತ ।
ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ.

ಮುಖದಿಂದ ಬ್ರಾಹ್ಮಣನೂ, ತೋಳುಗಳಿಂದ ಕ್ಷತ್ರಿಯರೂ, ತೊಡೆಗಳಿಂದ ವೈಶ್ಯರು, ಕಾಲುಗಳಿಂದ ಶೂದ್ರರೂ ಹುಟ್ಟಿದರು ಎಂದು ಮಾತು. ವರ್ಗಗಳ ಸ್ವರೂಪವನ್ನೂ, ಅವುಗಳಿಗಿರುವ ಗೌರವವನ್ನೂ ತಿಳಿಸುತ್ತವೆ.

ವೇದಕಾಲದಲ್ಲಿ ವೃತ್ತಿಗಳು ವಂಶಾನುಗತವಾಗಿರಲಿಲ್ಲ, ವಂಶಪಾರಂಪರ್ಯ ವಿಚಾರವು ಸಂಹಿತೆ ಮತ್ತು ಬ್ರಾಹ್ಮಣ, ಉಪನಿಷತ್ತು ಇವುಗಳ ಕಾಲದಲ್ಲಿ ಒಪ್ಪಿಗೆಯನ್ನು ಪಡೆದಂತೆ ತೋರುತ್ತದೆ. ವರ್ಗಗಳು ಜಾತಿಯ ರೂಪವನ್ನು ಧರಿಸಿರಲಿಲ್ಲ ಒಂದು ಜಾತಿ ಮತ್ತು ಇನ್ನೊಂದು ಜಾತಿಯ ಮನೆಯಲ್ಲಿ ಊಟಮಾಡುವುದು ಸರ್ವೇ ಸಾಮಾನ್ಯವಾಗಿತ್ತು. ವಿಶ್ವಾಮಿತ್ರ ಬ್ರಹ್ಮರ್ಷಿಯಾಗುವುದು, ಅಗಸ್ತ್ಯಮುನಿ ಲೋಪಾಮುದ್ರೆಯನ್ನು (ಕ್ಷತ್ರಿಯಳನ್ನು) ಮದುವೆಯಾಗುವದು ಸಹಜವಾಗಿತ್ತು. ವೇದಕಾಲಿನ ಸಮಾಜದಲ್ಲಿ ಕೃಷಿಮತ್ತು ಪಶುಪಾಲನೆ ಮುಖ್ಯ ವೃತ್ತಿಯಾಗಿದ್ದಿತು. ರಥವನ್ನು ನಿರ್ಮಾಣ ಮಾಡುವವರಿಗೆ ವಿಶೇಷ ಗೌರವವಿದ್ದಂತೆ ತೋರುತ್ತದೆ. ಲೋಹಕಾರರು, ಬಡಗಿಗಳು, ವೈದ್ಯರು, ಕುಂಬಾರರು, ನೇಯ್ಗೆಯವರು, ಚರ್ಮಹದ ಮಾಡುವವರು, ಕಾಳು ಬೀಸುವವರು ಯಾವುದೇ ಭೇದ ತೋರದೆ ಒಟ್ಟಿಗೆ ಬೆರೆಯುತ್ತಿದ್ದರು. ವೇದಕಾಲದ ಈ ಜನತೆಗೆ ವ್ಯಾಪಾರ ಪ್ರೀತಿಯ ಕಸಬು ಆದಂತೆ ಕಂಡುಬರುವುದಿಲ್ಲ.

ವೇದಕಾಲೀನ ಸಂಸ್ಕೃತಿಯು ಮುಂದಿನ ಭಾರತೀಯ ಸಂಸ್ಕೃತಿ ಸಮೃದ್ಧವಾಗಿ ಬೆಳೆಯಲು ಹಾಕಿದ ತಳಹದಿಯಂತೆ ತೊರುತ್ತದೆ.

# ಉಪನಿಷತ್ತುಗಳಲ್ಲಿ ಸಂಸ್ಕೃತಿ

' ಉಪನಿಷತ್' ಎಂಬ ಸಂಸ್ಕೃತ ಶಬ್ದದ ಬಹುವಚನ ರೂಪವೇ ಉಪನಿಷತ್ತುಗಳು ಎಂಬುದು. 'ಭಕ್ತಿ ಪೂರ್ವಕವಾಗಿ ಸಮೀಪದಲ್ಲಿ ಕುಳಿತುಕೊಳ್ಳುವುದು ' ಎಂಬುದು ಇದರ ವಾಚಾರ್ಥ. ಶಿಷ್ಯನು ಜ್ಞಾನಾರ್ಜನೆಗಾಗಿ ಗುರುವಿನ ಹತ್ತಿರ ಇರುವ ಚಿತ್ರವನ್ನು ಇದು ತಂದುಕೊಡುತ್ತದೆ.

ವೇದಗಳ ಅಂತ್ಯ ಭಾಗದಲ್ಲಿ ಇವು ಬರುವುದರಿಂದ ಉಪನಿಷತ್ತುಗಳನ್ನು ವೇದಾಂತವೆಂದು ಕರೆಯಲಾಗಿದೆ. ಈಗ ನಮಗೆ ನೂರ ಎಂಟು ಉಪನಿಷತ್ತುಗಳು ದೊರೆಯುತ್ತವೆ. ಕೆಲವು ಉಪನಿಷತ್ತುಗಳು ಗಾತ್ರದಲ್ಲಿ ತುಂಬಾ ಚಿಕ್ಕವು, ಇನ್ನೂ ಕೆಲವು ಉಪನಿಷತ್ತು ಸಾವಿರಾರು ಪದಗಳಿಂದ ಕೂಡಿ ವಿಸ್ತಾರವಾಗಿವೆ. ಉಪನಿಷತ್ತಗಳು ಕೆಲವು ಪದ್ಯ ರೂಪದಲ್ಲಿದ್ದರೆ, ಇನ್ನೂ ಕೆಲವು ಗದ್ಯ ರೂಪದಲ್ಲಿವೆ. ದೊರೆಯುವ ನೂರು ಎಂಟು ಉಪನಿಷತ್ತುಗಳಲ್ಲಿ ಹತ್ತು ಉಪನಿಷತ್ತುಗಳು ಪ್ರಧಾನ ಉಪನಿಷತ್ತುಗಳೆಂದು ಗೌರವಿಸಲ್ಪಟ್ಟಿವೆ. ಅವು ಯಾವವೆಂದರೆ ಈಶ, ಕೇನ, ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ, ಛಾಂದೋಗ್ಯ, ಬ್ರಹದಾರಣ್ಯಕ, ಐತರೇಯ, ತೈತ್ತಿರೀಯ, ಶಂಕರಾಚಾರ್ಯರು ಈ ಹತ್ತು ಉಪನಿಷತ್ತುಗಳಿಗೆ ಭಾಷ್ಯವನ್ನು ಬರೆದಿದ್ದಾರೆ. ದೊರೆಯುವ ನೂರಾ ಎಂಟು ಉಪನಿಷತ್ತುಗಳಲ್ಲಿ ಹದಿನಾರು ಉಪನಿಷತ್ತುಗಳನ್ನು ಮಾತ್ರ ಶಂಕರಾಚಾರ್ಯರು ಸಮಪ್ರಮಾಣವಾದವುಗಳೆಂದು ಪರಿಗಣಿಸಿದ್ದಾರೆ.

ಋಷಿಗಳು ಮತ್ತು ಸಂತರು ಉಪನಿಷತ್ತುಗಳ ರಚನಾಕಾರರಾಗಿದ್ದಾರೆ ಅವರು ತಮ್ಮ ಭಾವನೆ ಅಥವಾ ದರ್ಶನಗಳ ಮೂಲಕ ತಮಗುಂಟಾದ ದಿವ್ಯಾನುಭವವನ್ನು ಈ ಮೂಲಕ ನಿರೂಪಿಸಿದ್ದಾರೆ '' ಉಪನಿಷತ್ತುಗಳು ವಿಚಾರದ ಮೂಲಕ ರಚಿಸಲ್ಪಟ್ಟ ತರ್ಕಬದ್ಧವಾದ ಗ್ರಂಥಗಳಲ್ಲ, ಆದರೆ ಅಂತಃ ಸ್ಫುರಣೆಯಿಂದ ಅಯತ್ನಪೂರ್ವಕವಾಗಿ ಹೊರಬಂದ ಆಧ್ಯಾತ್ಮಿಕ ಅನುಭವೋಕ್ತಿಗಳ ಸಂಕಲನ '' -೩೧

ಉಪನಿಷತ್ತುಗಳು ಹಿಂಸಾ ಮೂಲವಾದ ಯಜ್ಞವನ್ನು ಸಹಿಸಿದಂತೆ ತೋರುವುದಿಲ್ಲ '' ಯಜ್ಞಗಳೇ ಅತ್ಯಂತ ಶ್ರೇಷ್ಠವೆಂದು ಆನಂದಿಸುವ ಮೂಢರು ಮತ್ತೆ ಮತ್ತೆ ಹುಟ್ಟಿ ಸಾವುಗಳಿಗೆ ಒಳಗಾದವರು '' ಎಂಬ ವಿಚಾರ ಮಾತುಗಳು ಮುಂಡಕೋಪನಿಷತ್ತಿನಲ್ಲಿ ಬರುತ್ತವೆ. ಜ್ಞಾನವನ್ನೇ ಪ್ರಧಾನವಾಗಿಟ್ಟುಕೊಂಡು ಅಂತರಂಗದ ಕಡೆಗೆ ಹೊರಳುವ ನೋಟವನ್ನು ಛಾಂದೋಪನಿಷತ್ತು ತಿಳಿಸುತ್ತದೆ.

ಉಪನಿಷತ್ತುಗಳು 'ಬ್ರಹ್ಮ'ದ ಅಮೂರ್ತ ವಿಚಾರವನ್ನು ಮಂಡಿಸುತ್ತವೆ. ಬ್ರಹ್ಮವು ಆತ್ಮ ಮತ್ತು ವಿಶ್ವವು ದೇಹ, ವಿಶ್ವದ ಅಂತಸ್ಥ ಪ್ರಾಣ, ಬೆಳಕು ಮತ್ತು ಶಕ್ತಿಯೇ ಬ್ರಹ್ಮ ಎಂಬುದಾಗಿ ತಿಳಿಸುತ್ತವೆ.

ಉಪನಿಷತ್ತುಗಳು ವಿಚಾರಪೂರಕವಾಗಿವೆ. ಸತ್ಯವನ್ನು ಶೋಧಿಸುವ ಪ್ರಯತ್ನದಲ್ಲಿ ದೊರೆತ ಅಮೂಲ್ಯ ಚಿಂತನೆಗಳನ್ನು ಅವು ಒಳಗೊಂಡಿವೆ. ಕರ್ಮವನ್ನು ಮಾಡುತ್ತಲೇ ಮನುಷ್ಯನು ನೂರು

ವರ್ಷಗಳವರೆಗೆ ಬಾಳುವ ಇಚ್ಛೆಯನ್ನು ಹೊಂದಿರಬೇಕೆಂದು ಅವು ತಿಳಿಸುತ್ತವೆ, ಕೇನೋಪನಿಷತ್ತಿನಲ್ಲಿ ಮತ್ತು ಕಠೋಪನಿಷತ್ತಿನಲ್ಲಿ ಜೀವ, ದೇಹ, ಮರಣ, ಪಿಂಡಾಂಡ, ಬ್ರಹ್ಮಾಂಡಗಳ ಕುರಿತ ಚಿಂತನೆಯನ್ನು ಕಾಣುತ್ತೇವೆ. ಸಷ್ಟಿಯಲ್ಲದರಲ್ಲೂ ಬ್ರಹ್ಮಶಕ್ತಿಯೆಂಬುದು ವ್ಯಾಪಿಸಿದೆ. ಎಲ್ಲಪ್ರಾಣಿಗಳಿಗೂ ಅದು ಚೈತನ್ಯ ರೂಪವಾಗಿದೆ ಅದು ಅಣುವಿನಲ್ಲಿ ಅಣುವಾಗಿ ಮಹತ್ತಿನಲ್ಲಿ ಮಹತ್ತಾಗಿ ತೋರುತ್ತದೆ.

'' ಭಾರತ ಸಂಸ್ಕೃತಿಗೆ ಪುನಃಶ್ಚೇತನಗೊಳ್ಳುವ ಮತ್ತು ಸಂದರ್ಭಕ್ಕೆ ತಕ್ಕಂತೆ ಹೊಂದಿಕೊಳ್ಳುವ ಶಕ್ತಿ ಇರುವುದರಿಂದ ಅದರಲ್ಲಿ ಸಮೀಕರಣ ಮತ್ತು ಸಮನ್ವಯದ ಜಾಯಮಾನ ಬೆಳೆದು ಬಂದಿದೆ. ಇದರಿಂದ ಇತಿಹಾಸದಲ್ಲಿ ಧರ್ಮಯುಗದ ಉದ್ದಕ್ಕೂ ಈ ಸಂಸ್ಕೃತಿಯು ಆಗಾಗ ಪುನರುಜ್ಜೀವನಗೊಳ್ಳುತ್ತಾ ಶ್ರೀಮಂತವಾಗಿದ್ದುಕೊಂಡು ಪ್ರಭಾವಯುತವಾಗಿ ನಡೆದುಕೊಂಡುಬರಲು ಸಾಧ್ಯವಾಗಿದೆ.'' - ೩೨

ಚಲನಶೀಲ ಸಂಸ್ಕೃತಿಯ ಜೀವಂತ ಲಕ್ಷಣವನ್ನು ಭಾರತೀಯ ಸಂಸ್ಕೃತಿಯಲ್ಲಿ ಕಾಣುತ್ತೇವೆ. ಸತ್ಯದ ನಿರಂತರ ಅನ್ವೇಷಣೆಯನ್ನು ಭಾರತೀಯ ತತ್ವಶಾಸ್ತ್ರದಲ್ಲಿ ನೋಡಲು ಸಾಧ್ಯವಿದೆ.

'ಶ್ರುತಿ'ಗಳು (ವೇದ ವೇದಾಂತ) ಸಾಮಾನ್ಯರಿಗೆ ಅರ್ಥವಾಗದ ಕಾರಣ ಶ್ರುತಿಗಳಿಗೆ ವಿವರಣೆಗಳು ಬಂದವು, ಅವೇ ಸ್ಮೃತಿಗಳು ಗ್ರಹಿಕೆಗೆ ಕಷ್ಟವೆಂದು ಅವುಗಳ ಸಾರವನ್ನೇ ಜನತೆಗೆ ತಿಳಿಸಲು ಕಥೆಗಳು ರಚಿತವಾದವು. ಅವುಗಳಲ್ಲಿ ರಾಮಾಯಣ ಮತ್ತು ಮಹಾಭಾರತಗಳು ಇತಿಹಾಸವೆಂದು ಕರೆಯಿಸಿಕೊಂಡರೆ ಉಳಿದ ಹದಿನೆಂಟು ಕಥೆಗಳು ಪುರಾಣವೆನ್ನಿಸಿಕೊಂಡವು .'' - ೩೩

ಉಪನಿಷತ್ತುಗಳು ವೇದಗಳ ಮುಂದುವರಿಕೆಯೆಂತೆ ತೋರುತ್ತವೆ. ಆದರೆ ವೇದಗಳ ಯಜ್ಞಯಾಗಾದಿ ಕರ್ಮಗಳಿಗೆ ಪ್ರತಿಭಟನೆಯನ್ನು ಮತ್ತು ಬ್ರಾಹ್ಮಣಗಳ ವಿರುದ್ಧ ರೂಪಿಸಿದ ದಾರ್ಶನಿಕತೆಯನ್ನು ಉಪನಿಷತ್ತುಗಳು ತೋರುತ್ತವೆ.

ಅರ್ಥಹೀನ ಮತಾಚರಣೆಗಳ ಯಜ್ಞಗಳು ಅವುಗಳ ಹದಿನೆಂಟು ಅಂಗಗಳು ದುರ್ಬಲ ದೋಣಿಗಳು ; ಯಾರು ಕೇವಲ ಮೂರ್ಖತನದಿಂದ ಅಂತಹ ಯಜ್ಞಗಳೇ ಶ್ರೇಷ್ಠವೆಂದು ಕೊಂಡಾಡುವರೋ ಅವರು ಮತ್ತೆ, ಹುಟ್ಟು ಸಾವುಗಳ ಚಕ್ರಕ್ಕೆ ಸಿಲುಕುತ್ತಾರೆ ಎಂದು ಮುಂಡಕೋಪನಿಷತ್ ಹೇಳುತ್ತದೆ.

ಬ್ರಹ್ಮನ್ ಮತ್ತು ಆತ್ಮನ್ ಇವುಗಳ ಬಗ್ಗೆ ಗಾಢವಾದ ಚಿಂತನೆಯನ್ನು ಉಪನಿಷುತ್ತಗಳಲ್ಲಿ ಕಾಣುತ್ತೇವೆ ಪ್ರಪಂಚದ ಪ್ರತಿಯೊಂದನ್ನು 'ಬ್ರಹ್ಮ'ವೆಂದು ಕರೆದು ಇಲ್ಲಿ ಜರುಗುತ್ತಿರುವ ಕ್ರಿಯೆ ಆ ಬ್ರಹ್ಮಕ್ಕೆ ಅರ್ಥವಾಗುತ್ತದೆ ಎಂದು ಕಠೋಪನಿಷತ್ತು ತಿಳಿಸುತ್ತದೆ. (೨:೨:೯-೧೦)

## ಅಡಿಟಿಪ್ಪಣಿಗಳು

೧ ಸಂಸ್ಕೃತಿ, ಡಿವಿಜಿ, ಪುಟ ೧೧-೧೨

೨ ಕರ್ನಾಟಕ ಸಂಸ್ಕೃತಿ ಸಮೀಕ್ಷೆ ಡಾ॥ ಎಚ್. ತಿಪ್ಪೇರುದ್ರಸ್ವಾಮಿ, ಪು :೬

೩. The Cambridge encylopedia Editor Devid Crystal page 324, 325.

೪. ಕರ್ನಾಟಕ ಸಂಸ್ಕೃತಿ ಸಮೀಕ್ಷೆ ಡಾ॥ ಎಚ್. ತಿಪ್ಪೇರುದ್ರಸ್ವಾಮಿ, ಪು :೬

5. The Prctical Sanskrit English Dietion any page 1092

೬. ಮ್ಯಾಥ್ಯೂ ಅರ್ನಾಲ್ಡ್ 'ಕಲ್ಚರ್ ಮತ್ತು ಅನಾರ್ಕಿ'
ಡಿವಿಜಿಯವರ ಅನುವಾದ 'ಸಂಸ್ಕೃತಿ' ಪು - ೧೧೫

೭. ಸಂಸ್ಕೃತಿ ಮತ್ತು ಅಡಿಗ ಯು. ಆರ್. ಅನಂತಮೂರ್ತಿ, ಪು-೫೭

೮. ಸಂಸ್ಕೃತಿ ಶ್ರಮ ಮತ್ತು ಸೃಜನಶೀಲತೆ - ಬರಗೂರು ರಾಮಚಂದ್ರಪ್ಪ,
ಪು -೧೭೦, ೨೦೦೧ ಅಂಕಿತ ಪುಸ್ತಕ ಬೆಂಗಳೂರು.

೯. ಕರ್ನಾಟಕ ಸಂಸ್ಕೃತಿ ಸಮೀಕ್ಷೆ, - ಡಾ॥ ಎಚ್. ತಿಪ್ಪೆರುದ್ರಸ್ವಾಮಿ, ಡಿ.ವಿ.ಕೆ. ಮೂರ್ತಿ
ಪ್ರಕಾಶನ ಮೈಸೂರು, ಪು.ಸಂ. ೨೨

೧೦. R.S. Mugali, The Heritage of Karnataka

೧೧. ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಾ॥ ಎಚ್. ತಿಪ್ಪೇರುದ್ರಸ್ವಾಮಿ, ಅದೇ - ಪು.ಸಂ. ೨೨

೧೨. ಶಂ.ಬಾ. ಜೋಷಿ ಕನ್ನಡದ ನೆಲೆ.

೧೩. ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಾ॥ ಎಚ್. ತಿಪ್ಪೇರುದ್ರಸ್ವಾಮಿ,

೧೪. B.A. Salefore, Mediaval Jainism, P-2

೧೫. Shah Jainism in North India, P-12

೧೬.. E cII, c 600 AD JISI ; P 374

೧೭. ಅಜಿತ ಪುರಾಣ, ೧೨.೬

೧೮. E cII, 1,c 600 AD

೧೯. IA VI P 23 c 450 Ad, P-24,

೨೦. IA VI P 25 c 480 Ad,

೨೧. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಡಾ॥ ಎಂ ಚಿದಾನಂದ ಮೂರ್ತಿ, ಪು -೮೭

೨೨. ಕೃತಿ ಅದೇ ಪು -೧೩೭

೨೩. ಎಂ. ಎಚ್. ಕೃಷ್ಣ ಕರ್ನಾಟಕದ ಪೂರ್ವ ಚರಿತ್ರೆ ಪು - ೨೯.೩೩

೨೪. ಕ. ಸಂ. ಸಮೀಕ್ಷೆ, ಡಾ॥ ಎಚ್. ತಿಪ್ಪೇರುದ್ರಸ್ವಾಮಿ, ಪು - ೩೬

೨೫. ಕ. ಸಂ. ಸಮೀಕ್ಷೆ, ಡಾ॥ ಎಚ್. ತಿಪ್ಪೇರುದ್ರಸ್ವಾಮಿ, ಪು - ೩೬೬

೨೬. Karnataka Inscriptionvol I Badami, No. 2 (3)

೨೭. ಕ. ಸಂ. ಸಮೀಕ್ಷೆ, ಡಾ॥ ಎಚ್. ತಿಪ್ಪೇರುದ್ರಸ್ವಾಮಿ, ಪು - ೩೬೭

೨೮ ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ : ಭಗವತ್ ಶರಣ ಉಪಾಧ್ಯಾಯ, ಅನು: ಪ್ರದಾನ್ ಗುರುದತ್ತ ನವಕರ್ನಾಟಕ ಪ್ರಕಾಶನ ಪು : ೧೩೨

೨೯. ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ : ಭಗವತ್ ಶರಣ ಉಪಾಧ್ಯಾಯ, ಅನು: ಪ್ರದಾನ್ ಗುರುದತ್ತ ನವಕರ್ನಾಟಕ ಪ್ರಕಾಶನ ಪು : ೧೩೨

೩೦. ಕರ್ನಾಟಕ ಸಂಸ್ಕೃತಿ ಸಮೀಕ್ಷೆ : ಡಾ॥ ಎಚ್. ತಿಪ್ಪೇರುದ್ರಸ್ವಾಮಿ ಐದನೆ ಮುದ್ರಣ ೧೯೯೭, ಡಿ.ವಿ.ಕೆ.ಮೂರ್ತಿ ಮೈಸುರು.

೩೧. ಭಾರತೀಯ ಆಧ್ಯಾತ್ಮಿಕ ಪರಂಪರೆ : ಸ್ವಾಮಿ ಪ್ರಭವಾನಂದ ಶ್ರೀರಾಮಕೃಷ್ಣಾಶ್ರಮ, ಮೂರನೆಯ ಮುದ್ರಣ - ೧೯೯೬, ಪು - ೪೧

೩೨. ಪರಿವರ್ತನಾಶೀಲ ಸಮಾಜಕ್ಕೆ ಶಾಶ್ವತ ಮೌಲ್ಯಗಳು : ಸ್ವಾಮಿ ರಂಗನಾಥಾನಂದ, ಅನು : ತ.ಶು. ಶಾಮರಾಯರು ಮತ್ತು ಇತರರು, ಪು - ೨೫

೩೩. ವೀರಶೈವ ದರ್ಮ : ಭಾರತೀಯ ಸಂಸ್ಕೃತಿ, ಡಾ॥ ಎಂ. ಚಿದಾನಂದಮೂರ್ತಿ, ಪು - ೮

## ಅಧ್ಯಾಯ ೩

## ಸಮಾಕಾಲೀನ ಸಾಮಾಜಿಕ ಆಶಯಗಳ ಹಿನ್ನೆಲೆಯಲ್ಲಿ ರೂಪುಗೊಂಡ ಕಾದಂಬರಿಗಳು.

೩.೧ ಧರ್ಮಶ್ರೀ

೩.೨ ತಬ್ಬಲಿಯು ನೀನಾದೆ ಮಗನೆ

೩.೩ ದಾಟು,

೩.೪ ನಾಯಿನೆರಳು

೩.೫ ವಂಶವೃಕ್ಷ

೩.೬ ಗ್ರಹಣ

# ಧರ್ಮಶ್ರೀ

ಭೈರಪ್ಪನವರ ಮೊದಲ ಕಾದಂಬರಿ ಧರ್ಮಶ್ರೀ. ಇದಕ್ಕಿಂತ ಪೂರ್ವದಲ್ಲಿ 'ಭೀಮಕಾಯ' ಬಂದಿದ್ದರೂ ಅದೊಂದು ಅಪಕ್ವ ಕೃತಿಯೆಂದೇ ಪರಿಗಣಿತವಾಗಿದೆ. 'ಧರ್ಮಶ್ರೀ' ಯನ್ನೇ ಅವರ ಮೊದಲ ಕಾದಂಬರಿಯೆಂದು ಸಾಹಿತ್ಯಲೋಕ ಒಪ್ಪಿಕೊಂಡಿದೆ. 'ಧರ್ಮಶ್ರೀ' ಕಾದಂಬರಿ ಪ್ರಕಟಗೊಂಡಿದ್ದು ೧೯೬೧ರಲ್ಲಿ ಈ ಕಾದಂಬರಿ ಬಹಳಷ್ಟು ಕನ್ನಡಿಗರನ್ನು ತಲುಪಿದೆ. ಈ ಕಾದಂಬರಿಯನ್ನು ಬರೆಯುವ ವ್ಯಕ್ತಿತ್ವವನ್ನು ಈಗಿರುವಂತೆ ರೂಪಿಸಲು ಬಹುಮಟ್ಟಿಗೆ ಕಾರಣವಾಗಿರುವವು, ಆನಂದಕುಮಾರ ಸ್ವಾಮಿಯವರ ಗ್ರಂಥಗಳು. ಸ್ವತಃ ಭೈರಪ್ಪನವರು ಮೊದಲ ಮಾತಿನಲ್ಲಿ ಈ ವಿಷಯವನ್ನು ಹೇಳಿದ್ದಾರೆ ಹೊಸಗನ್ನಡ ಸಾಹಿತ್ಯದಲ್ಲಿ 'ನವ್ಯ'ಪಂಥದ ಪ್ರಭಾವ ತುಂಬಾ ಜೋರಾಗಿದ್ದ ಕಾಲದಲ್ಲಿಯೇ ಇದು ಪ್ರಕಟವಾಗಿದೆ. ಅಂದರೆ ಭೈರಪ್ಪನವರು 'ನವ್ಯ'ಸಾಹಿತ್ಯದ ಧೋರಣೆ ಕನ್ನಡ ಸಾಹಿತ್ಯವನ್ನು ಆವರಿಸಿಕೊಂಡ ಕಾಲದಲ್ಲಿಯೇ ಬರೆಯಲು ಪ್ರಾರಂಭಿಸಿದರು. ಆದರೆ ಮುಂದೆ ಬಂದ ಅವರ ಕೃತಿಗಳಲ್ಲಾಗಲಿ, ಧರ್ಮಶ್ರೀಯಲ್ಲಾಗಲಿ ನವ್ಯದ ಪ್ರಭಾವವವನ್ನು ಮಾತ್ರ ಕಾಣುವುದಿಲ್ಲ.

ಧರ್ಮಶ್ರೀಯ ವಸ್ತು ಕಾದಂಬರಿಯ ಶೀರ್ಷಿಕೆ ಸೂಚಿಸುವಂತೆ ಮತಧರ್ಮಗಳಿಗೆ ಸಂಬಧಪಟ್ಟಿದೆ ಹಿಂದೂ ಧರ್ಮ ಕ್ರಿಶ್ಚಿಯನ್ ಧರ್ಮಗಳ ಮತ್ತು ಹಿಂದೂ ಸಂಸ್ಕೃತಿ ಮತ್ತು ಕ್ರಿಶ್ಚಯನ್ ಸಂಸ್ಕೃತಿಗಳ ಮುಖಾಮುಖಿಯನ್ನು ಕಾದಂಬರಿಯುದ್ಧಕ್ಕೂ ಕಾಣಬಹುದು. ಈ ಕಾದಂಬರಿಯಲ್ಲಿ ಬರುವ ಮುಖ್ಯ ಪಾತ್ರ ಸತ್ಯನಾರಾಯಣನದು. ಈ ಪಾತ್ರ ಹಲವು ಅಂಶಗಳಲ್ಲಿ ವಿಚಾರಗಳಲ್ಲಿ ವ್ಯಕ್ತಿತ್ವದಲ್ಲಿ ಭೈರಪ್ಪನವರ ವಿದ್ಯಾರ್ಥಿ ಜೀವನ ಮತ್ತು ವ್ಯಕ್ತಿತ್ವವನ್ನೇ ಹೋಲುತ್ತದೆ. ಈ ವಿಷಯವನ್ನು ಪುಷ್ಟಿಕರೀಸಲು ಭೈರಪ್ಪನವರ ಆತ್ಮ ಕಥನ ಭಿತ್ತಿಯಲ್ಲಿ ಹಲವಾರು ನಿದರ್ಶನಗಳು ದೊರೆಯುತ್ತವೆ.

ಧರ್ಮಶ್ರೀಯನ್ನು ಬರೆದದ್ದು ಭೈರಪ್ಪನವರು ಹುಬ್ಬಳ್ಳಿಯ ಕಾಡಸಿದ್ಧೇಶ್ವರ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತಿದ್ದ ಸಮಯದಲ್ಲಿ. ಲೇಖಕರ ಮೇಲೆ ಆನಂದ ಕುಮಾರಸ್ವಾಮಿಯವರ ಪ್ರಭಾವ ಮತ್ತು ಲಾಲಾಲಜಪತ್‌ರಾಯರ 'ಆರ್ಯಸಮಾಜ' ಎಂಬ ಪುಸ್ತಕಗಳ ಪ್ರಭಾವ ಈ ಸಮಯದಲ್ಲಿ ಉಂಟಾಗಿದೆ ಕ್ರೈಸ್ತಮತ ಪ್ರಚಾರಕರೂ ಕ್ರಿಶ್ಚಯನ್ ಧರ್ಮದ ಪ್ರಚಾರವನ್ನು ಭಾರತದಲ್ಲಿ ಬಿರುಸಾಗಿ ನಡೆಸುತ್ತಿದ್ದ ವೇಳೆಯಲ್ಲಿ ಹಿಂದೂ ಧರ್ಮಕ್ಕೆ ಮತ್ತು ಧರ್ಮನುಯಾಯಿಗಳಿಗೆ ಬೀಳುತ್ತಿದ ಪೆಟ್ಟನ್ನು

ಉಂಟಾಗುತ್ತಿದ್ದ ಮತಾಂತರಗಳನ್ನು ತಡೆಯುವ ಉದ್ದೇಶದಿಂದ ಈ ಕೃತಿಯನ್ನು ಲೇಖಕರು ರಚಿಸಿದ್ದಾರೆ. ಈ ವಿಷಯವನ್ನು 'ಭಿತ್ತಿ'ಯ ಮೂಲಕ ನಾವು ಇನ್ನಷ್ಟು ಸ್ಪಷ್ಟಪಡಿಸಿಕೊಳ್ಳಬಹುದಾಗಿದೆ '' ಆಗ ವಿದೇಶಿ ಹಣದ ಬೆಂಬಲದಿಂದ ಕ್ರೈಸ್ತ ಮತಪ್ರಚಾರಕರು ಭಾರತದಲ್ಲಿ ಬಿರುಸಾಗಿ ಕೆಲಸ ಮಾಡುತ್ತಿದ್ದರು. ಆಸ್ಟ್ರೇಲಿಯಾದ ಒಬ್ಬ ಪ್ರಚಾರಕನು ಮೈಸೂರಿನ ಮೊಹಲ್ಲಾ ಮೊಹಲ್ಲಾಗಳ ಒಂದೊಂದು ಮನೆಯಲ್ಲಿ ಸುತ್ತಮುತ್ತಣ ಮುಗ್ಧ ಹೆಂಗಸರು ಮತ್ತು ಮಕ್ಕಳ ಸಭೆ ಸೇರಿ ತಾನು ಏಸುವಿನ ಕೃಪೆಯಿಂದ ಎಂಥ ರೋಗವನ್ನಾದರೂ ಗುಣಪಡಿಸುವೆನೆಂದು ಪವಾಡದ ಕಾರ್ಯಕ್ರಮ ಮಾಡುತ್ತಿದ್ದ. ಸ್ಥಳಿಯ ಕ್ರೈಸ್ತರಲ್ಲಿ ಕೆಲವರು ಆ ಸಭೆಗೆ ಬಂದು ತನಗೆ ಹನ್ನೆರಡು ವರ್ಷದಿಂದ ಸಹಿಸಲಸಾಧ್ಯವಾದ ಹೊಟ್ಟೆಶೂಲೆ ತಡೆಯಲಾರದೆ ಆತ್ಮಹತ್ಯೆಗೆ ಪ್ರಯತ್ನಿಸಿದ್ದೆನೆಂದು ಹೇಳುವುದು. ಈತ ಸಭಿಕರೆದುರಿಗೆ ಹೊಟ್ಟೆ ಸವುರುತ್ತ ಏಸುವಿನ ದಯೆ ನನ್ನ ಮೇಲೆದೆ, ಈಗ ನಿನಗೆ ಗುಣವಾಗುತ್ತದೆ....... ಹೀಗೆ ಮತಾಂತರಕ್ಕೆ ಜನಗಳನ್ನು ಅಣಿಗೊಳಿಸುತ್ತಿದ್ದ. ಬಡಹುಡಗರಿಗೆ ಉಚಿತ ಹಾಸ್ಟೆಲು, ಉಚಿತ ಪ್ರವೇಶಗಳ ಸೌಲಭ್ಯದಿಂದಲೂ ಮತಾಂತರಗೊಳಿಸುತ್ತಿದ್ದರು. ಹೊಟ್ಟೆ ನೋವಿನ ಪವಾಡದಂಥ ಒಂದು ಸಭೆಗೆ ಹೋಗಿ ನಾನು ನನಗೂ ಹೊಟ್ಟೆ ನೋವೆಂದು ಹೇಳಿ ಅವನು ಎಷ್ಟು ಮಾನಸಿಕ ಸೂಚನೆ ಕೊಟ್ಟರು ಬಗ್ಗದೆ ಅವನನ್ನು ಫಜೀತಿ ಮಾಡಿದ್ದೆ. ಇದನ್ನರಿತ ಕೆಲವು ಕ್ರೈಸ್ತ ತರುಣರು ನನ್ನನ್ನು ಹೊಡೆಯಲು ಬಂದಿದ್ದರು.......... ಆಮಿಷ ಒಡ್ಡಿ ಮತಾಂತರಿಸಬೇಕೆಂಬ ಪ್ರಯತ್ನವನ್ನು ಮಾಡಿದರು ... ಹುಬ್ಬಳ್ಳಿಯ ಕ್ರೈಸ್ತ ಮತ ಪ್ರಚಾರಕರು ಪಾದ್ರಿ ಉತ್ತಂಗಿ ಚೆನ್ನಪ್ಪನವರ ಬನಾರಸಕ್ಕೆ ಬೆತ್ಲೆಹೇಮಿನ ವಿನಂತಿ ಎಂಬ ಪುಸ್ತಕದ ಸಾವಿರಾರು ಪ್ರತಿಗಳನ್ನು ಮುದ್ರಿಸಿ ಉಚಿತವಾಗಿ ಹಂಚುವ ಮೂಲಕ ಜನರ ಮನಸ್ಸನ್ನು ಪರಿವರ್ತಿಸುವ ತಂತ್ರ ಹೂಡಿದ್ದರು...... ನಾನು ಇವನ್ನೆಲ್ಲ ಅಭ್ಯಾಸ ಮಾಡಿ ಉತ್ತಂಗಿಯವರ ವಾದದ ಜಾಣ ಹಾಗು ನಯವಂಚನೆಗಳನ್ನು ಬಯಲು ಮಾಡುವ ಒಂದು ದೀರ್ಘ ಲೇಖನವನ್ನು ಬರೆದು ಕೊಟ್ಟೆ ..........೧

ಭೈರಪ್ಪನವರು 'ಧರ್ಮಶ್ರೀ' ಬರೆಯುವ ಮುನ್ನ ಎದುರಿಸಿದ ಅನುಭವದ ಸನ್ನಿವೇಶ ಇದು ಭಾರತದಲ್ಲಿ ಕ್ರೈಸ್ತ ಧರ್ಮದ ಪ್ರಚಾರಕರು ಈ ರೀತಿಯ ತಂತ್ರಗಳನ್ನು ಅಂದೂ ಅನುಸರಿಸಿರಬಹುದು ಇಂದೂ ಅನುಸರಿಸುತ್ತಿರುವದುನ್ನು ನಾವು ಕಾಣುತ್ತಿದ್ದೇವೆ. ಬೇರೆ ಬೇರೆ ಧರ್ಮ ಪ್ರಚಾರಕರು ತಮ್ಮ ತಮ್ಮ ಧರ್ಮಗಳನ್ನು ಜನಪ್ರಿಯಗೊಳಿಸಿವ ಕಾರಣ ಇಂಥ ಗಿಮಿಕ್‌ಗಳನ್ನು ಮಾಡುತ್ತ ಬಂದಿರುವುದನ್ನು ಇತಿಹಾಸವು ಸಾರಿ ಹೇಳುತ್ತಿದೆ. ಸಾಹಿತ್ಯದಲ್ಲಿಯೂ ಇಂಥ ಪವಾಡದ ಘಟನೆಗಳನ್ನು ಹೆಣೆದು ದರ್ಮವನ್ನು, ಮತವನ್ನು ಜನಪ್ರಿಯಗೊಳಿಸುವುದು ನಡೆದುಕೊಂಡು ಬಂದ ತಂತ್ರವೇ ಆಗಿದೆ. ಹಿಂದು ಧರ್ಮದ ಗಾಢ ಪ್ರಭಾವವುಂಟಾಗಿದ್ದ ಭೈರಪ್ಪನವರಿಗೆ ಕ್ರೈಸ್ತ ಮಿಶನರಿಗಳ ಪ್ರಚಾರ ಆತಂಕವನ್ನು ತಂದೊಡ್ಡಿರುವುದು ಸಹಜವಾಗಿದೆ. ತನ್ನ ಧರ್ಮಕ್ಕೆ ಮತಕ್ಕೆ ಬೇರೆಯವರಿಂದ ಪೆಟ್ಟು ಬೀಳುತ್ತಿದೆ ಎಂಬುದನ್ನು ಅರಿತಾಗ ಬೀರುವ ಪ್ರತಿಕ್ರಿಯೆಯನ್ನು ಭೈರಪ್ಪನವರು ಅಂದಿನ ಸಾಮಾಜಿಕ ಸಂದರ್ಭದಲ್ಲಿ ಮಾಡಿರುವುದನ್ನು ನಾವು ಕಾಣುತ್ತೇವೆ. ನಂತರ ಕೆಲವು ದಿನ ಸಂಗೀತಾಭ್ಯಾಸ ಮಾಡಿದರೂ, ಹಿಂದೂ ಧರ್ಮ, ಕ್ರೈಸ್ತ ಮಿಶನರಿಗಳ ಮತಪ್ರಚಾರ ಇವು ಒಂದು ಗುಂಗಾಗಿ ಭೈರಪ್ಪನವರನ್ನು ಕಾಡಿವೆ. ತನ್ಮೂಲಕ ಹಿಂದೂ ಧರ್ಮಕ್ಕೆ ಆಘಾತ

ಕಾದಿದೆ ಕ್ರೈಸ್ತ ಮಿಶನರಿಗಳ ಹಣ ಮತ್ತು ಕಪಟ ತಂತ್ರಗಳಿಂದ ಭಾರತದ ಬಹುಸಂಖ್ಯಾತ ಹಿಂದುಗಳು ಕ್ರೈಸ್ತ ಧರ್ಮವನ್ನು ಒಪ್ಪಿಕೊಳ್ಳಬಹುದು ಎಂಬ ಅಘಾತ ತಲ್ಲಣಗಳು ಭೈರಪ್ಪನವರನ್ನು ಸದಾ ಆವರಿಸಿವೆ. ಈ ಆವರಣದ ಪ್ರಭಾವಕ್ಕೆ ಸಿಕ್ಕ ಭೈರಪ್ಪನವರು ಹಿಂದೂ ಧರ್ಮ, ಸಂಸ್ಕೃತಿಯ ಮೇಲ್ಮೆಯನ್ನು ತಿಳಿಸುವ ವಸ್ತುವನ್ನಾಗಿ ಹೊಂದಿದ ಕಾದಂಬರಿಯನ್ನು ರಚಿಸಬೇಕೆಂಬ ಮನೋಭಾವಕ್ಕೆ ಬಂದಿದ್ದಾರೆ. ಇದನ್ನು ನಾವು ಅವರ ಮಾತುಗಳಲ್ಲಿಯೇ ಇನ್ನಷ್ಟು ಸ್ಪಷ್ಟಗೊಳಿಸಕೊಳ್ಳಬಹುದು. '' ಸಾಂಸ್ಕೃತಿಕ ತಾಕಲಾಟಗಳು, ಆಕರ್ಷಣೆ ಮತ್ತು ಕರ್ತವ್ಯಗಳ ಸಂಘರ್ಷಗಳು ಮೂಡಿದವು ಮುಂದೆ ಕೆಲವು ದಿನಗಳಲ್ಲಿ ಅವೇ ಒಂದರೊಳಗೊಂದು ಎರಕಗೊಂಡು ಒಂದು ಕಥೆಯ ರೂಪ ತಾಳಿತು. ಇದನ್ನು ಬರೆದರೆ ಒಂದು ಕಾದಂಬರಿಯಾಗುತ್ತದೆನ್ನಿಸಿತು ಕೂತು ಬರೆದು ಬಿಟ್ಟೆ ಅದೇ ದರ್ಮಶ್ರೀ ಕಾದಂಬರಿ'' - ೨

'ಧರ್ಮಶ್ರೀ' ಕಾದಂಬರಿ ಜನ್ಮ ತಳೆಯಲು ಅಂದಿನ ಸಾಮಾಜಿಕ ಅಗತ್ಯತೆ ಇತ್ತು ಮತ್ತು ಹೆಚ್ಚಾಗಿ ಹಿಂದೂ ಸಮಾಜಕ್ಕೆ ಈ ತರದ ಕೃತಿಗಳ ಅಗತ್ಯ ಇತ್ತು ಎನ್ನುವ ಗಟ್ಟಿ ಆಶಯದ ಹಿನ್ನೆಲೆಯಲ್ಲಿ ಈ ಕೃತಿ ರಚನೆಯಾಗಿದೆ.

ಕಾದಂಬರಿಯಲ್ಲೂ ಲೇಖಕರಿಗೆ ಹಿಂದೂ ಧರ್ಮದ ಬಗ್ಗೆ ಹಿಂದೂ ಸಂಸ್ಕೃತಿಯ ಬಗ್ಗೆ ವಿಶೇಷವಾದ ಪ್ರೀತಿ, ಗೌರವಗಳಿರುವುದನ್ನು ಗುರುತಿಸಬಹುದಾಗಿದೆ. ಸತ್ಯನಾರಾಯಣ ತನ್ನ ತಾಯಿಯ ಕುರಿತು ಹೇಳುವ ಸಂದರ್ಭದ ಮಾತಿಗೂ ಕ್ರಿಶ್ಚಿಯನ್ ಹುಡುಗಿ ರಾಚಮ್ಮಳನ್ನು ಕುರಿತು ಹೇಳುವ ಮಾತುಗಳನ್ನು ಗಮನಿಸಬೇಕು.

''ಹಣೆಯ ಮೇಲೆ ವಿಶಾಲವಾಗಿ ಉದ್ದನೆಯ ಆಕಾರದಲ್ಲಿ ಕುಂಕುಮ ಬೊಟ್ಟು, ಕನ್ನೆಯ ತುಂಬ ಅರಿಶಿಣ ಲೇಪಿಸಿಕೊಂಡು ಅಮ್ಮ ಪ್ರತಿ ಶನಿವಾರವೂ ಶ್ರೀರಾಮ ಪೂಜೆ ಮಾಡುತ್ತಿದ್ದ ನೆನಪು ನನಗೆ ಈಗಲೂ ಇದೆ.'' -( ಧರ್ಮಶ್ರೀ ಪುಟ - ೨೦,)

ರಾಚಮ್ಮನಿಗೂ ಸುಮಾರು ನನ್ನಷ್ಟೆ ವಯಸ್ಸು ಅಥವಾ ನನಗಿಂತ ಒಂದು ವರ್ಷಕ್ಕೆ ಚಿಕ್ಕವಳು ತಕ್ಕ ಉದ್ದ ಮತ್ತು ಮಾಟವಾದ ಮೈಕಟ್ಟಿನ ಬಿಳುಪು ಬಣ್ಣದ ಹುಡುಗಿ ಹಣೆಯ ಮೇಲೆ, ನಾವು ಲೆಕ್ಕ ಮಾಡುವಾಗ ಪ್ಲಸ್ ಎಂದು ಹಾಕುವ ಚಿಹ್ನೆಯ ಹಚ್ಚೆ ಹೊಯ್ಸಿಕೊಂಡಿದ್ದಳು. ಆದರೆ ಕುಂಕಮ ಇಡುತ್ತಿರಲ್ಲಿಲ್ಲ ಪ್ರೌಢಶಾಲಾ ಮಟ್ಟದಲ್ಲಿ ಅಭ್ಯಾಸ ಮಾಡುತ್ತಿರುವ ಸತ್ಯನಾರಾಯಣ ಹೇಳುತ್ತಿರುವ ಮಾತುಗಳಿವು ''ಕ್ರಿಶ್ಚಿಯನ್ನರು ಧರಿಸುವ ಹಚ್ಚೆ ಹೊಯ್ಸಿಕೊಳ್ಳವು 'ಪ್ಲಸ್' ಚಿಹ್ನೆಗೆ ಧಾರ್ಮಿಕವಾದ ಮಹತ್ವ ಎಂಥದು ಎಂಬುದು ಈ ವಿದ್ಯಾರ್ಥಿಗೆ ತಿಳಿಯಬೇಕಾಗಿತ್ತು ಅಥವಾ ಲೇಖಕರಿಗೆ ಅನ್ಯಧರ್ಮದ ಬಗ್ಗೆ ಇರುವ ಅಸಡ್ಡೆಯೇ ಈ ರೀತಿ ನುಡಿಸುತ್ತದೆಯೇ ಎಂಬ ಅನುಮಾನಗಳೂ ಕಾಡುತ್ತವೆ. 'ನಾವು ಲೆಖ್ಖ ಮಾಡುವಾಗ' ಎಂಬ ಮಾತು ಅಷ್ಟೇನೂ ಯೋಗ್ಯವಾಗಿ ತೋರುವುದಿಲ್ಲ. ಸತ್ಯನಾರಾಯಣ ಸಿದ್ಧ ವಿಚಾರ ಸರಣಿಯೊಂದಿಗೆ ಮಾತನಾಡುತ್ತಿರುವುದು ಕಾದಂಬರಿಯುದ್ಧಕ್ಕೂ ಕಂಡು ಬರುತ್ತದೆ.

ನೀನು ಯಾಕೆ ಹಣೆಗೆ ಕುಂಕುಮ ಇಡುಲ್ಲ ?
ನಾವು ಕ್ರಿಶ್ಚಿಯನ್ನರು ಅದಕ್ಕೆ ಇಡುಲ್ಲ

ಎಂದು ಪ್ರಶ್ನಿಸುವ ಧಾಟಿಯ ಜಾಣತನವನ್ನು ನಾವು ಗಮನಿಸಬೇಕು ರಾಚಮ್ಮ ಮುಗ್ಧವಾಗಿ ನಂಗೆ ಗೊತ್ತಿಲ್ಲಪ್ಪ ಚರ್ಚಿನಲ್ಲಿರೂ ನಮ್ಮ ಗುರುಗಳು ಅದನ್ನ ಕಂಡರೆ ಬೈತಾರೆ ಎನ್ನುತ್ತಾಳೆಯೋ ಹೊರತು, ನೀವು ಏಕೆ ಅನ್ಯ ಧರ್ಮದ 'ಸಂಕೇತ'ಗಳನ್ನು ಧರಿಸುವುದಿಲ್ಲ ಎಂದು ಚಾಣಕ್ಷದ ವಾದವನ್ನು ಹೂಡುವುದಿಲ್ಲ.

ಭಾರತದ ಪ್ರಜೆಗಳು ಬೇರೆ ಬೇರೆ ಕಾರಣಗಳಿಗಾಗಿ ಮತಾಂತರದ ಸಾಂಸ್ಕೃತಿಕ ಸಂಘರ್ಷಕ್ಕೆ ಒಳಗಾದಂಥವರು. ದ್ರಾವಿಡರ ಮೇಲೆ ಆರ್ಯರ ಆಕ್ರಮಣ ಆರ್ಯ ದ್ರಾವಿಡರ ಮೆಲೆ ಇಸ್ಲಾಂ ಆಕ್ರಮಣ ಈಸ್ಟ್ ಇಂಡಿಯಾ ಕಂಪನಿ ಭಾರತದಲ್ಲಿ ತಳವೂರಿ ದೇಶಿಯ ಅರಸುಗಳನ್ನು ಒಡೆದು ಆಳುವ ತಂತ್ರಗಳಿಂದ ಮಣಿಸಿ ಆರ್ಯ ದ್ರಾವಿಡ ಜನಾಂಗಗಳ ಮೇಲೆ ಇಸ್ಲಾಂ ತನ್ನ ಪ್ರಭಾವವನ್ನು ಹರಡಲು ಪ್ರಾರಂಭಿಸಿದ್ದನ್ನು ಚರಿತ್ರೆಯ ಮೂಲಕ ನಾವು ತಿಳಿಯುತ್ತೇವೆ. ಭಾರತೀಯ ಸಮಾಜದಲ್ಲಿ ಬೇರು ಬಿಟ್ಟ ಮೌಢ್ಯವನ್ನು, ಅನಕ್ಷರತೆಯನ್ನು, ಅವೈಚಾರಿಕ ಮನೋಭಾವವನ್ನು, ಬಡತನವನ್ನು, ಅಸೂಯೆ, ಭೇದ ಮುಂತಾದವುಗಳನ್ನೇ 'ಮತಾಂತರಕ್ಕೆ' ಹುಲುಸಾದ ನೆಲವನ್ನಾಗಿ ಪಡೆಯಬೇಕೆಂದು ಬಯಸಿದರು. ವಾಸ್ತವವಾಗಿ ಇದೆಲ್ಲ ಇವರಿಗೆ ಸಾಧ್ಯವಾದದ್ದು ಹಿಂದೂ ಧರ್ಮದ ಅಸಂಘಟಿತ ಸಮಾಜದಿಂದ. ಶ್ರೇಣಿಕೃತ ಸಮಾಜ ಉಚ್ಚನೀಚ ಕಲ್ಪನೆಗಳನ್ನು ಇಟ್ಟುಕೊಂಡು ತನ್ನ ನೆಲದ ಮಕ್ಕಳನ್ನು ತಾನೇ ಶೋಷಿಸಲು ತೊಡಗಿದಾಗ ಈ ರೀತಿಯ ಮತಾಂತರಗಳಿಗೆ ಅನುವು ಉಂಟಾಗಿರುವುದು ಸುಳ್ಳೇನಲ್ಲ.

ಶಿವರಾಮ ಕಾರಂತರ 'ಚೋಮನ ದುಡಿ' ಪ್ರಕಟವಾದದ್ದು ೧೯೩೩ರಲ್ಲಿ ಧರ್ಮಶ್ರೀ ಪ್ರಕಟವಾದದ್ದು ೧೯೬೧ರಲ್ಲಿ ಧರ್ಮಶ್ರೀ ಕಾದಂಬರಿಗಿಂತ ೨೮ ವರ್ಷಗಳ ಹಿಂದೆ ಚೋಮನದುಡಿ ರಚನೆಗೊಂಡದ್ದನ್ನು ಹಲವು ಕಾರಣಗಳಿಗಾಗಿ ಗಮನಿಸಬೇಕಾಗಿದೆ. ಕಾರಂತರ ಕಾದಂಬರಿಯ ಮುಖ್ಯ ಪಾತ್ರ ಚೋಮನಂಥ ದಲಿತನದು, ಹಿಂದೂ ಧರ್ಮ, ಸಂಸ್ಕೃತಿಯ ಬಗ್ಗೆ ಅಪಾರ ಶ್ರದ್ಧೆ, ತನ್ನ ಪರಂಪರೆಯ ಬಗ್ಗೆ ಗೌರವ ಇಟ್ಟುಕೊಂಡೆ ತಾನೊಬ್ಬ ಬೇಸಾಯಗಾರನಾಗಬೇಕೆಂಬ ಕನಸಿನೊಂದಿಗೆ ಬೆಳೆಯುತ್ತಾನೆ. ಈ ಕಾದಂಬರಿಯಲ್ಲೂ ಮತಾಂತರದ ವಿಷಯ ಪ್ರಸ್ತಾಪವಾಗಿದೆ. ಅದಕ್ಕೆ ಚೋಮನ ಅಸಾಮಧಾನ, ತಾನಿದ್ದ ವ್ಯವಸ್ಥೆಯಲ್ಲಿಯೇ ತನ್ನ ಬದುಕನ್ನು ಕಟ್ಟಿಕೊಳ್ಳುವ ಛಲ. ನಂತರದ ದುರಂತ ಅಂತ್ಯ ಒಟ್ಟಾರೆ ಇಡೀ ಕಾದಂಬರಿಯಲ್ಲಿ ಕಾರಂತರು ನೀಡುವ ದಲಿತ ಬದುಕಿನ ಚಿತ್ರಣ ಕನ್ನಡ ಲೋಕವೇ ಹೆಮ್ಮೆ ಪಡುವಂಥದಾಗಿದೆ. ಕಾದಂಬರಿಯನ್ನು ದಲಿತ ಬದುಕಿನ ಒಳನೋಟಗಳಿಂದಲೇ ಕಾರಂತರು ರೂಪಿಸುತ್ತಾರೆ. ಯಾವ ಪಾತ್ರದಲ್ಲಿ ಅಥವಾ ಅವುಗಳ ಹಿನ್ನಲೆಯಲ್ಲಿ ಕಾರಂತರು ನಿಂತುಕೊಂಡು ನಿರ್ದೇಶಿಸುತ್ತಾರೆ ಎನ್ನಿಸುವುದೇ ಇಲ್ಲ ಆದರೆ ಧರ್ಮಶ್ರೀಯ ಸತ್ಯನಾರಾಯಣನ ಧ್ವನಿಯ ಹಿಂದೆ, ವಿಚಾರಗಳ ಹಿಂದೆ, ಭೈರಪ್ಪನವರು ಗಟ್ಟಿಯಾಗಿ ನಿಂತುಕೊಂಡು. ಆ ಪಾತ್ರವನ್ನು ತಾವೇ ನಿರ್ದೇಶಿಸುತ್ತಿದ್ದಾರೆ ಎನ್ನುವ ಗುಮಾನಿ ಓದುಗರಿಗೆ ಬರುವುದರಲ್ಲಿ ಯಾವ ಅನುಮಾನವೂ ಇಲ್ಲ. ಕಾರಂತರಿಗೆ ದಲಿತರ ಬದುಕಿನ ಸಂಕಷ್ಟಗಳು ಎದುರಾಗಿ ಮಾನವೀಯತೆಯ ಪ್ರಶ್ನೆಗಳು ತೆರೆದುಕೊಂಡಂತೆ, ಕಾಡಿದಂತೆ, ಭೈರಪ್ಪನವರಿಗೆ ಕಾಡದೇ ಹೋಗಿರುವುದು ಅವರ ನಿಲುವನ್ನು ಸೂಚಿಸುತ್ತದೆ ಕಾರಂತರಿಗೆ ಚೋಮ, ಚೋಮನ ಪರಿವಾರ,

ಅದು ಸಿಕ್ಕುಹಾಕಿಕೊಂಡಿರುವ ಕ್ರೂರ ವ್ಯವಸ್ಥೆ ಮುಖ್ಯವೆನಿಸಿದಂತೆ ಭೈರಪ್ಪನವರಿಗೆ 'ಧರ್ಮ' ಮುಖ್ಯವೆನಿಸಿದೆ .ಅದು ಬಿಂಬಿಸುವ 'ಸಂಸ್ಕೃತಿ' ಪ್ರಧಾನವೆನಿಸಿಕೊಳ್ಳುತ್ತದೆ.

''ಹಿಂದೂ (ಸಂಸ್ಕೃತಿಯಲ್ಲಿ) ಸಂಪ್ರದಾಯದಲ್ಲಿ ಗಂಡು ಮಕ್ಕಳ ಕೈಯಲ್ಲಿ ಮಾಡಿಸಬಾರದ ಕೆಲಸಗಳಾದ ಊಟದ ಎಲೆ ತೆಗೆಯುವುದು, ಬೀಸುವುದು, ಕುಟ್ಟುವುದು ಎಲ್ಲವನ್ನು ನನ್ನಿಂದ ಮಾಡಿಸುತ್ತಿದ್ದಳು.'' (ಧರ್ಮಶ್ರೀ, ಪುಟ - ೧೩.) ಎಂಬ ಸತ್ಯನಾರಾಯಣನ ಮಾತು ಹಿಂದೂ ಸಮಾಜದಲ್ಲಿ ಲಿಂಗಪ್ರಮಾಣದ ಆಧಾರದ ಮೇಲೆಯೆ ಶ್ರಮವಿಭಜನೆಯಾಗಿರುವುದನ್ನು ಸೂಚಿಸುತ್ತದೆ. ಹೀಗೆ ಹಿಂದೂ ಧರ್ಮದ ನಂಬಿಕೆಗಳು, ಆಚರಣೆಗಳು, ತತ್ವಗಳುಕಾದಂಬರಿಯಲ್ಲಿ ಎಗ್ಗಳವಾಗಿ ಬರುತ್ತವೆ. ಸತ್ಯನ ತಾಯಿ ತೀರಕೊಂಡ ನಂತರ ಇದು ಆದ ಏಳುದಿನಕ್ಕೆ ಮಾವ ನನ್ನನ್ನು ತನ್ನ ಊರಿಗೆ ಕರೆದುಕೊಂಡು ಹೋದ ನಾನೆ ತಾನೇ ತಾಯಿಗೆ ಸ್ವರ್ಗದ ಬಾಗಿಲು ತೋರಿಸುವ ಪುಣ್ಯದ ಮಗ ? ಎಂದು ಹೇಳುವ ಮಾತು ಕೂಡಾ ಮಗನೆ ತಂದೆ ತಾಯಿಗಳನ್ನು ಸ್ವರ್ಗಕ್ಕೆ ಕಳಿಸುವ ಸಾಧನವಾಗುತ್ತಾನೆ ಎಂದು ಹಿಂದೂ ಧರ್ಮದ ನಂಬಿಕೆಗನುಸಾರವಾಗಿಯೇ ಬಂದದ್ದು.

ಕಾದಂಬರಿಯಲ್ಲಿ ಊಟೋಪಚಾರ ಸ್ವಧರ್ಮಿಯರಲ್ಲಿ ನಡೆಯುತ್ತಿದ್ದವು, ಅನ್ಯಧರ್ಮೀಯರಲ್ಲಿ ನಡೆಯುತ್ತಿದ್ದಿಲ್ಲವೆಂಬ ಬಗ್ಗೆ ಸತ್ಯನ ಮಾತಿನಲ್ಲಿ ವ್ಯಕ್ತವಾಗುತ್ತದೆ. ನೀವು ಕ್ರಿಶ್ಚಿಯನ್ನರು ನಿಮ್ಮ ಜಾತಿಯ ಮನೆಯಲ್ಲಿ ನಾವು ಊಟ ಮಾಡಬಾರದು. ಎಂಬ ಮಾತು ಇದನ್ನು ಸಮರ್ಥಿಸುತ್ತದೆ.

ರಾಚಮ್ಮನ ವಂಶೀಕರು ಮೊದಲು ಹಿಂದೂಗಳೇ ಆಗಿದ್ದು ನಂತರ ಕ್ರಿಶ್ಚಿಯನ್ ಗುರುಗಳ ಪ್ರಭಾವ, ಔಷಧದಿಂದ ಮತಾಂತರಗೊಂಡ ಸಂಗತಿ ಕಾದಂಬರಿಯಲ್ಲಿ ಪ್ರಸ್ತಾಪವಾಗುತ್ತದೆ. ಅದು ಹೀಗಿದೆ :''ಅವಳ ತಂದೆ ಆಲೂರಿನ ಪಟೇಲರಂತೆ ಅವರ ಅಜ್ಜನ ಕಾಲದಲ್ಲಿ ಅವರು ಗಂಗಡಿಕಾರ ಒಕ್ಕಲಿಗರಂತೆ ಆಲೂರಿಗೆ ಒಂದು ಸಲ ಅದೆಂಥದೋ ದೊಡ್ಡ ಜ್ವರ ಬಂದಿತ್ತಂತೆ ಆಗ ಒಬ್ಬ ಕ್ರಿಶ್ಚಿಯನ್ ಗುರುಗಳು ಬಂದು ಅವರೆಲ್ಲರಿಗೂ ಔಷಧಕೊಟ್ಟು ಗುಣಮಾಡಿದರಂತೆ ಅದು ಏಸು ಸ್ವಾಮಿಯೇ ಮಾಡಿದ ಔಷಧವಂತೆ ಅದಕ್ಕಾಗಿ ಆಲೂರಿನವರು ಒಬ್ಬೊಬ್ಬರಾಗಿ ಆ ಗುರುಗಳು ಹೇಳಿದಂತೆ ಕ್ರಿಶ್ಚಿಯನ್ನರಾದರಂತೆ'' (ಧರ್ಮಶ್ರೀ, ಪುಟ -೨೭)

ಬ್ರಾಹ್ಮಣ ವಿದ್ಯಾರ್ಥಿಗಳಿಗೆ ವಾರದ ಮನೆಗಳಲ್ಲಿ ಊಟದ ಸೌಲಭ್ಯವಿರುವದು ಕಾದಂಬರಿಯಲ್ಲಿ ಪ್ರಸ್ತಾಪವಾಗಿದೆ. ಒಂದು ತಲೆಮಾರಿನ ವಿದ್ಯಾರ್ಥಿಗಳು ಈಗಿನಂತೆ ಹಾಸ್ಟೆಲ್ ಸೌಲಭ್ಯವಿಲ್ಲದಿರುವ ಕಾಲದಲ್ಲಿ 'ವಾರಾನ್ನ'ದ ಪದ್ಧತಿಯಲ್ಲಿ ಶಿಕ್ಷಣವನ್ನು ಪಡೆಯುತ್ತಿದ್ದುದು ಬ್ರಾಹ್ಮಣ ಸಮಾಜದಲ್ಲಿ ಮತ್ತು ಲಿಂಗಾಯತ ಸಮಾಜದಲ್ಲಿ ಕಂಡು ಬರುತ್ತದೆ. ತಮ್ಮ ಮತಧರ್ಮದವರ ,ಮನೆಯಲ್ಲಿ ಮಾತ್ರ ಊಟ ಮಾಡುವ ಪದ್ಧತಿ ಇರುವುದು ಅನ್ಯಧರ್ಮೀಯರ ಮನೆಗೆ ಊಟಕ್ಕೆ ಹೋದಾಗ ತಾತ್ಸಾರ ಬಹಿಷ್ಕಾರ ಸಮಾನ್ಯವಾಗಿದ್ದವು.

ಈ ಕಾದಂಬರಿಯಲ್ಲಿ ಬರುವ ಸತ್ಯನಾರಾಯಣ ಅಪ್ಪಟ ವೈಧಿಕ ಧರ್ಮದ ಶ್ರದ್ಧೆ, ನಂಬಿಕೆಗಳಲ್ಲಿಯೇ ಬೆಳದವನು, ಹಾಗಾಗಿ ಹೊಲೆಯರಂಥ ದಲಿತ ಜನಾಂಗದ ಸ್ಥಿತಿ - ಗತಿಯ ಬಗ್ಗೆ ಅವನಿಗೆ ಹೀಗೇಕೆ ? ಎನ್ನುವ ಸಾಮಾಜಿಕ ತಾರತಮ್ಯದ ಪ್ರಶ್ನೆ ಮೂಡದೆ ಮಡಿಯ ಪ್ರಶ್ನೆ ಹುಟ್ಟುವುದು ಆಶ್ಚರ್ಯವುಂಟುಮಾಡುತ್ತದೆ.

ರಾಚಮ್ಮ ಮತ್ತು ಸತ್ಯನಾರಾಯಣ ಇಬ್ಬರು ಕೊಪ್ಪಲು ಎಂಬ ಊರಿನಲ್ಲಿ ಹಾಯ್ದು ಬರುವಾಗಿನ ದೃಶ್ಯವನ್ನು ಇಲ್ಲಿ ನೋಡಬಹುದು.

" ಇಬ್ಬರು ಹೊರಟೆವು ಅವಳ ಕೈಲಿ ಒಂದು ಪುಟ್ಟ ಚೀಲವಿತ್ತು ದಾರಿಯಲ್ಲಿ ಒಂದು ಚಿಕ್ಕ ಹಳ್ಳಿಸಿಕ್ಕಿತು ನಾವು ಹೋಗುತ್ತಿದ್ದ ತೋಟಕ್ಕೆ ಆ ಹಳ್ಳಿಯ ಒಳಗೇ ಹೋಗಬೇಕು ಅದರ ಕೆಲವು ಮನೆಗಳು ಅವು ಗುಡಿಸಲುಗಳೇ ಜಗುಲಿಯ ಗೋಡೆಯ ಮೇಲೆ ತಮ್ಮಟೆಯನ್ನು ತೂಗು ಹಾಕಿದ್ದರು ಅದನ್ನು ಕಂಡು ನಾನು ರಾಚಮ್ಮನನ್ನು ಕೇಳಿದೆ :

' ಇದು ಯಾವ ಜನರ ಊರು ?'
' ಇದು ಹೋಲೇರ ಊರು ಕೊಪ್ಪಲು ಅಂತಃ ಹೆಸರು,
ನರಸಾಪುರದ ಜಾತ್ರೆಲಿ ದೇವಸ್ಥಾನಕ್ಕೆ ಚಪ್ಪರ ಹಾಕಿ,
ದೇವರ ಮುಂದೆ ತಮ್ಮಟೆ ಬಡಿಯೋದು ಈ ಊರಿನೋರೆ.'
ಇವರು ಹೋಲೆರು ಅಂತ ಗೊತ್ತಿದ್ದು ನನ್ನ ಇಲ್ಲಿ ಯಾಕೆ ಕರಕೊಂಡು ಬಂದೆ ?
ಇವರ ಕೇರೀಲಿ ಬಂದ್ರೆ ನಾನು ಸ್ನಾನ ಮಾಡಬೇಕು.
ಯಾಕೆ .?
ನಿನಗೆ ಗೊತ್ತಿಲ್ಲ ಸುಮ್ಮನಿರು ಅವರು ಹೋಲೇರು

ಆ ಊರೆಲ್ಲವೂ ಕೊಳಕಿನಿಂದ ತುಂಬಿತ್ತು. ಅಲ್ಲಿ ಕಾಣುತ್ತಿದ್ದ ಯಾರ ಮೈಮೇಲೆ ಸರಿಯಾದ ಬಟ್ಟೆಯಿರಲಿಲ್ಲ ಹಾಕಿದ್ದ ಹರಕಲು ಬಟ್ಟೆಗಳನ್ನು ಒಗೆದು ಯುಗಾಂತರವೇ ಸಂದಿರಬೇಕು. ಮನೆಗಳ ಹತ್ತಿರವೇ ಮಕ್ಕಳು ಹೇಸಿಗೆ ಮಾಡಿದ್ದರು ಒಂದಿಬ್ಬರು ಹೆಂಡದ ಬುರಡೆ ಹಾಕಿಕೊಂಡು ಅದೆಲ್ಲಿಗೋ ಹೋಗುತ್ತಿದ್ದರು.

ತೋಟಕ್ಕೆ ಹೋದ ತಕ್ಷಣ ನಾನು ತೊಟ್ಟಿದ್ದ ಬಟ್ಟೆ ತೆಗೆದು ಒಗೆದು ಒಣಹಾಕಿ ನೀರಿನಲ್ಲಿ ಧುಮಕಿದರೆ ... ಬೇಗ ನೀರಿನಿಂದ ಮೇಲೆ ಎದ್ದು ಬಿಟ್ಟ ಬಳಪದ ಕಲ್ಲಿನಿಂದ ತೇಯ್ದು ವಿಭೂತಿಯನ್ನು ಹಣೆಗೆ ಧರಿಸಿ ಮರದ ನೆರಳಿನಲ್ಲಿದ್ದ ಮೆಟ್ಟಲಿನ ಮೇಲೆ ಕುಳಿತೆ. -( ಧರ್ಮಶ್ರೀ, ಪುಟ - ೨೯-೩೦.)

ಇಡೀ ಸನ್ನಿವೇಶ ಸಂಭಾಷಣೆ ಜಾತಿ, ಮಡಿ, ಮೈಲಿಗೆಗಳ ಕಲ್ಪನೆಯಲ್ಲಿಯೇ ಅರಳುತ್ತದೆ. ತಾರುಣ್ಯದ ಸಮೀಪದಲ್ಲಿ ನಿಂತ ಗಂಡು ಹೆಣ್ಣುಗಳಲ್ಲಿ ಇರಬೇಕಾದ ಸಹಜ ಭಾವನೆಗಳಿಗೆ ಬದಲಾಗಿ 'ಜಾತಿ'ಯೇ ಪ್ರಧಾನವಾಗಿ ಸ್ಫೋಟಗೊಳ್ಳುತ್ತಿರುವುದು ಅಸಹಜತೆ ಎಂಬ ಭಾವನೆ ಬರುತ್ತದೆ. ವೈದಿಕ ವಿಚಾರಧಾರೆ ಸತ್ಯನ ರಕ್ತದಲ್ಲಿ ಬೆರೆತಂತೆ ಭಾವದಲ್ಲೂ ವಿಷವಾಗಿ ತುಂಬಿಕೊಂಡಿದೆ. ಆದ್ದರಿಂದಲೇ ತಾನೊಬ್ಬ ಶ್ರೇಷ್ಠ ಜಾತಿಗೆ ಸೇರಿದವನು ಎಂಬುದು ಅವನ ಬಲವಾದ ನಂಬಿಕೆ. ಸುಕೋಮಲವಾದ ಹುಡುಗಿಯ ಜೊತೆಗೆ ಅವನು ಮೃಗೀಯ ನಡವಳಿಕೆಯನ್ನು ತೋರುತ್ತಾನೆ. ರಾಚಮ್ಮ ತಂದ ದೋಸೆಯ ಚೂರನ್ನು ಅದೂ ತಾನೇ ತಿಂದು ಅದರ ಅಪರಾಧವನ್ನು ಅವಳ ಮೇಲೇಯೇ ಹೇರಿ ಅವಳ ಕೆನ್ನೆಗೆ ಬಾರಿಸುವುದನ್ನು ಗಮನಿಸಿದರೆ

ಶ್ರೇಣೀಕೃತ ವ್ಯವಸ್ಥೆ ಸತ್ಯನಂಥವರಿಗೆ ಎಂಥ ರಾಕ್ಷಸ ಶಕ್ತಿಯನ್ನು ತಂದು ಕೊಟ್ಟಿದೆ ಎಂದು ಆಶ್ಚರ್ಯವಾಗುತ್ತದೆ. ಮಾನವೀಯತೆಯ ಗಂಧ, ಗಾಳಿಯನ್ನೇ ಹೊಸಕಿ ಹಾಕಿರುವುದನ್ನು ಇಲ್ಲಿ ಕಾಣಬಹುದು.

''ತಿಳಿಯದೇ ದೊಸೆಯಲ್ಲಿ ಒಂದು ಚೂರನ್ನು ತೆಗೆದು ಕೊಂಡು ಬಾಯಿಗೆ ಹಾಕಿಕೊಂಡ ತಕ್ಷಣ ಎಚ್ಚರವಾಯಿತು , ಬಾಯಿಗೆ ಹಾಕಿಕೊಂಡು ಚೂರುಗಳನ್ನು ಉಗುಳಿಬಿಟ್ಟೆ ಅವಳು ಪೆಚ್ಚಾಗಿ ನನ್ನನ್ನೆ ನೋಡುತ್ತಾ ಕುಳಿತು ಬಿಟ್ಟಳು. ನಾನು ಕೈ ಬೀಸಿ ಅವಳ ಕೆನ್ನೆಗೆ ಒಂದು ಏಟನ್ನು ಬಿಗಿದೆ ಏನು ಮಾಡುತ್ತಿದ್ದೆನೆ ಏನು ಮಾಡಿದೆ ಎಂಬ ಪ್ರಜ್ಞೆ ಇರಲಿಲ್ಲ.''( ಧರ್ಮಶ್ರೀ, ಪುಟ - ೩೦)

ಇಂಥ ನಡವಳಿಕೆ ಸ್ವಧರ್ಮಿಯರದು ಒಂದು ಕಡೆ. ಬಹುಶ ಭಾರತದ ಉಚ್ಚ ಶ್ರೇಣಿಯಲ್ಲಿ ನಿಂತ ಜನರ ನಡತೆಯನ್ನು ಸತ್ಯ ಇಲ್ಲಿ ಬಿಂಬಿಸುತ್ತಿದ್ದಾನೆ. ಯಾವ ಕೇರಿಗೆ ಹೋದರೆ ಮೈಲಿಗೆ ಎಂದು ಸ್ನಾನ ಮಾಡುತ್ತಾನೆಯೋ ಅದೇಕೇರಿಗೆ ಪಾದ್ರಿ ಹುಡುಕಿಕೊಂಡು ಹೋಗುವುದು, ಔಷಧಿ ಕೊಡುವುದು, ಅವರ ಕಷ್ಟಗಳಲ್ಲಿ ಒಂದಾಗುವುದು, ಜನರ ಮನವೊಲಿಸಿ ಎಲ್ಲ ಹೊಲೆಯರನ್ನು ಕ್ರಿಶ್ಚಿಯನ್ನ ಜಾತಿಗೆ ಸೇರಿಸಿಕೊಳ್ಳವುದು. 'ಹೊಲೆಯರ ಕೊಪ್ಪಲು' ಎಂದು ಕೀಳು ಮನೋಭಾವನೆಯಿಂದ ಕರೆಯುವ ಗ್ರಾಮ 'ಕ್ರಿಸ್ತನ ಕೊಪ್ಪಲು' ಎಂದು ಕರೆಸಿಕೊಳ್ಳುವುದು. ಮತಾಂತರ ಹೇಗೆ ಮತ್ತು ಯಾವ ಕಾರಣಗಳಿಗಾಗಿ ನಡೆಯುತ್ತಿದ್ದವು ಎಂಬುದು ಸ್ಪಷ್ಟವಾಗುತ್ತದೆ. (ಧರ್ಮಶ್ರೀ, ಪುಟ - ೨೫)

ಹಿಂದೂ ಧರ್ಮದಲ್ಲಿಯೇ ಉಳಿದು ಭೂತ, ವರ್ತಮಾನ, ಭವಿಷತ್ತನಲ್ಲಿ 'ಹೊಲೆಯರೆಂಬ' ಕೀಳು ವಿಶೇಷಣವನ್ನು ಪಡೆದು ಇರುವುದಕ್ಕಿಂತ ಸಾಮಾಜಿಕ, ಧಾರ್ಮಿಕ, ಉತ್ತಮ ಸ್ಥಾನಗಳು ಸಿಗುವಾಗ ಯಾರು ಬೇಡುವೆನ್ನುತ್ತಾರೆ. ಕೊಪ್ಪಲಿನ ಮತಾಂತರ ಗೊಂಡ ಹೊಲೆಯರು ದೇವಸ್ಥಾನ ಪ್ರವೇಶಿಸಲು ಯತ್ನಿಸುವ ಸಂದರ್ಭ ''ನಾವು ಈಗ ಹೊಲೆಯರಲ್ಲ, ಕಿರಿಸ್ಥಾನರು ನಿಮ್ಮ ದೇವರ ಗುಡಿಯೊಳಕ್ಕೆ ಹೊಲೆಯರನ್ನು ಬಿಡಕೂಡದು ಅಂತ ಐತೆ, ಕಿರಿಸ್ತಾನರನ್ನು ಬಿಡಬಹುದು ಎಂದು ವಾದ ಮಾಡಿದರಂತೆ ಕೊನೆಗೆ ಪಂಚಾಯತಿಯಾಗಿ ಕೊಪ್ಪಲಿನವರು ಈಗ ಹೊಲೆಯರಲ್ಲ ವಾದುದರಿಂದ ಅವರನ್ನು ದೇವಾಲಯದೊಳಕ್ಕೆ ಉತ್ತಮ ಹಿಂದುಗಳ ರೀತಿ ಬಿಡಬೇಕು ಎಂದು ತೀರ್ಮಾನಿಸಿದರು.

'ಧರ್ಮಶ್ರೀ' ಕಾದಂಬರಿಯಲ್ಲಿ 'ಮತಾಂತರ'ದ ವಿಚಾರವನ್ನು ಪ್ರಮುಖವಾಗಿ ಪ್ರಸ್ತಾಪಿಸಲಾಗಿದೆ. ಬ್ರಿಟಿಷರೊಂದಿಗೆ ಆಗಮಿಸಿದ ಕ್ರಿಶ್ಚಿಯನ್ ಧರ್ಮ ಮತ್ತು ಪಾಶ್ಚಾತ್ಯ ಸಂಸ್ಕೃತಿ ಭಾರತೀಯ ಸಂಸ್ಕೃತಿಯ ಮೇಲೆ ವಿಶಿಷ್ಟವಾದ ರೀತಿಯಲ್ಲಿ ತನ್ನ ಪ್ರಭಾವವನ್ನು ಬೀರಿದವು. ಭಾರತದಲ್ಲಿ ಬೇರೂರಿದ ಬಡತನ, ಅಜ್ಞಾನ ಮುಂತಾದವುಗಳನ್ನು ಕ್ರಿಶ್ಚಿಯನ್ ಧರ್ಮ ಪ್ರಚಾರಕರು ಮತಾಂತರಕ್ಕೆ ಬಳಸಿಕೊಂಡರು. ಇದೇ ಸಂದರ್ಭದಲ್ಲಿ ಭಾರತೀಯ ಸಮಾಜದಲ್ಲಿ ಹಿಂದೂ ಧರ್ಮದ ಬಗ್ಗೆ ವಿಶಿಷ್ಟ ತಿಳುವಳಿಕೆಯ ಕೊರತೆಯೂ ಇತ್ತು ಮತ್ತು ವರ್ಣಾಶ್ರಮ ಧರ್ಮ ಭಾರತೀಯ ಸಮಾಜವನ್ನು ಛಿದ್ರ, ಛಿದ್ರ ಮಾಡಿತ್ತು ಇದರ ಲಾಭವನ್ನು ಕ್ರಿಶ್ಚಿಯನ್ ಧರ್ಮ ಗುರುಗಳು ಮಾಡಿಕೊಂಡದ್ದನ್ನು ಈ ಕಾದಂಬರಿ ಸೂಚಿಸುತ್ತದೆ. ಸತ್ಯನಾರಾಯಣ ಪ್ರತಿಭಾವಂತ ವಿದ್ಯಾರ್ಥಿ, ಉತ್ತಮ ವಾಗ್ಮಿ ಹಿಂದೂ ಸಂಸ್ಕೃತಿಯ ಬಗೆಗೆ ವಿಶೇಷವಾದ ಅಭಿಮಾನ ಅವನಲ್ಲಿದೆ. ಅಸಂಘಟಿತವಾದ ಹಿಂದೂ ಸಮಾಜ ಅಭಿಮಾನ ಶೂನ್ಯವಾಗಿದೆ ಎಂಬುದು ಅವನ ಅಭಿಮತ. ಹಿಂದೂ ಧರ್ಮದ ವಿಷಯಗಳನ್ನು ತಿಳಿದುಕೊಳ್ಳಲು ಅವನು ಅನೇಕ ಗ್ರಂಥಗಳನ್ನು ಅಭ್ಯಸಿಸುತ್ತಾನೆ. ಕ್ರಿಶ್ಚಿಯನ್ ಶಾಲೆಗಳಲ್ಲಿ ಭಾರತೀಯ ಸಂಸ್ಕೃತಿಗೆ ವಿರುದ್ಧವಾದ ಶಿಕ್ಷಣ ಜರುಗುತ್ತಿದೆ ಎಂಬುದು ಅವನ ವಾದ ಅದಕ್ಕೆ ಅವನು ಜೊತೆ ಮಾತನಾಡುವಾಗ ಈ ಮಾತುಗಳನ್ನು ಹೇಳುತ್ತಾನೆ.

''ಭಾರತೀಯ ಸಂಸ್ಕೃತಿಯನ್ನು ಜೀವಿಸಿ ನಡೆಯುವವರ ನೇತೃತ್ವದಲ್ಲಿ ನಿಮ್ಮ ವಿದ್ಯಾಭ್ಯಾಸ, ಜೀವನಕ್ರಮಗಳು ನಡೆದಿದ್ದರೆ ನನ್ನ ಮಾತು ಅರ್ಥವಾಗುತ್ತಿತ್ತು. ನಿಮ್ಮನ್ನು ಬೆಳೆಸಿರುವವರು ಕಾನ್ವೆಂಟಿನವರು ರಾಷ್ಟ್ರೀಯ ಸಂಸ್ಕೃತಿ, ಭಾರತೀಯ ಸಂಸ್ಕೃತಿಯ ಬಗ್ಗೆ ಅವರಿಗೆ ಲಕ್ಷ್ಯವಿಲ್ಲ ತಿರಸ್ಕಾರವಿದೆ'' (ಧರ್ಮಶ್ರೀ, ಪು-೧೩೧) ಎಂದು ವಾದಿಸುತ್ತಾರೆ. ಆದರೆ ಸತ್ಯನಾರಾಯಣ ಲಲ್ಲಿಯನ್ನು ಪ್ರೀತಿಸುತ್ತಾನೆ. ಲಲ್ಲಿ ಅವನಿಗಾಗಿ ಧರ್ಮ ಬಿಟ್ಟು ಬರಲು ಸಿದ್ಧಳಾಗುತ್ತಾಳೆ. ಕ್ರಿಶ್ಚಿಯನ್ ಧರ್ಮ, ಲಲ್ಲಿಯನ್ನು ಮದುವೆಯಾದರೆ ಅದೇ ಹಿಂದೂ ಧರ್ಮದಲ್ಲಿ 'ಲಲ್ಲಿ'ಯನ್ನು ಸ್ವೀಕರಿಸಲು ಸಾಧ್ಯವಿಲ್ಲವೆಂಬ ವಿಚಾರ ಅವನಿಗೆ ಬೇಸರ ತರಿಸುತ್ತದೆ. ಕೊನೆಗೆ ಲಲ್ಲಿಯನ್ನು ಮದುವೆಯಾಗಿ ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರವಾಗುವ ವಿಚಾರವನ್ನು ಸತ್ಯನಾರಾಯಣ ಮಾಡುತ್ತಾನೆ. ಆದರೆ ಭ್ರಮನಿರಸನವಾಗಿ ಹಿಂದೂ ಧರ್ಮಕ್ಕೆ ಅವನು ಮರಳುತ್ತಾನೆ.

ಲಿಲ್ಲಿಯನ್ನು ಮದುವೆಯಾಗುವ ಸಂದರ್ಭದಲ್ಲಿ ತನಗೆ ಸಂಬಂಧವೇ ಇಲ್ಲದವರ ಗುಂಪಿನಲ್ಲಿ ತಾನಿದ್ದೇನೆಂಬ ವಿಚಾರ ಸತ್ಯನಾರಾಯಣನಿಗೆ ಬರುತ್ತದೆ. ಭಿನ್ನ ಸಂಸ್ಕೃತಿಯ ವಿವರಗಳೂ, ಸನ್ನಿವೇಶವೂ ಅವನಿಗೆ ಎದುರಾಗುತ್ತದೆ.



''ಅಲ್ಲಿ ಸೇರಿದ್ದ ಹೆಂಗಸರ ಗುಂಪನ್ನು ನೋಡಿದರೆ ಅವರೆಲ್ಲರೂ ಹಿಂದೂ ಸ್ತ್ರೀಯರೆಂಬ ಭಾವನೆ ಬರುತ್ತಿತ್ತು ಎಲ್ಲರೂ ಕೆಲವರನ್ನು ಮಾತ್ರ ಬಿಟ್ಟರೆ ಸೀರೆಯುಟ್ಟು ಹೂ ಮುಡಿದಿದ್ದರು ಆದರೆ ಯಾರ ಹಣೆಯಲ್ಲಿಯೂ ಕುಂಕುಮವಿಲ್ಲ ಎಲ್ಲರದೂ ಬೋಳು ಹಣೆ ಅದೊಂದು ನೋಟವೇ ನನ್ನ ಮನಸ್ಸಿನಲ್ಲಿ ಆ ವಾತಾವರಣದ ಅಪರಿಚಿತತನವನ್ನು ಉಂಟು ಮಾಡುತ್ತಿತ್ತು. ಗಂಡಸರೂ ಅಷ್ಟೇ, ಸೂಟು ಬೂಟು ಕೋಟಿನವರೇ, ಶಕುಂತಲೆಯ ಮದುವೆಯಲ್ಲಿದ್ದ, ಪಂಚೆ ಹೊದೆದು ಹಣೆಗೆ ವಿಭೂತಿ ಧರಿಸಿದ್ದ ಗಂಡಸರೂ ಮಂಗಳ ದ್ರವ್ಯಗಳನ್ನಿಟ್ಟಿದ್ದ ಹೆಂಗಸರೂ ಇಲ್ಲಿ ಇರಲಿಲ್ಲ, ವೇದ ಮಂತ್ರ ಅಗ್ನಿ ಹೋತ್ರಗಳ ಸಂಸ್ಕೃತಿಯ ಗಂಧವೂ ಕಾಣಸದು. ಇಡೀ ಜನರ ಗುಂಪು ನನಗೆ ಸಂಬಂಧವಿಲ್ಲದ ಸಂತೆಯಂತೆ ಕಾಣುತ್ತಿತ್ತು''

(ಧರ್ಮಶ್ರೀ, ಪು-೧೯೬) ಈ ರೀತಿ ಭಿನ್ನ ಸಂಸ್ಕೃತಿಯಲ್ಲಿ ತಳಮಳವನ್ನು ಅನುಭವಿಸುವ ಸತ್ಯನಾರಾಯಣ ಮತಾಂತರ ಹೊಂದಿ ಝೇವಿಯರ್ ಸತ್ಯದಾಸನಾಗುತ್ತಾನೆ. ಆದರೆ ನಂತರದ ಪ್ರಸಂಗಗಳಲ್ಲಿ ಅವನು ಮಾನಸಿಕ ತುಮುಲಕ್ಕೆ ಒಳಗಾಗುತ್ತಾನೆ. 'ಒತ್ತಾಯ ಮತ್ತು ಭಯದ ಒತ್ತಡವಿಲ್ಲದೆ ಅನೇಕ ಸಲ ಅನಾಗರೀಕರು ನಾಗರೀಕರಾಗುವುದಿಲ್ಲ. ಅಸಂಸ್ಕೃತರು ಸುಸಂಸ್ಕೃತರಾಗುವುದಿಲ್ಲ' ಎಂಬ ಬಿಷಪ್ಪರ ಮಾತು ಮನಸ್ಸಿನಲ್ಲಿ ಕೊರೆಯುತ್ತದೆ.

''ನನ್ನ ಸಂಸ್ಕಾರ, ಕಲ್ಪನೆ, ಮನೋಧರ್ಮಗಳೇ ಬೇರೆ ಪ್ರಪಂಚದ ಆಸೆ ಕ್ಲೇಶಗಳಿಗೆ ಹೇಸಿ ದೂರಸರಿದರೂ ನನ್ನ ದೇಶದ ಸೃಷ್ಟಿಯಾದ ಬುದ್ಧನ ಮುಖದಲ್ಲಿರುವುದು ನೋವಲ್ಲ ಶಾಂತಿ, ಕೈಲಾಸದ ಪ್ರಶಾಂತತೆಯನ್ನೇ ಬಿಂಬಿಸುವ ಶಿವ, ಅನಂತ ವಾತ್ಸಲ್ಯವನ್ನು ಬೀರುವ ತಾಯಿ ಲಕ್ಷ್ಮಿ ಸರಸ್ವತಿಯರು, ಚಿರಶಾಂತಿಯ ಸಮಾಧಿಯಲ್ಲಿ ಮುಳುಗಿರುವ ಗೊಮ್ಮಟೇಶ್ವರನ ವಿಗ್ರಹಗಳು ನನಗೆ ಸಲ್ಲುತ್ತವೆ'' (ಧರ್ಮಶ್ರೀ, ಪು-೨೧೩,೨೧೪) ಎಂದು ಆಲೋಚನೆಗೆ ತೊಡುಗುವ ಸತ್ಯನಾರಾಯಣ ಪುನಃ ಹಿಂದೂ ಧರ್ಮಕ್ಕೆ ಮರುಳುವುದರೊಂದಿಗೆ ಕಾದಂಬರಿ ಮುಕ್ತಾಯವಾಗುತ್ತದೆ.

ಭಾರತೀಯ ಸಮಾಜದಲ್ಲಿ ಅನ್ಯ ಸಂಸ್ಕೃತಿಗಳ ಪ್ರಭಾವ ಮತ್ತು ಪ್ರೇರಣೆಗಳನ್ನು ಕುರಿತು ಧರ್ಮಶ್ರೀ ಹಲವು ವಿಚಾರಗಳನ್ನು ವ್ಯಕ್ತಪಡಿಸುತ್ತದೆ. 'ಮತಾಂತರ' ಒಂದು ದೇಶದ ಮೂಲ ಸಂಸ್ಕೃತಿಯನ್ನೆ ಅಳಿಸಬಹುದು ಎನ್ನುವ ವಿಚಾರ ಕಾದಂಬರಿಯಲ್ಲಿ ವ್ಯಕ್ತವಾಗಿದೆ ಮತಾಂತರದಿಂದ ಭಾಷೆ, ವೇಷ, ರೀತಿ ನೀತಿಗಳೂ ಕೂಡಾ ಬದಲಾವಣೆ ಹೊಂದುತ್ತವೆ. ಇದರಿಂದ ದೇಶಿ ಸಂಸ್ಕೃತಿಗೆ ಅಪಾಯವುಂಟಾಗುತ್ತದೆ ಎನ್ನುವ ವಿಚಾರಗಳು ಕಾದಂಬರಿಯಲ್ಲಿ ಸಶಕ್ತವಾಗಿ ಮೂಡಿ ಬಂದಿವೆ. ಆದರೆ 'ಮತಾಂತರಕ್ಕೆ' ಒಳಗಾಗುವ ಜನತೆ ಸ್ವಧರ್ಮದಲ್ಲಿ, ಸ್ವದೇಶದಲ್ಲಿ ಅನುಭವಿಸುವ ನೋವು ಕಾದಂಬರಿಯಲ್ಲಿ ಯಾವ ಸ್ಥಾನವನ್ನು ಪಡೆದುಕೊಂಡಿಲ್ಲ ಉಚ್ಚ ನೀಚ ಎಂಬ ಭೇದ, ಶ್ರೀಮಂತ - ಬಡವ ಎಂಬ ಸಾಮಾಜಿಕ ಭೇದ 'ಮತಾಂತರ'ಕ್ಕೆ ಕಾರಣಗಳಾಗಿವೆ. ಕ್ರಿಶ್ಚಿಯನ್ ಮಿಶನರಿಗಳು ಇವುಗಳನ್ನು ಚೆನ್ನಾಗಿ ಉಪಯೋಗಿಸಿಕೊಳ್ಳುವ ಸಂಗತಿಗಳು ಕಾದಂಬರಿಯಲ್ಲಿ ದಾಖಲಾಗಿವೆ. ಹಿಂದೂ ಧರ್ಮದಲ್ಲಿ ತನ್ನವರನ್ನೇ ಹೀನ ಸ್ಥಿತಿಗೆ ತಳ್ಳಿದುದನ್ನು ಮರೆಯುವಂತಿಲ್ಲ.

# ತಬ್ಬಲಿಯು ನೀನಾದೆ ಮಗನೆ

ಭೈರಪ್ಪನವರ ಏಳನೇ ಕಾದಂಬರಿ ಅವರ ಎಲ್ಲಾ ಕಾದಂಬರಿಗಳಂತೆ ಇದೂ ಕೂಡಾ ಒಂದು ಜನಪ್ರಿಯ ಕಾದಂಬರಿ. ಚಲನಚಿತ್ರವಾಗಿಯೂ ಬಹಳಷ್ಟು ಜನರನ್ನು ಈ ಕಾದಂಬರಿ ತಲುಪಿದೆ.

ಗೋವನ್ನು ಪೂಜಿಸುವುದು ಭಾರತೀಯ ಸಂಸ್ಕೃತಿ. ಗೋವಿನಲ್ಲಿ ಮೂವತ್ಮೂರುಕೋಟಿ ದೇವತೆಗಳಿವೆ ಎಂಬುದು ಒಂದು ನಂಬಿಕೆ. ಹಬ್ಬ-ಹರಿದಿನಗಳಲ್ಲಿ ಅಥವಾ ದಿನನಿತ್ಯದ ಸಂದರ್ಭದಲ್ಲಿ ಗೋ ಪೂಜೆ ಹಿಂದುಗಳಿಗೆ ಶ್ರೇಷ್ಠ ಕಾರ್ಯವಾಗಿದೆ. ಈ ನಂಬಿಕೆಗಳನ್ನು ಮತ್ತಷ್ಟು ಪೋಷಿಸುವ ಸಲುವಾಗಿಯೇ ಕಾದಂಬರಿ ನಿರ್ಮಿತವಾಗಿದೆ ಎಂಬ ದಟ್ಟ ಅನುಭವಗಳು ಕಾದಂಬರಿಯನ್ನು ಓದುತ್ತಾ ಹೋದಂತೆ ಅನ್ನಿಸುತ್ತದೆ. ಭಾರತೀಯರಿಗೆ ಹಸು ತ್ಯಾಗದ, ಸತ್ಯದ, ಅಹಿಂಸೆಯ ಪ್ರತೀಕ. ಗೋವಿನ ಹಾಡನ್ನು ಕಾದಂಬರಿಯ ಪ್ರಾರಂಭಕ್ಕೆ ಬಳಸಿಕೊಳ್ಳುವ ಲೇಖಕರು ಈ ಮೌಲ್ಯಗಳ ಪ್ರತ್ಯಕ್ಷ ರೂಪವೇ ಗೋವು ಎಂಬಂತೆ ಚಿತ್ರಿಸುತ್ತಾರೆ. ಇದೇ ಅಭಿಪ್ರಾಯವನ್ನು ಗೌರೀಶ ಕಾಯ್ಕಿಣಿಯವರು ಈ ರೀತಿ ವ್ಯಕ್ತಪಡಿಸುತ್ತಾರೆ. ಹಿಂದುಗಳಿಗೆ ಗೋವು ಹಾಲು ನೀಡುವ ಪಶುವಲ್ಲ. ಅದೊಂದು ಪೂಜ್ಯ ದೈವತ ಗೋಮಾತೆ. ''ಗೋ ಬ್ರಾಹ್ಮಣ ಹಿಥಾಯಚಃ'' ಇದು ನಮ್ಮ ಪ್ರಾರ್ಥನೆ. ಗೋ ರಕ್ಷಣೆ ನಮ್ಮ ವೈದಿಕ ಸಂಸ್ಕೃತಿಯ ಒಂದು ಸನಾತನ ಸಂಪ್ರದಾಯ. ಅದರ ವಿಷಯವನ್ನೆತ್ತಿಕೊಂಡು ಅತ್ಯಂತ ಹೃದಯಂಗಮವಾಗಿ ಬರೆದ ಕಾದಂಬರಿ 'ತಬ್ಬಲಿಯು ನೀನಾದೆ ಮಗನೆ' ಅಂದರೆ ಇದು ಒಂದು ಧಾರ್ಮಿಕ ಸ್ವರೂಪದ ಕಥನ ಕೃತಿಯೇ ಸರಿ. '' ೩ ಎಂದು ಗೌರೀಶ ಕಾಯ್ಕಿಣಿ ಹೇಳುತ್ತಾರೆ.

ಕಾಳೇನಹಳ್ಳಿಯ ಕಾಳಿಂಗಗೌಡನ ''ಪುಣ್ಯ ಕೋಟಿ'' ಹಸುವಿನ ವೃತ್ತಾಂತದೊಂದಿಗೆ ಕಾದಂಬರಿ ಪ್ರಾರಂಭವಾಗುತ್ತದೆ. ಕಾಳಿಂಗಗೌಡನ ಹೆಸರಿನಿಂದಲೇ ಆ ಗ್ರಾಮಕ್ಕೆ ''ಕಾಳೇನಹಳ್ಳಿ'' ಎಂಬ ಹೆಸರು ಪ್ರಸ್ತಾಪವಾಗಿದೆ. ನೂರು ರಾಸುಗಳನ್ನು ಹೊಂದಿದ ಕಾಳಿಂಗಗೌಡನ ಮನೆಯೇ ಒಂದರ್ಥದಲ್ಲಿ ದೊಡ್ಡಿ. ಸಾಮಾನ್ಯವಾಗಿ ನಮ್ಮ ಗ್ರಾಮಗಳಲ್ಲಿ ದನಗಳನ್ನು ಕಟ್ಟಲು ಪ್ರತ್ಯೇಕವಾದ ಮನೆಯನ್ನೇನೂ ಮಾಡಿರುವುದಿಲ್ಲ.

ಗೋವುಗಳಿಗೆ ಗಂಗೆ, ಗೌರಿ, ತುಂಗಭದ್ರೆ, ಪಾರ್ವತಿ, ಸರಸ್ವತಿ, ಸೀತೆ, ಕಾಮಧೇನು.. ಎಂದು ಹೆಸರಿಟ್ಟು ಕರೆಯುವುದು ವಾಡಿಕೆ. ಹೀಗೆ ದೇವತೆಗಳ ಹೆಸರನ್ನು ದಿನವೂ ಕರೆಯುವದರಿಂದ ಸದ್ಗತಿಯಲ್ಲದೇ ನರಕ ಬರಲು ಸಾಧ್ಯವೇ ಇಲ್ಲ ಎಂಬ ನಂಬಿಕೆ ಕಾಳಿಂಗಗೌಡನದು.

ಪುಣ್ಯಕೋಟಿ ಹಸುಗಳೆಂದರೆ ತುಂಬಾ ಭಕ್ತಿ ಕಾಳಿಂಗಗೌಡನಿಗೆ' ''ಈಗಲೂ ಸಂಕ್ರಾಂತಿಯ ದಿನ

ಪಾಲು ಪೊಂಗಲ್ ಹಬ್ಬ ಮಾಡಿದಾಗ ಮೊದಲು ಪುಣ್ಯಕೋಟಿ ತಳಿಗಳಿಗೆ ಪೂಜೆ ಮಾಡುತ್ತಾನೆ.'' ೨ (ತ. ನೀ. ಮ. ಪು -೯).

ಭಾರತೀಯ ಸಂಸ್ಕೃತಿಯಲ್ಲಿ ಗೋವಿಗೆ ಮಹತ್ವದ ಸ್ಥಾನ ಇದೆ ಎಂಬುದನ್ನು ಈ ಕಾದಂಬರಿ ಹೆಜ್ಜೆಹೆಜ್ಜೆಗೆ ನಿರೂಪಿಸುತ್ತಾ ಸಾಗುತ್ತದೆ.

''ರುದ್ರನಿಗೆ ತಾಯಿ, ವಸುವಿಗೆ ಪುತ್ರಿ, ಅಮೃತದ ಭಂಡಾರ ಮೂವತ್ಮೂರು ಕೋಟಿ ದೇವತೆಗಳೆಲ್ಲಾ ಅವಳಲ್ಲೇ ಇರುವಾಗ ಯಾವ ದೇವರನ್ನೂ ಪೂಜೆ ಮಾಡಿದರೂ ಗೋ ಪೂಜೆ ಮಾಡಿದ ಹಾಗೆ ಆಯಿತು.'' ೩. (ತ. ನೀ. ಮ. ಪು -೧೦) ಎಂಬ ನಂಬಿಕೆ ಇಲ್ಲಿ ಬೇರೂರಿದೆ.

ಗೋವು ನಮ್ಮ ಕೃಷಿ ಪ್ರಧಾನ ಸಂಸ್ಕೃತಿಯ ಪ್ರಮುಖ ಅಂಗವಾಗಿದೆ, ಮೊದಮೊದಲು ಋಷಿಗಳು ಗೋಮಾಂಸ ಭಕ್ಷಣೆಯನ್ನು ಮಾಡುತ್ತಿದ್ದರು ಎಂಬುದಕ್ಕೆ ಆಧಾರಗಳು ದೊರೆಯುತ್ತವೆ. ಗೋವು ಹೇಗೆ ದೈವಿಕ ಶಕ್ತಿಯಾಗಿ ಬದಲಾವಣೆ ಹೊಂದಿತು ಎಂಬುದನ್ನು ಕೀರ್ತಿನಾಥ ಕುರ್ತಕೋಟಿಯವರು ಹೀಗೆ ವಿವರಿಸುತ್ತಾರೆ: ''ಗೋಮಾಂಸ ಭಕ್ಷಕರೆ ಆಗಿದ್ದ ಋಷಿಗಳಿಗೆ ಭಾವನಾತ್ಮಕ ದೃಷ್ಟಿಯಿರುವುದು ಸಾಧ್ಯವಿಲ್ಲ ಗೋವು ಅಲ್ಲಿ ಕೃಷಿ ಪ್ರಧಾನ ಸಂಸ್ಕೃತಿಯ ಅಂಗ. ಸಂಪತ್ತಿನ ಸಂಕೇತ, ವಿನಮಯ ಸಾಧನ. ಪೌರಾಣಿಕ ಕಾಲದಲ್ಲಿ ಅರಣ್ಯಕ ಸಂಸ್ಕೃತಿ ನಾಗರೀಕವಾಗುತ್ತ ನಡೆದಂತೆ ಗೋವಿನಲ್ಲಿ ದೈವಿಕ ಶಕ್ತಿಗಳು ಕಾಣ ತೊಡಗಿದವು, ಗೋಹತ್ಯೆ ಬ್ರಹ್ಮ ಹತ್ಯೆಯಂತೆ ಪಾಪವಾಯಿತು.'' ೪ (ತ. ನೀ. ಮ. ಪು -೧೨)

ಭಾರತೀಯ ರಾಜಕಾರಣದಲ್ಲಿ ಈಗಲೂ ಗೋವು ಒಂದು ಶಕ್ತಿಯಾಗಿ ಬಳಕೆಯಾಗುತ್ತಿದೆ. ನಮ್ಮ ನಾಡಿನ ಸಂಸ್ಕೃತಿಯ ಜೀವಂತ ಪ್ರತೀಕವೆಂಬ ನಂಬುಗೆಯಿದೆ. ಈಗಲೂ ಗೋಹತ್ಯೆ ನಿಷೇಧ ಕಾಯಿದೆ ಜಾರಿಯಾಗಬೇಕು. ಎಂಬ ಒತ್ತಡ ಆಗಾಗ ಬರುತ್ತಿದೆ.

''ತಬ್ಬಲಿಯು ನೀನಾದೆ ಮಗನೇ'' ಕಾದಂಬರಿಯಲ್ಲಿ ಭಾರತೀಯ ಸಂಸ್ಕೃತಿಯ ಹಲವಾರು ವಿವರಗಳು ಒಂದಕ್ಕೊಂದು ಹೆಣೆದುಕೊಂಡಿವೆ.

ಕಾಳಿಂಗಗೌಡನಿಗೆ ಈಗ ಐವತ್ತು ವರ್ಷ, ಕಾಳಿಂಗಗೌಡನ ಹೆಂಡತಿ ಲಕ್ಕಮ್ಮ, ಹದಿಮೂರು ವರ್ಷದ ಕೃಷ್ಣೇಗೌಡನಿಗೆ ಮೂಗಿ ತಾಯವ್ವನನ್ನು ಕೊಟ್ಟು ಮದುವೆ ಮಾಡುತ್ತಾರೆ. ಈ ಮದುವೆ ''ಗೊಲ್ಲರ ಪದ್ಧತಿಯಂತೆ ರಾತ್ರಿಯ ಹೊತ್ತು'' ೫. (ತ. ನೀ. ಮ. ಪು -೧೨) ನಡೆಯುತ್ತದೆ. ಭಾರತೀಯ ಸಂಪ್ರದಾಯದಂತೆ ತಂದೆ-ತಾಯಿಗಳು ಒಪ್ಪಿದ ಹುಡುಗಿಯನ್ನು ಅಥವಾ ಹುಡುಗನನ್ನು ಮರುಮಾತಿಲ್ಲದೇ ಮದುವೆಯಾಗುವುದೂ ಕೂಡಾ ನಮ್ಮ ಸಂಸ್ಕೃತಿ. ಈಗ ಇದು ಸಾಕಷ್ಟು ಬದಲಾವಣೆಯನ್ನು ಕಂಡುಕೊಂಡಿದೆ.

ತಾಯಿಯ ಹಾಲು ಕಡಿಮೆಯಾದಾಗ 'ಪುಣ್ಯಕೋಟಿ' ಹಸುವಿನ ಮೊಲೆಯನ್ನೇ ಉಣ್ಣಿಸುವುದು ಇಲ್ಲಿ ಕಾಣುತ್ತೇವೆ. ಮೂಕಿ ತಾಯವ್ವನ ಮೊಲೆಯಲ್ಲಿ ಹಾಲು ನಿಂತು ಹೋದಾಗ ಪುಣ್ಯಕೋಟಿ ಹಸುವಿನ ಹಾಲನ್ನೇ ಕುಡಿಸಲು ಕಾಳಿಂಗಗೌಡ ಸಲಹೆ ಮಾಡುತ್ತಾನೆ. ಅವನಿಗೆ ಪುಣ್ಯಕೋಟಿ ಹಸುವೆಂದರೆ ಅಷ್ಟು ಗೌರವ. 'ಹೆತ್ತ ಅವ್ವನಿಗಿಂತ ಗೋ ತಾಯಿ ದೊಡ್ಡೋಳವ್ವಾ!' ಅವಳ ಮೊಲೆ ಹೆತ್ತವ್ವನ ಎದೆಗಿಂತ ದೊಡ್ಡದಲ್ಲಾ ? ಅದೇ ಸೈ ಎಂದು ಹಸುವಿನ ಕೊಟ್ಟಿಗೆಗೆ ಹೋದ'' ೬.(ತ. ನೀ. ಮ. ಪು -೧೫) ಎನ್ನುವ

ಮಾತುಗಳನ್ನು ನೋಡಿದಾಗ ಇದು ಇನ್ನೂ ದೃಢವಾಗುತ್ತದೆ.

ಕಾಳಿಂಗಗೌಡನ ಮಗ ಕೃಷ್ಣೇಗೌಡ ಹಸುಗಳನ್ನು ಮೇಯಿಸಿಕೊಂಡು ಹಿಂತಿರುಗುವಾಗ ಕಿರುಬ ಹಸುವಿನ ಮೇಲೆ ಆಕ್ರಮಣ ಮಾಡುತ್ತದೆ. ಹಸುವಿನ ಪ್ರಾಣ ಉಳಿಸಲು ಹೋರಾಡುತ್ತಾನೆ. ಹೋರಾಡಿ ಮರಣವನ್ನಪ್ಪುತ್ತಾನೆ. '' ಈಟ್ ಎಳೇ ಪ್ರಾಯದಾಗೇ ಹಿಂಗ್ ಕೆಟ್ಟ ಸಾವು ಸಾಯಕೆ ಏನ್ ಪಾಪ ಮಾಡಿತ್ತಪ್ಪಾ ನನ್ನ ಕಂದಾ ?'' ೭. (ತ. ನೀ. ಮ. ಪು -೨೫) ಎಂದು ಗೋಳಾಡುವ ಕಾಳಿಂಗಗೌಡರಿಗೆ ಜೋಯೀಸರು ಶಾಸ್ತ್ರದ ಆಧಾರಗಳನ್ನು ಹೇಳಿ''.ಗೋವಿನ ಸಂರಕ್ಷಣೆಗಾಗಿ ಬ್ರಾಹ್ಮಣನಾಗಲೀ, ವೈಶ್ಯನಾಗಲೀ ಶಸ್ತ್ರಧಾರಣೆ ಮಾಡಬೇಕು. ಅಂಥದ್ದರಲ್ಲಿ ನಿನ್ನ ಮಗ ಜಾತಿಯಲ್ಲೇ ಗೊಲ್ಲರವನು. ಗೋಮಾತೆಯ ಉಳಿಸೋಕೆ ಹೋದ, ಉಳಿಸಿಯೂ ಉಳಿಸಿದ. ಅವನು ಮುಂದೆ ನುಗ್ಗದೇ ಇದ್ದಿದ್ದರೇ ಹಸು ಉಳಿಯುತ್ತಿತ್ತೇ?. ಗಂಡಸಿನ ಹಾಗೆ ಕಿರುಬಕ್ಕೆ ಭರ್ಚಿ ಹಾಕಿದ. ನೀವು ಅಲ್ಲಿಗೆ ಹೋಗಿ ಅದನ್ನು ಹೊಡೆದಿದ್ದರೂ ಅದು ಸಾಯ್ತಿತ್ತು, ಯಡವಟ್ಟಾಗಿ ಅವನು ಸತ್ತರೂ ಅವನಿಗೆ ಸದ್ಗತಿ ಖಂಡಿತಾ. ನಿನ್ನ ಅದೃಷ್ಟ ಅಂದುಕೋ ನಿನ್ನ ಹಸು ಉಳಿಯಿತು.'' ಎಂದು ನರಸಿಂಹ ಜೋಯೀಸರು ಸಮಾಧಾನ ಮಾಡುತ್ತಾರೆ. ಮುಂದುವರೆದು ಅವರೇ ಈ ರೀತಿ ಹೇಳುತ್ತಾರೆ. ''ಯಾರ್ ಮನೇಲೀ ಹಸು ದುಃಖ ಪಡುತ್ತೋ, ಅವನು ನರಕಕ್ಕೆ ಹೋಗ್ತಾನೆ, ಆ ಹಸು ಸತ್ತು ಹೋಗಿದ್ದರೆ ಅದರ ಕರು ದುಃಖ ಪಡ್ತಾ ಇರ್‌ಲಿಲ್ಲವೇ? ಆಗ ನಿನ್ನ ವಂಶದ ಹಿಂದಿನ ಏಳು ತಲೆ ಮುಂದಿನ ಏಳು ತಲೆಗಳೂ ರೌರವ ನರಕ್ಕೆ ಹೋಗ್‌ಬೇಕಾಗಿತ್ತು.'' ಎಂದು ಕೃಷ್ಣೇಗೌಡನ ಸಾಹಸವನ್ನು ಹೇಳುತ್ತಲೇ ಮಗನ ಸಾವು ವಂಶಕ್ಕೆ ಒಳಿತನ್ನೇ ಮಾಡಿದೆ ಎಂದು ನಂಬಿಸುತ್ತಾನೆ. ಚ್ಯವನ್ ಋಷಿಯ ಹಾಗೂ ಜನಕ ಮಹಾರಾಜನ ವಿಷಯಗಳ ಜೊತೆಗೆ ಗೋ ಮಾತೆಯ ಮಹತ್ವವನ್ನು ತಿಳಿಸುತ್ತಾನೆ.

ಕೃಷ್ಣೇಗೌಡನ ಮಗನಿಗೂ ಕಾಳಿಂಗನೆಂದೇ ಹೆಸರಿಡುತ್ತಾರೆ. ಎಲ್ಲರೂ ಅವನನ್ನು ಪುಟ್ಟ ಕಾಳಿಂಗ ಗೌಡನೆಂದು ಕರೆಯುತ್ತಾರೆ. ನರಸಿಂಹ ಜೋಯೀಸರ ಮಗ ವೆಂಕಟರಮಣ ಮತ್ತು ಪುಟ್ಟ ಕಾಳಿಂಗಗೌಡ ಜೊತೆಜೊತೆಯಲ್ಲೇ ಬೆಳೆಯುತ್ತಾರೆ.

**ಗೋಮಾಳ ಸಂಸ್ಕೃತಿ :**

ಸಾಮಾನ್ಯವಾಗಿ ಗೋವುಗಳು ಹೊಟ್ಟೆ ತುಂಬ ಮೇಯಲಿ ಎನ್ನುವ ಕಾರಣಕ್ಕೆ ಪ್ರತಿಯೊಂದು ಹಳ್ಳಿಯ ಪಕ್ಕದಲ್ಲಿ ಗೋಮಾಳಗಳು ಇರುತ್ತಿದ್ದವು. ಬದಲಾದ ರಾಜಕೀಯ ಸಂದರ್ಭದಲ್ಲಿ ಗೋಮಾಳಗಳನ್ನು ವ್ಯವಸಾಯ ಭೂಮಿಯನ್ನಾಗಿ ಪರಿವರ್ತಿಸಬೇಕೆನ್ನುವ ಹುಕುಂ ಕಾಳಿಂಗಗೌಡ ಚಿಣ್ಣಯ್ಯನಂಥೋರಿಗೆ ಇರಿಸು ಮುರಿಸು ಉಂಟು ಮಾಡುತ್ತದೆ. ಗೋಮಾಳಗಳು ತಮ್ಮ ಹೆಸರಿನಲ್ಲಿದ್ದರೂ ಈ ಗೋಮಾಳಗಳಲ್ಲಿ ಗ್ರಾಮದ ಯಾವುದೇ ಹಸು ಬಂದು ಹುಲ್ಲನ್ನು ಮೇಯಬಹುದಾಗಿತ್ತು.

ಗೋಮಾಳಗಳಿಗೆ ಶಾಸ್ತ್ರದ ಆಧಾರವನ್ನು ಜೋಯೀಸರು ಒದಗಿಸುತ್ತಾರೆ. ''ನೂರು ಧನುವಿನ, ಅಂದರೆ ನಾಲ್ಕು ನೂರು ಮೊಳದ, ಅಂದರೆ ಒಂದು ದಂಡವನ್ನು ಮೂರು ಸಲ ಎಸೆದರೆ ಬೀಳುವಷ್ಟು ಭೂಮಿಯನ್ನು ಗ್ರಾಮದ ಸುತ್ತ ಗೋವಿಗಾಗಿ ಬಿಡಬೇಕು. ಈ ದೂರದ ಒಳಗೆ ಯಾವುದಾದರೂ

ಹಸುಮೇದುಬಿಟ್ಟರೆ, ಆ ಹಸುವಿನ ಯಜಮಾನನಿಗೆ ರಾಜನು ದಂಡ ವಿಧಿಸಕೂಡದು''. ಅಂತಲೂ ಹೇಳಿದೆ. ಎಂದು ಆಮುಲದಾರರಿಗೆ ಗೋಮಾಳ ಪದ್ಧತಿಯನ್ನು ಕೈಬಿಡಬೇಕೆಂದು ತಿಳಿಸುವ ಸಂದರ್ಭದಲ್ಲಿ ಹೇಳುತ್ತಾರೆ. ಆದರೆ ಸರ್ಕಾರ ನಡೆಸುವವರು ಇಂಗ್ಲೆಂಡಿನವರು. ಅವರಿಗೆ ಸಲಹೆ ಕೊಡುವವರು ಬೇರೆಯವರು. ಎಂದು ತಮ್ಮ ಅಸಹಾಯಕತೆಯನ್ನು ಅಮಲ್‌ದಾರರು ವ್ಯಕ್ತಪಡಿಸುತ್ತಾರೆ. ನಂತರ ವರ್ಷಕ್ಕೆ ಮೂವತ್ತೇಳುವರೆ ರೂಪಾಯಿ ಹೆಚ್ಚು ಕಂದಾಯ ನಿಗದಿ ಮಾಡಿ ಗೋಮಾಳಗಳನ್ನು ಉಳಿಸುತ್ತಾರೆ. ಇಷ್ಟೇ ಸಾಲದು ಎಂಬಂತೆ ಕಾಳೇನಹಳ್ಳಿಗೆ ಭೇಟಿ ನೀಡಿದ ಸಂದರ್ಭದಲ್ಲಿ ಕಾಳಿಂಗಗೌಡನ ದೊಡ್ಡಿಗೆ ಹೋಗಿ ಎಲ್ಲ ಗೋವುಗಳಿಗೆ ಸಾಕಷ್ಟು ಭಕ್ತಿ ಗೌರವ ಸಲ್ಲಿಸುತ್ತಾರೆ. ಪುಣ್ಯಕೋಟಿಯ ಸತ್ಯ ವಾಕ್ಯಕ್ಕಾಗಿ ಹುಡುಕಿಕೊಂಡು ಹೋದ ಹೆಬ್ಬುಲಿಯ ಗುಹೆಯನ್ನು ನೋಡಿಕೊಂಡು ಬಂದು ಆ ಜಾಗದಲ್ಲಿ ಒಂದು ಮಂಟಪವನ್ನಾದರೂ ಕಟ್ಟಿಸಬೇಕೆಂದು, ಅಲ್ಲಿ ಗೋಪೂಜೆ ನಡೆಯಬೇಕೆಂದು ತಾವೇ ಮೊದಲಿಗರಾಗಿ ಇಪ್ಪತ್ತೈದು ರೂಪಾಯಿ ಚಂದಾ ಹಣವನ್ನು ನೀಡುತ್ತಾರೆ ಕಾಳಿಂಗಗೌಡನು ದೇವಸ್ಥಾನ ಮತ್ತು ಕಲ್ಯಾಣಿಯನ್ನು ಕಟ್ಟಿಸುವುದುಕ್ಕೆ ಪ್ರಾರಂಭಿಸುತ್ತಾನೆ. ಯಾರನ್ನು ಹಣಕ್ಕಾಗಿ ಕೇಳದೆ ತನ್ನ ನಡುಮನೆಯಲ್ಲಿ ದೊಡ್ಡ ಹಂಡೆಯಲ್ಲಿ ಹೂತಿಟ್ಟಿದ್ದ ನಾಣ್ಯಗಳನ್ನೆ ಹೊರಕ್ಕೆ ತೆಗೆದು ಖರ್ಚುಮಾಡಿ ದೇವಸ್ಥಾನ ಮತ್ತು ಕಲ್ಯಾಣಿಯನ್ನು ಕಟ್ಟಿಸುತ್ತಾನೆ.

ಕಾದಂಬರಿಯನ್ನು ಎರಡು ಭಾಗವಾಗಿ ವಿಂಗಡಿಸಬಹುದಾಗಿದೆ. ಮೊದಲನೆ ಭಾಗದಲ್ಲಿ ನರಸಿಂಹ ಜೋಯಿಸ, ಕಾಳಿಂಗಗೌಡ, ಅವನ ಮಗ ಕೃಷ್ಣೆಗೌಡರ ಬದುಕು ಲಕ್ಕಮ್ಮ ಮತ್ತು ತಾಯಮ್ಮ ಗೋವನ್ನು ದೇವರೆಂದೇ ಭಕ್ತಿಯಿಂದ ಕಾಣುವುದು. ಎರಡನೇ ಭಾಗದಲ್ಲಿ ವೆಂಕಟರಮಣ ಮತ್ತು ಪುಟ್ಟ ಕಾಳಿಂಗ ಮತ್ತು ಅವನ ಹೆಂಡತಿ ಹಿಲ್ಡಾರ ವಿಚಾರ ಸರಣಿಯಲ್ಲಿ ಬೆಳೆಯುವ ವಸ್ತುವಿದೆ. ಈ ಭಾಗದಲ್ಲಿ ಉನ್ನತ ವ್ಯಾಸಂಗವನ್ನು ಆಮೇರಿಕೆಯಲ್ಲಿ ಪಡೆದು ಎಲ್ಲವನ್ನು ವ್ಯಾವಹಾರಿಕವಾಗಿ ನೋಡುವ ಕಾಳಿಂಗ ಮತ್ತು ಹಸುವನ್ನು ಎಲ್ಲಾ ಪಶುಗಳಂತೆ ಒಂದು ಸಾಮಾನ್ಯ ಪಶುವೆಂದು ಕಾಣುವ ಹಿಲ್ಡಾಳ ಮಧ್ಯೆ ಮತ್ತು ಗೋವು ದೈವ ಸಮವೆಂದು ನಂಬುವ ವೆಂಕಟರಮಣರ ಮಧ್ಯ ನಡೆಯುವ ಸಾಂಸ್ಕೃತಿಕ ಸಂಘರ್ಷವಿದೆ. ಭಾರತೀಯ ಮತ್ತು ಪಾಶ್ಚಾತ್ಯ ನಂಬಿಕೆಗಳ ಮುಖಾಮುಖಿಯಿದೆ.

ಆಮೇರಿಕೆಯಲ್ಲಿ ಶಿಕ್ಷಣ ಪಡೆದು ಬಂದ ಕಾಳಿಂಗ ಅವನ ಅಜ್ಜನ ತಿಥಿಗಾಗಿ ಶಿರ ಮುಂಡನ ಮಾಡಿಸಿಕೊಳ್ಳಲು ಒಪ್ಪುವುದೇ ಇಲ್ಲ. ಯಂಗಟ ಶಿರ ಮುಂಡನ ಮಾಡಿಸಿಕೊಳ್ಳುತ್ತಾನೆ. ವೆಂಕರಮಣ ದೊಡ್ಡ ಪಾತ್ರೆಯಲ್ಲಿ ಹಾಲು, ಮೊಸರು, ತುಪ್ಪ, ಗೋಮೂತ್ರ ಮತ್ತು ಸಗಣಿ ಕೂಡಿದ ಪಂಚ ಗೌವ್ಯವನ್ನು ಸಿದ್ಧಮಾಡಿ ಅದನ್ನು ದರ್ಭೆಯಲ್ಲಿ ತೊಳಿಸಿಡುತ್ತಾನೆ.

ಸೂತಕ ಕಳೆಯಲು ಪಂಚಗವ್ಯವನ್ನು ಕಾಳಿಂಗನ ಕೈಗೆ ಹಾಕಿದಾಗ ಕಂಬದ ಮರೆಗೆ ಹೋಗಿ ಅದನ್ನು ಕುಡಿಯಲು ಪ್ರಯತ್ನಿಸಿ ಅದರಲ್ಲಿದ್ದ ಸಗಣಿಯ ಮತ್ತು ಗಂಜಳದ ವಾಸನೆಗೆ ಅಸಹ್ಯಪಟ್ಟುಕೊಂಡು ಅದನ್ನು ಕಂಬಕ್ಕೆ ಒರೆಸಿ ಬಿಡುತ್ತಾನೆ. ಈ ಎಲ್ಲ ಸಂಗತಿಗಳಿಂದ ತಾಯವ್ವ ನೊಂದುಕೊಳ್ಳುತ್ತಾಳೆ. ಈ ಮಟ್ಟಿಗೆ ಈಗಾಗಲೇ ಕಾಳಿಂಗ ಭಾರತೀಯ ಸಂಪ್ರಾದಾಯಗಳಿಗೆ ಮುಖ ತಿರುಗಿಸುತ್ತಾನೆ. ಕಾಳಿಂಗ ಅಜ್ಜನ ಮನೋಭಾವಕ್ಕೂ, ಪುಟ್ಟ ಕಾಳಿಂಗನ ಮನೋಭಾವಕ್ಕೂ ಹೊಂದಾಣಿಕೆಯಾಗದಷ್ಟು

ಬದಲಾವಣೆಗಳಾಗುತ್ತವೆ. ಅಜ್ಜ ಎಲ್ಲ ಹಸುಗಳನ್ನು ಯಾವ ಆರ್ಥಿಕ ಲೆಖ್ಖಾಚಾರವನ್ನು ಹಾಕದೆ ಅವುಗಳು ಮನಷ್ಯರಂತೆ ಭಾವನೆ ಉಳ್ಳವುಗಳು ಎಂದು ಸಾಕಿದರೆ, ಅದೇ ಮೊಮ್ಮಗ ಕಾಳಿಂಗ ''ಮುದಿಯಾದ ಇಪ್ಪತ್ತಮೂರು ಹಸುಗಳು, ಮೂವತ್ತೆರಡು ಎತ್ತುಗಳು ಒಟ್ಟು ಐವತ್ತೈದು ರಾಸುಗಳು ನಿಸ್ಪ್ರಯೋಜಕ ಎಂದು ತೀರ್ಮಾನಿಸಿ ಒಬ್ಬ ಮುಸ್ಲಿಂ ದನದ ವ್ಯಾಪಾರಿಯನ್ನು ಕರೆದು ರಾಸನ್ನು ತಲಾ ಹದಿನೈದು ರೂಪಾಯಿಯಂತೆ ಮಾರಿ ಬಿಡುತ್ತಾನೆ.

ಮನೆಯಲ್ಲಿ ಹಿರಿಯರು ವೃದ್ಧರಾದರೂ ನಿರುಪಯುಕ್ತ ಎಂದು ಭಾವಿಸದೇ ಪ್ರೀತಿಯಿಂದ ಗೌರವದಿಂದ ಸೇವೆ ಮಾಡುವುದು ನಮ್ಮ ಸಂಸ್ಕೃತಿ. ಅದೇ ರೀತಿ ರಾಸುಗಳಿಂದ ಸಾಕಷ್ಟು ಸೇವೆಯನ್ನು ಪಡೆದುಕೊಂಡು ಅವು ನಿರುಪಯುಕ್ತವೆನಿಸಿದಾಗ ಅಥವಾ ವಯಸ್ಸಾದ ನಂತರ ಕಟುಕರಿಗೆ ಕೊಡುವುದು ತರವಲ್ಲ ಎನ್ನುವುದು ನಮ್ಮ ಸಂಪ್ರದಾಯ. ಯಂಗಟೆಗೌಡ ತನ್ನ ಮಾತು ಕೃತಿಗಳಲ್ಲಿ ಇದನ್ನು ತೋರುತ್ತಾನೆ. ಅದಕ್ಕೆ ಪುಟ್ಟಕಾಳಿಂಗ ಗೌಡ ರಾಸುಗಳನ್ನು ಮಾರಿದಾಗ ಯಂಗಟೆಗೌಡ ಹೀಗೆ ಹೇಳುತ್ತಾನೆ : '' ನಿಮ್ಮವ್ವ ಇನ್ನೇನ್ ಮುದುಕಿಯಾಗ್ತ ಅವ್ಳೆ ಇನ್ನೊಟ್ ದಿನ ಆದ್ರೆ ಕುಟ್ಟೊ ಕೆಲ್ಸ ಮಾಡಾಕ್ ಆಗಾಕಿಲ್ಲ ಅವ್ಳು ತಿನ್ನಾ ಮುದ್ದೆ ಏಟು ಅಂತ ಲೆಕ್ಕ ಮಾಡ್ತಿಯಾ ? '' ಎಂದು ಪ್ರಶ್ನಿಸುತ್ತಾನೆ. ಇಂಥ ಪ್ರಶ್ನೆಗಳನ್ನು ಇವನೊಬ್ಬನೇ ಅಲ್ಲ, ಇಡೀ ಗ್ರಾಮಸ್ಥರೆಲ್ಲ ಕೇಳುತ್ತಾರೆ ಎಂಬುದು ಮಹತ್ವದ್ದಾಗಿದೆ. ಆದರೆ ಈ ವಿಷಯವನ್ನು ಕಾಳಿಂಗ ಆಲಕ್ಷ್ಯ ಮಾಡುತ್ತಾನೆ.

ಗೋಮಾಳದಲ್ಲಿ ಹಾಯ್ದುಹೋದ ರಸ್ತೆಯಿಂದಾದ ಹಾನಿಗೆ ಬದಲಾಗಿ ಸಾಕಷ್ಟು ಜಮೀನನ್ನು ಸರಕಾರದಿಂದ ಪಡೆದುಕೊಳ್ಳುವ ಕಾಳಿಂಗ, ಕಲ್ಯಾಣಿಗೆ ನೀರಾವರಿ ಪಂಪನ್ನು ಕೂಡ್ರಿಸುತ್ತಾನೆ. ಭೂಮಿಯನ್ನು ಉಳುಮೆ ಮಾಡಲು ಟ್ರಾಕ್ಟರ್‌ನ್ನು ಖರೀದಿಸಿ ಅದನ್ನು ನಡೆಸಲು ಜಮಾಲ್ ಎನ್ನುವ ಡ್ರೈವರನನ್ನು ಗೊತ್ತುಮಾಡಿಕೊಂಡು ಜಮೀನಿನ ಮಧ್ಯೆ ಒಂದು ವಾಸಕ್ಕಾಗಿ ಮನೆಯನ್ನು ಕಟ್ಟಿಸುತ್ತಾನೆ ಇದೆಲ್ಲ ಕಾಳಿಂಗನಿಗೆ ಅಮೇರಿಕೆಯ ಪ್ರೇರಣೆ ತೀವ್ರತರವಾದ ಅಭಿವೃದ್ಧಿಯನ್ನು ಯಂತ್ರಗಳ ಸಹಾಯದಿಂದ ಸಾಧಿಸಬೇಕೆನ್ನುವುದು ಅವನ ಗುರಿ. ಗೋವುಗಳನ್ನು ಮತ್ತಷ್ಟು ಉತ್ತಮವಾಗಿ ಸಾಕುತ್ತೇನೆಂದು ನುಡಿದ ಅವನು ಅವುಗಳನ್ನು ಆರ್ಥಿಕ ಪ್ರಗತಿಗಾಗಿ ಬಳಸಿಕೊಳ್ಳು ಉದ್ದೇಶವಿಟ್ಟುಕೊಳ್ಳುತ್ತಾನೆ.

''ಪರಮಾರ್ಥ ಅಂತ ಯಾವುದಿದೆಯೋ ಅದು ಜೀವನಕ್ಕೆ ಸಹ ಉಪಯೋಗವಾಗಬೇಕು'' - ೯ (ತ. ನೀ. ಮ. ಪು -೧೧೭) ಎಂಬ ನಿಲುವನ್ನು ತಾಳಿದ ಕಾಳಿಂಗನಿಗೂ ವೆಂಕಟರವುಣನಿಗೂ ಕಾದಂಬರಿಯುದ್ಧಕ್ಕೂ ಒಂದು ವಿಧದ ಘರ್ಷಣೆ ಪ್ರಾರಂಭವಾಗುತ್ತದೆ. ಎಲ್ಲದಕ್ಕೂ 'ಶಾಸ್ತ್ರ'ಗಳ ಮುಖೇನ ನೋಡುವ ವೆಂಕಟರಮಣ ಹೃದಯದ ಮೂಲಕ ನೋಡುವ ಮೃದು ಹೃದಯಿಯಲ್ಲ. ಒಂದು ಬಾರಿ ದೇವಸ್ಥಾನಕ್ಕೆ ಬಂದ ಕಾಳಿಂಗ ವೆಂಕಟರಮಣನಿಗೆ ಪ್ರಸಾದವನ್ನು ಹಸಿದು ಬಂದ ಜಮಾಲನಿಗೆ ಕೊಡು ಎಂದು ಹೇಳಿದಾಗ ನಡೆಯುವ ಸಂಭಾಷಣೆ ಗಮನಿಸಬೇಕು. ಪ್ರಸಾದವನ್ನು ಆಯಾ ದೇವರಗಳ ಮೇಲೆ ಭಕ್ತಿ ಗೌರವ ಇದ್ದವರಿಗೆ ಮಾತ್ರ ಕೊಡುವಂಥಹದು ಎಂದು ವೆಂಕಟರಮಣ ಹೇಳುತ್ತಾನೆ ಹಸಿದು ಬಂದವನಿಗೆ ಅನ್ನ ಕೊಡೋಕ್ಕೆ ಈ ಶಾಸ್ತ್ರವೆಲ್ಲ ಯಾಕೆ ? ಎಂದು ಪ್ರಶ್ನಿಸುವ ಕಾಳಿಂಗ ವೆಂಕಟರಮಣನ ಭೇದಕ್ಕೆ ಸಿಡಿಮಿಡಿಗೊಳ್ಳುತ್ತಾನೆ .'' - ೧೦ (ತ. ನೀ. ಮ. ಪು -೧೧೮) ವೆಂಕಟರಮಣ ಇದಕ್ಕೆ ಸವಿಸ್ತಾರವಾದ

ಸಮರ್ಥನೆಯನ್ನು ಕೋಡುತ್ತ ಹೋಗುತ್ತಾನೆ ಬರಿ ಅನ್ನವಾದರೆ ಕೊಡಬಹುದು, ಹಸಿದವನಿಗೆ ತಕ್ಷಣ ಕೊಡಬೇಕು ಎನ್ನುವೂ ಶಾಸ್ತ್ರವೂ ಇದೆ '' ಎಂದು ಹೇಳುವ ವೆಂಕಟರಮಣ '' ಇವನು ಮುಸಲ್ಮಾನ್‌ರೋನಲ್ವೆ? ಯಾರು ದೇವಸ್ಥಾನಕ್ಕೆ ಬಂದು ಕೈಮುಗಿದು ತೀರ್ಥ ಸ್ವೀಕರಿಸುಲ್ಲವೋ ಅವರಿಗೆ ಪ್ರಸಾದಾನೂ ಕೊಡಬಾರದು. ಅವನು ನಮ್ಮ ದೇವರಿಗೆ ಕೈಯೋ ಮುಗಿಯಲ್ಲವಲ್ಲ.'' ಎಂದು ಪ್ರಸಾದ ಕೊಡುವುದಕ್ಕೆ ನಿರಾಕರಣೆ ತೋರುತ್ತಾನೆ. ಇದಕ್ಕೆ ಸಮರ್ಥನೆ ಎನ್ನುವಂತೆ ತನ್ನ ಅಜ್ಜ ಅಜ್ಜಿಯ ಶ್ರಾದ್ಧವಾದ ದಿನ ಕಾಳಿಂಗನಿಗೇಕೆ ಊಟ ಬಡಿಸ್ತಾ ಇರಲಿಲ್ಲ ಎಂಬುದಕ್ಕೆ ಕಾರಣವನ್ನು ನೀಡುತ್ತಾನೆ. ''ನಮ್ಮ ಪಿತೃಗಳು ನಮ್ಮ ಮಟ್ಟಿಗೆ ದೇವರು .... ಶ್ರಾದ್ಧದ ದಿನ ನಮ್ಮ ಜಾತಿಯೋರಾದ್ರು ನಮ್ಮ ಸಂಸಾರಕ್ಕೆ ಸೇರದ ಹೊರಗಿನೋರು ಊಟ ಮಾಡಲ್ಲ ಅದೇ ಥರಾ ಇದನೂ.. ಪುಣ್ಯಕೋಟಿ ದೇವಸ್ಥಾನದಲ್ಲಿ ಗೋವನ್ನು ದೇವರು ಅಂಥ ಜಮಾಲ ಭಾವಿಸಿದರೆ ಅವಿನೆಗ ಈ ಪ್ರಸಾದದ ಮೇಲೆ ಅಧಿಕಾರವುಂಟು'' ಎಂದು ಹೇಳುವ ವೆಂಕಟರಮಣ ಧರ್ಮವನ್ನು ಶಾಸ್ತ್ರಗಳ ಆಧಾರದ ಮೇಲೆ ಅರ್ಥೈಸುತ್ತಾನೆಯೇ ಹೊರತು ಹೃದಯದ ಪ್ರೀತಿಯಿಂದ ಅಲ್ಲ ''ದೇವನೊಬ್ಬ ನಾಮ ಹಲವು'' ಎನ್ನುವ ವಿಚಾರದಲ್ಲಿ ಯಾರು ಯಾವ ದೈವವನ್ನೇ ನಂಬಿದರೂ ದೈವದ ನಂಬಿಗೆಯೇ ಅಲ್ಲವೇ ಎನ್ನುವ ವೈಶಾಲ್ಯತೆ ಕಂಡುಬರುವುದಿಲ್ಲ.

ಗೋವನ್ನು ದೇವರೆಂದು ನಂಬುವ ಭಾರತೀಯರು ಒಂದು ಕಡೆ ಅದೇ ಪುಣ್ಯಕೋಟಿಯ ಕತೆಯನ್ನು ಕಥೆಯೆಂದು ಒಪ್ಪಿಕೋಭೌದು ನಿಜ ಅಂತ ತಿಳಿದು ಪೂಜೆ ಮಾಡೋದು ಮೂಢ ನಂಬಿಕೆ ಎಂದು ಹಿಲ್ಡಾ ಈ ನಂಬಿಕೆಯ ಮೂಲಕ್ಕೆ ಪೆಟ್ಟು ಕೊಡುತ್ತಾಳೆ. ಹಿಲ್ಡಾಳ ಆಗಮನದಿಂದ ಭಾರತೀಯ ಮತ್ತು ಪಾಶ್ಚಾತ್ಯ ಸಂಸ್ಕೃತಿಗಳ ತೀವ್ರ ಘರ್ಷಣೆ ಕಾದಂಬರಿಯಲ್ಲಿ ಕಂಡು ಬರುತ್ತದೆ. ಪ್ರಸಾದ ಕೊಡುವ ಸಂದರ್ಭ ಬಂದಾಗ ಜಮಾಲ್‌ನಿಗೆ ತಿರಸ್ಕರಿಸಿದಂತೆ ಹಿಲ್ಡಾಳಿಗೂ ಪ್ರಸಾದ ಕೊಡದೇ ತಿರಸ್ಕರಿಸುವ ವೆಂಕಟರಮಣ ''ತೀರ್ಥ ಬೇಡದೋರಿಗೆ ಪ್ರಸಾದವೂ ಇಲ್ಲ.'' ಎಂದು ಹೇಳುತ್ತಾನೆ. ಒಂದು ಧರ್ಮದ ಬಗ್ಗೆ, ದೇವರ ಬಗ್ಗೆ ಶ್ರದ್ಧೆ ಉಂಟಾಗುವುದ ನೋಡಿದ ಕೂಡಲೇ ಆಗಲು ಸಾಧ್ಯವಿಲ್ಲ ಇಂಥ ನಂಬಿಕೆಯನ್ನು ಬೆಳೆಸುವ ತಾಳ್ಮೆ ವೆಂಕಟರಮಣನಲ್ಲಿ ಕಂಡು ಬರುವುದಿಲ್ಲ.

ಹಿಲ್ಡಾ ಫಾರ್ಮಹೌಸನಿಂದ ಗ್ರಾಮದ ತಾಯವ್ವನು ವಾಸುಮಾಡುತ್ತಿದ್ದ ಮನೆಗೆ ಮೊದಲ ಬಾರಿ ಬಂದಾಗ ಸಗಣಿಯಿಂದ ಶುಚಿ ಮಾಡಿದ ನೆಲವನ್ನು ಕಂಡು 'ವಾಟ್ ಈಸ್ ದಿಸ್ ಡರ್ಟ್ ' ಎಂದು ಪ್ರಶ್ನಿಸಿ ಇದು ಅರ್ಥವಾಗದ ಪದ್ಧತಿಯೆನ್ನುತ್ತಾಳೆ. ಹಸುವಿನ ಸಗಣಿಯಿಂದ ತೊಳೆದರೆ ನೆಲ ಶುದ್ಧಿಯಾಗುತ್ತದೆ ಆದರಿಂದ ಧಾರ್ಮಿಕ ಶುದ್ಧಿಯು ಲಭಿಸುತ್ತದೆ, ಶಾಸ್ತ್ರದಲ್ಲಿ ಹಾಗೆ ಹೇಳಿದೆ. ದನದ ಸಗಣೀಲಿ ಕ್ರಿಮಿನಾಶಕ, ರೋಗ ನಾಶಕ ಗುಣವಿದೆ ಎಂದು ಅವಳ ತರ್ಕಕ್ಕೆ ಹೊಂದಿಸಿ ಕಾಳಿಂಗ ಹೇಳಿದರೂ ' ಇದೆಂಥ ಧಾರ್ಮಿಕತೆ ಎಂದು ಈ ನಂಬಿಕೆಯ ಬುಡವನ್ನೆ ಅಲ್ಲಾಡಿಸುವಂತೆ ಹಿಲ್ಡಾ ಮಾತನಾಡುತ್ತಾಳೆ' ಮನೆಯೊಳಗಿರುವ ದೊಡ್ಡಿ ವ್ಯವಸ್ಥೆಯ ಬಗ್ಗೆಯೂ ಅವಳಿಗೆ ಅಸಮಾಧಾನ ಭಾರತೀಯರಿಗೆ ''ದನಗಳು ದೇವರ ಸಮಾನ ದನದ ಸಗಣಿ ಗಂಜಳಗಳು ರೋಗ ಹಾರಕ ಅನ್ನುವ ನಂಬಿಕೆಯನ್ನು ಅವಳು ಒಪ್ಪುವುದಿಲ್ಲ ಮನೆಯ ಒಳಗೆ ಬರುವಾಗ ಕಾಲಿಗೆ ನೀರು ಹಾಕಿಕೊಳ್ಳುವದು ಭಾರತೀಯರ ಸಂಪ್ರದಾಯ. ಆದರೆ ಹಿಲ್ಡಾ ಮನೆಯ ಹೊರಗೆ ಹೋಗುವಾಗ ಕಾಲಿಗೆ ಸಗಣಿ ಅಂಟಿಕೊಂಡಿದೆ ಅನ್ನುವ ಕಾರಣಕ್ಕೆ ಕಾಲಿಗೆ ಗಂಡನಿಂದ ನೀರು

ಹಾಕಿಸಿಕೊಳ್ಳುತ್ತಾಳೆ ತಾಯವ್ವನಿಗೆ ಇದನ್ನು ನೋಡಿಯೋ ವಿಪರೀತ ಸಿಟ್ಟು ಬರುತ್ತದೆ.''

ಹಿಲ್ಡಾಳನ್ನು ಕರೆದುಕೊಂಡು ಬಂದ ದಿನಗಳಿಂದ ಮತ್ತು ತಾನು ಕೈಗೊಳ್ಳುವ ಆಧುನಿಕ ಬೇಸಾಯ ಕ್ರಮಗಳಿಂದ ಗ್ರಾಮದ ಜನತೆಯ ಮಧ್ಯೆ ಮತ್ತು ಕಾಳಿಂಗನ ಮಧ್ಯೆ ತೀವ್ರವಾದ ಭಿನ್ನಾಭಿಪ್ರಾಯಗಳು ಬೆಳೆಯುತ್ತವೆ. ಕಾಳಿಂಗನನ್ನು ಕಂಡರೆ ಭಯ, ಅವನ ವೇಷ - ಭೂಷಣ, ಅವನು ಡೆಪ್ಯೂಟಿ ಕಮೀಶನರ ಜೊತೆ ಕೂತುಕೊಂಡು ಸಿಗರೇಟ್ ಸೇದುವುದು, ಅವನ ಟ್ರಾಕ್ಟರ್, ಬಂದೂಕು, ಕಲ್ಯಾಣಿಯಿಂದ ನೀರೆತ್ತುವ ಪಂಪು, ಇವೆಲ್ಲ ಗ್ರಾಮಸ್ಥರಿಗೆ ವಿಸ್ಮಯವನ್ನುಂಟು ಮಾಡುವುದರ ಜೊತೆಗೆ ಕಾಳಿಂಗನಿಗೂ ತಮಗೂ ಒಂದಾಗಲಾರದ ಭೇದ ಏರ್ಪಡುವುದನ್ನು ಕಾಣುತ್ತಾರೆ. ಬಾಲ್ಯ ಸ್ನೇಹಿತ ವೆಂಕಟರಮಣನಾದರೂ ಆಪ್ತನಾಗುತ್ತಾನೆಂದರೆ ಅವನು ಧರ್ಮ, ಶಾಸ್ತ್ರಗಳಿಂದ ದೂರ ಸಾಗುತ್ತಾನೆ. ಈ ಎಲ್ಲ ವಿಷಯಗಳಿಂದ ಕಾಳಿಂಗ ತಬ್ಬಲಿತನವನ್ನು ಅನುಭವಿಸುತ್ತಾನೆ.

ಹಿಲ್ಡಾ ವೆಂಕಟರಮಣನ ಜೊತೆ ತುಂಬಾ ಆಪ್ತವಾಗಿಯೇ ವ್ಯವಹರಿಸುತ್ತಾಳೆ ಆದರೆ ಶಾಸ್ತ್ರ, ಧರ್ಮಗಳಿಗೆ ಥಳಕು ಹಾಕಿಕೊಂಡಿರುವ ವೆಂಕಟರಮಣ ''ನಿಮಗೆ ಜನ ಬೇಕಾದರೆ ನಮ್ಮ ಹಾಗೆ ಇರಿ, ಇಲ್ಲದಿದ್ದರೆ ಹೀಗೆ ಇರಿ '' ಎನ್ನುತ್ತಾನೆ ಅದಕ್ಕೆ ಹಿಲ್ಡಾಳ ವಾದ ಸರಣಿ ಮುಂದುವರೆಯುವುದುರಲ್ಲಿ ಸಾಂಸ್ಕೃತಿಕ ಮುಖಾಮುಖಿ ಈ ರೀತಿ ಬಿಚ್ಚಿಕೊಳುತ್ತದೆ.

''ನಿಮ್ಮ ದೇಶದ ಪದ್ಧತಿಯೇ ವಿಚಿತ್ರ, ಯಾರದರೂ ನಿಮಗಿಂತ ಭಿನ್ನವಾಗಿ ಆಚರಿಸಿದರೆ ಅವರನ್ನುತಕ್ಷಣ ಹೊರಗೆ ಇಟ್ಟುಬಿಡ್ತೀರಿ ನಾವು ಹಾಗೆ ಮಾಡುಲ್ಲ ನಮ್ಮೊಳಗೆ ಸೇರಿಸಿಕೊಳ್‌ತೀವಿ ಚರ್ಚಿಸ್ತೀವಿ ನಮ್ಮ ಅಭಿಪ್ರಾಯಕ್ಕೆ ಒಲಿಸಿಕೊಳ್‌ತೀವಿ , ಇಲ್ಲದಿದ್ದರೆ ನಾವೇ ಅವರ ಅಭಿಪ್ರಾಯಕ್ಕೆ ಒಪ್ಪಿಕೊತೀವಿ .'' -೧೨ (ತ. ನೀ. ಮ. ಪು -೧೫೧,೧೫೨)ಎಂದು ವೆಂಕಟರಮಣನನ್ನು ತರ್ಕಕ್ಕೆ ಎಳೆಯುತ್ತಾಳೆ.

ಮಾಂಸಾಹಾರವನ್ನು ಸಹಜ ಎಂದು ಒಪ್ಪಿಕೊಂಡ ಕ್ರಿಶ್ಚಿಯನ್ ಧರ್ಮ ಮತ್ತು ಪಾಶ್ಚಾತ್ಯ ಸಂಸ್ಕೃತಿ ಭಾರತೀಯರಿಗೆ ಅಷ್ಟು ಹಿಡಿಸುವುದಿಲ್ಲ ಹಿಂಸೆ ಎಂಬುದೆ ಪಾಪ, ಅಹಿಂಸಾ ಪರಮೋ ಧರ್ಮ, ದಯವೇ ಧರ್ಮದ ಮೂಲವಯ್ಯ ಎಂಬ ವಿಚಾರಗಳು ಬಹುಸಂಖ್ಯಾತ ಭಾರತೀಯರಲ್ಲಿ ಹಲವು ಅಹಿಂಸಾಪ್ರಿಯ ಧರ್ಮಗಳಿಂದ ಬೇರೂರಿರುವಾಗ ಮಾಂಸಾಹಾರವೂ ಕೂಡಾ ಅವರಿಗೆ ಪಾಪವೆಂದೇ ತೋರುತ್ತದೆ.

ಪ್ರಾಣಿಗಳಿರುವುದೇ ಮನಷ್ಯನ ಆಹಾರಕ್ಕೆ ಎಂಬ ಹಿಲ್ಡಾಳ ವಿಚಾರ ಪ್ರಾಣಿಗಳಿಗೆ ಆತ್ಮವೇ ಇರುವುದಿಲ್ಲ ಅವುಗಳನ್ನು ಕೊಂದು ತಿನ್ನುವುದು ಧರ್ಮದ ದೃಷ್ಟಿಯಿಂದಲೂ ವಿರೋಧವಾಗುವುದಿಲ್ಲ ಎಂಬ ನಂಬಿಕೆ ಭಾರತೀಯ ಸಂಸ್ಕೃತಿಗೆ ವಿರುದ್ಧವಾದುದಾಗಿದೆ.

''ಜಗತ್ತಿನಲ್ಲಿ ಸೃಷ್ಟಿಯಾಗಿರುವ ಸರ್ವ ಪ್ರಾಣಿಗಳಿಗೂ ಆತ್ಮವಿದೆ ದೇವರ ದೃಷ್ಟಿಯಲ್ಲಿ ಯಾರು ಮತ್ತೆ, ಯಾರಿಗೋಸ್ಕರವೂ ಹುಟ್ಟಿಲ್ಲ ಕನಿಷ್ಠರನ್ನು ಸ್ವಾಹಾ ಮಾಡುವುದು ಶ್ರೇಷ್ಠತೆಯಲ್ಲ '' - ೧೩ (ತ. ನೀ. ಮ. ಪು -೧೫೪) ಎಂದು ವೆಂಕಟರಮಣ ವಾದಿಸುತ್ತಾನೆ.

''ಪ್ರಾಣಿ ಶಾಸ್ತ್ರದ ಪ್ರಕಾರ ಪ್ರಾಣಿ ಜೀವನದ ಇತಿಹಾಸವನ್ನು ನೋಡಿ, ಕಡಿಮೆ ಶಕ್ತಿಯುಳ್ಳ ಪ್ರಾಣಿಯು ಹೆಚ್ಚು ಶಕ್ತಿಯುಳ್ಳ ಪ್ರಾಣಿಯ ಆಹಾರವಾಗುತ್ತದೆ. ಪ್ರಕೃತಿಯಲ್ಲಿ ಜೀವಚಕ್ರದ ರಚನೆಯೇ

ಹಾಗಿದೆ ಸಣ್ಣ ಮೀನನ್ನು ದೊಡ್ಡ ಮೀನು ತಿನ್ನುತ್ತೆ, ದೊಡ್ಡದನ್ನು ಅದಕ್ಕು ದೊಡ್ಡದು ತಿನ್ನುತ್ತೆ ಅದನ್ನು ತಿನ್ನುವ ಪ್ರಾಣಿ ಮತ್ತೊಂದಿದೆ ಅದು ಮನುಷ್ಯನೇ ಆಗಿರಬೇಕಿಲ್ಲ ಮನುಷ್ಯನೊಬ್ಬ ಮಾಂಸಹಾರ ತ್ಯಜಿಸುವುದರಿಂದ ಇತರ ಪ್ರಾಣಿಗಳು ತಮ್ಮ ಆಹಾರ ಕ್ರಮವನ್ನು ಬದಲಾಯಿಸಿಕೊಳ್ಳುವುದಿಲ್ಲ .'' -೧೪ (ತ. ನೀ. ಮ. ಪು -೧೫೫) ಎಂದು ಹಿಲ್ಡಾ ತನ್ನ ಸಂಸ್ಕೃತಿಯ ಅಂಗವೇ ಆದ ಮಾಂಸಾಹಾರವನ್ನು ಸಮರ್ಥಿಸಿಕೊಳ್ಳುತ್ತಾಳೆ ಆದರೆ ಇದನ್ನು ವೆಂಕಟರಮಣ ಒಪ್ಪಿಕೊಳ್ಳುವುದಿಲ್ಲ.

'' ಎಲ್ಲಾ ಪ್ರಾಣಿಗಳೂ·ತಮಗಿಂತ ದುರ್ಬಲವಾದ ಜೀವಿಗಳನ್ನು ತಿಂದು ಬದುಕುವುದೇ ಜೀವನ ಧರ್ಮ ಅಂತ ನೀವು ವಿಜ್ಞಾನ ಹೇಳಿದಿರಿ ಅದು ಸುಳ್ಳು ಹುಲಿ, ಕಿರುಬ, ನಾಯಿ, ರಣಹದ್ದುಗಳಿರುವಂತೆ ಜೀವಜಗತ್ತಿನಲ್ಲಿ ಎತ್ತು, ಕುದುರೆ, ಹಸು, ಗಿಣಿ, ಪಾರಿವಾಳ ಮೊದಲಾದ ಸಸ್ಯಾಹಾರಿ ಜೀವಿಗಳು ಇವೆ ಮನುಷ್ಯ ಮೂಲತಃ ಒಂದು ಪ್ರಾಣಿ ಅಂತ ನಿಮ್ಮ ದೇಶದೋರು ಹೇಳ್ತಾರೆ ಅದನ್ನು ಒಪ್ಪಿಕೊಂಡರೂ ಅವನು ನಾಯಿ ರಣಹದ್ದುಗಳ ಜಾತಿಗೆ ಸೇರಿದ ಪ್ರಾಣಿಯೋ ಅಥವಾ ಹಸು ಪಾರಿವಾಳಗಳ ಜಾತಿಯ ಪ್ರಾಣಿಯೋ ? ಅವನಿಗೆ ಮಾಂಸ ಸಿಗಿದು ಅಗಿಯಲು ತಕ್ಕ ಹಲ್ಲಿದೆ ಅಂತ ನೀವು ಅನ್ನಬಹುದು ಅದೇ ಹಲ್ಲಿನಿಂದ ಅವನು ಹಣ್ಣು ಹಂಪಲಗಳನ್ನು ತಿನ್ನಬಹುದುಲ್ಲ .'' - ೧೫ (ತ. ನೀ. ಮ. ಪು -೧೫೫) ಎಂದು ಭಾರತೀಯ ಸಂಸ್ಕೃತಿ ಉದಾತ್ತೀಕರಣಗೊಂಡದ್ದನ್ನು ಮತ್ತು ಮಾಂಸಹಾರವನ್ನು ತ್ಯಜಿಸುವುದಕ್ಕೆ ಮಾನವನ ಶ್ರೇಷ್ಠತೆ ಎಂಬುದನ್ನು ತನ್ನ ವಾದದ ಮೂಲಕ ವೆಂಕಟರಮಣ ವ್ಯಕ್ತಪಡಿಸುತ್ತಾನೆ.

ಒಂದು ಕಡೆ ಗೋವನ್ನು ದೇವರೆಂದು ಪೂಜಿಸುವ ಈ ನಾಡಿನಲ್ಲಿ ಮಾರಿಗಾಗಿ ಕೋಣವನ್ನು ಬಲಿಕೊಡುವ ಸಂಪ್ರಾದಾಯವೂ ಬೆಳೆದು ಬಂದಿದೆ. ಕನಿಷ್ಠವಾದದುನ್ನು ಸ್ವಾಹಾ ಮಾಡಬಾರದೆನ್ನುವ ನೀತಿಯ ಜೊತೆಗೆ ನಿಕೃಷ್ಟವಾಗಿ ಬದುಕನ್ನು ಕಳೆಯುವ ಒಂದು ಜನಾಂಗವೇ ಈ ನಾಡಿನಲ್ಲಿದೆ. ಇಡೀ ಕಾದಂಬರಿಯುದ್ದಕ್ಕು ಗೋವಿನ ಪ್ರತೀಕ ಪಡೆದುಕೊಳ್ಳುವ ವ್ಯಾಪಕತೆ ಮಹತ್ವ ವಿಸ್ಮಯದ ಜೊತೆಗೆ ದ್ವಂದ್ವತೆಯನ್ನು ತೆರೆದಿಡುತ್ತದೆ. ಕಿರುಬುದ ಜೊತೆಗೆ ಹೋರಾಡುತ್ತ ಸತ್ತ ಕೃಷ್ಣೆಗೌಡನ ಜೀವನಕ್ಕಿಂತ ಹಸುವಿನ ಜೀವಕ್ಕೆ ಮಹತ್ವ ಕೊಡುವ ಶಾಸ್ತ್ರದಲ್ಲಿ ಯಾವ ಹುನ್ನಾರ ಇದೆ ಎಂಬ ಗುಮಾನಿಯೂ ಉಂಟಾಗುತ್ತದೆ.

ಭಾರತೀಯರ ಬದುಕನ್ನು ಅರ್ಥಿಕವಾಗಿ ಮೇಲೆತ್ತುವ ದೃಷ್ಟಿಯಿಂದ ಕಾಳಿಂಗನ ಕೈಹಿಡಿದು ಭಾರತಕ್ಕೆ ಬಂದೆ ಎಂದು ಹಿಲ್ಡಾ ಹೇಳುತ್ತಾಳೆ. ವೆಂಕಟರಮಣ ಇದನ್ನು ನಿರಾಕರಿಸುತ್ತಾನೆ. ಪ್ರಾಣಿ ದಯೆ ಸಸ್ಯಹಾರ ಎಂದು ಮಾತನಾಡುವ ವೆಂಕಟರಮಣ ಮಾರಿಕೆರೆಯ ಮಾರಿಹಬ್ಬದಲ್ಲಿ ಬಲಿಯಾದ ಮೈಲಿಗೆಯನ್ನು ತೆಗೆಯಲು ಬರುವುದು ವಿಚಿತ್ರವಾಗಿದೆ.

ಒಂದು ಕಡೆ ಮಾನವೀಯ ಅನುಕಂಪವೇ ಇಲ್ಲದ ಪಾಶ್ಚಾತ್ಯ ನಾಗರೀಕತೆಯ ಸ್ವರೂಪ ಹಿಲ್ಡಾಳಿಂದ ತಿಳಿಯುತ್ತದೆ. ಕರು ಇಲ್ಲದೇ ಯಂತ್ರಗಳಿಂದ ಹಸುವಿನ ಹಾಲನ್ನು ಕರೆಯುವುದು, ಚರ್ಮಕ್ಕಾಗಿ ನಿಷ್ಪ್ರಯೋಜಕ ಕರುಗಳನ್ನು ಕೊಲ್ಲುವುದು ಮಾನವನ ಸ್ವಾರ್ಥದ ಪರಾಕಾಷ್ಠೆಯಾಗಿ ತೋರುತ್ತದೆ.''ಹೆಚ್ಚು ಹಾಲು ಬರುವಂತೆ ತಾಯಿಗೆ ಪುಷ್ಟಿಕರ ಆಹಾರಕೊಟ್ಟು ಅದರ ಕರು ಕುಡಿದು ಉಳಿದುದನ್ನು ಮಾತ್ರವೇ ಮನುಷ್ಯನು ಕರೆದುಕೊಳ್ಳಬೇಕೆಂಬ'' -೧೬ (ತ. ನೀ. ಮ. ಪು -೧೮೧) ಕಾಳಿಂಗಗೌಡಜ್ಜನ ಶ್ರದ್ಧೆ

ನೆನಪಾಗುತ್ತದೆ.

ಹಿಲ್ಡಾಳನ್ನು ಅವಳ ಜನಾಂಗವನ್ನು ಅನಾಗರಿಕವೆಂದು ನಿರ್ಧಾರಕ್ಕೆ ಬರುವ ವೆಂಕಟರಮಣ ''ಪ್ರಾಣಿ ಹಿಂಸೆ ಅಂದ್ರೆ ನಿಮ್ಮ ಆತ್ಮಕ್ಕೆ ಸ್ವಲ್ಪವೂ ಚುಚ್ಚೂದಿಲ್ಲ ನೀವು ನಿಮ್ಮ ಜನಾಂಗ, ನಿಮ್ಮ ಜೀವನ ಧ್ಯೇಯ ಇವೆಲ್ಲ ತೀರ ಅನಾಗರಿಕವಾದವು. ಹುಲಿ ಕಿರುಬಗಳಿಗಿಂತ ಕ್ರೂರ ಜನ. ಮನುಷ್ಯರ ಸ್ನೇಹಕ್ಕೆ ನೀವು ಅರ್ಹರೆ ಅಲ್ಲ'' ಎಂದು ಹೇಳುತ್ತ ಗೋವನ್ನು ಇಷ್ಟು ಹೀನವಾಗಿ ನಡೆಸಿಕೊಳ್ಳುವವರು ನರಕಕ್ಕೆ ಹೋಗುತ್ತಾರೆ ಗೋವಿನ ಪೂಜ್ಯತೆಯನ್ನು ಸ್ಥಾಪಿಸುತ್ತಾ ಸಾಗುವ ವೆಂಕಟರಮಣ ಗೋವು ಹೇಗೆ ದೇವತೆಗಳಿಗೆ ಆ ವಾಸಸ್ಥಾನವಾಗಿದೆ ಎಂಬುದನ್ನು ವಿವರಿಸುತ್ತಾನೆ.

''ಗೋವು ಅಂದರೆ ಏನಂತ ತಿಳಿದಿರಿ ? ಇಡೀ ವಿಶ್ವದ ಪ್ರತೀಕವೇ ಅದು. ವಿಶ್ವದ ಸಮಸ್ತ ಕ್ರಿಯೆಗಳನ್ನೂ ಗೈಯಲು ಇರುವ ಬೇರೆ ಬೇರೆ ದೇವತೆಗಳೆಲ್ಲರೂ ಗೋವಿನಲ್ಲಿ ವಾಸಿಸುತ್ತಾರೆ. ಅದರ ಕೋಡುಗಳ ಬುಡದಲ್ಲಿ ಬ್ರಹ್ಮ ವಿಷ್ಣಾದಿಗಳಿದ್ದಾರೆ. ಕೊಡುಗಳ ತುದಿಯಲ್ಲಿ ಸರ್ವ ತೀರ್ಥಗಳು ಇವೆ. ಎರಡು ಕಣ್ಣುಗಳಲ್ಲಿಯೂ ಸೂರ್ಯ ಚಂದ್ರರೂ, ದಂತಗಳಲ್ಲಿ ವಾಯು, ನಾಲಿಗೆಯಲ್ಲಿ ವರುಣ, ಹುಂಕಾರದಲ್ಲಿ ವಿದ್ಯಾದೇವತೆ ಸರಸ್ವತಿ, ಎರಡು ತುಟಿಗಳಲ್ಲಿ ಪ್ರಾತ ಸಂಧ್ಯೆಯರು, ನಾಲ್ಕು ಪಾದಗಳಲ್ಲಿ ನಾಲ್ಕು ಧರ್ಮಗಳು, ಗೋಮೂತ್ರದಲ್ಲಿ ಗಂಗೆ, ಮೊಲೆಗಳಲ್ಲಿ ನಾಲ್ಕು ಸಾಗರಗಳು, ಒಂದೊಂದು ರೋಮದಲ್ಲಿಯೂ ಒಂದೊಂದು ದೇವತೆಯಂತೆ ಒಟ್ಟು ಮೂವತ್ಮೂರು ಕೋಟಿ ದೇವತೆಗಳಿದ್ದಾರೆ. ಅದಕ್ಕೆ ಮಹರ್ಷಿಗಳು ಹೇಳಿದ್ದಾರೆ : ಹಿಂಸೆಯಿಂದ ತಿನ್ನುಕ್ಕಾಗಲಿ, ಕೊಲ್ಲುಕ್ಕಾಗಲಿ ಯಾವನು ಹಸವನ್ನು ಮಾರುತ್ತಾನೆಯೋ, ಮಾರಲು ಅನುಮತಿ ನೀಡುತ್ತಾನೆಯೋ ಅವನು ಗೋವಿನಲ್ಲಿ ಎಷ್ಟು ರೋಮಗಳಿವೆಯೋ ಅಷ್ಟು ವರ್ಷಗಳ ಕಾಲ ರೌರವ ನರಕದಲ್ಲಿ ಮುಳುಗುತ್ತಾನೆ.'' ಎಂದು ಗೋವಿನ ಬಗ್ಗೆ ಇರುವ ನಂಬಿಕೆಗೆ ಶಾಸ್ತ್ರಾಧಾರಗಳನ್ನು ಕೊಡುತ್ತ ಭಯವನ್ನು ವೆಂಕಟರಮಣ ಬಿತ್ತುತ್ತಾನೆ. ಆದರೆ ವೆಂಕಟರಮಣನ ಈ ಎಲ್ಲ ವಿಚಾರಗಳನ್ನು ತರ್ಕದಿಂದಲೇ ಹಿಲ್ಡಾ ಕತ್ತರಿಸಿ ಹಾಕುತ್ತಾಳೆ ಬೇರೆ ಪ್ರಾಣಿಗಳ ಮಾಂಸಾಹಾರ ಒಪ್ಪುವುದಾದರೆ ಗೋಮಾಂಸ ಏಕೆ ವರ್ಜ್ಯ ಕೋಣಗಳನ್ನು ಏಕೆ ಕಡಿಯುತ್ತಿರಿ ? ಎಂದು ಕೇಳುವ ಪ್ರಶ್ನೆಗೆ ವೆಂಕಟರಮಣ ಸಮಂಜಸವಾದ ಉತ್ತರ ನೀಡುವುದೇ ಇಲ್ಲ. ಅವು ಕೇವಲ ನಂಬಿಕೆಯಾಗಿ ಮಾತ್ರ ಮಹತ್ವ ಪಡೆದುಕೊಳ್ಳುತ್ತವೆ.

ಹಿಲ್ಡಾ ಗೋವನ್ನು ಅದು ಪುಣ್ಯಕೋಟಿ ತಳಿಯ ಹಸುವನ್ನೇ ತನ್ನ ವೈಜ್ಞಾನಿಕ ಸತ್ಯಕ್ಕಾಗಿ ಆಯ್ದುಕೊಳ್ಳುತ್ತಾಳೆ. ಜಮಾಲನಿಂದ ಅದರ ಹತ್ಯೆಯನ್ನು ಮಾಡಿಸಿ ಅವನ ಹೆಂಡತಿಯಿಂದ ಅಡುಗೆ ಮಡಿಸಿ ಊಟ ಮಾಡುವುದು. ಒಂದೊಂದು ಅಂಗವನ್ನು ಛೇದ ಮಾಡಿ ವೆಂಕಟರಮಣ ಹೇಳಿದ ದೇವತೆಗಳನ್ನು ಹುಡುಕುವದು ಕಾದಂಬರಿಯಲ್ಲಿ ತೀವ್ರತೆಯನ್ನು ಉಂಟು ಮಾಡುತ್ತದೆ. ಒಂದು ಜನಾಂಗದ, ಒಂದು ದೇಶದ ನಂಬುಗೆಯ ಮೇಲೆ ನಡೆದ ಪ್ರಹಾರವೆಂದು ಗ್ರಾಮಸ್ಥರೂ ತಿಳಿದುಕೊಳ್ಳುತ್ತಾರೆ. ಕಾಳಿಂಗಗೌಡಜ್ಜನ ಮನೆಯಲ್ಲಿಯೇ ಇಂಥ ಪಾಪಕೃತ್ಯ ನಡೆದಿರುವುದನ್ನು ಗ್ರಾಮದ ಜನತೆ ಸಹಿಸಿಕೊಳ್ಳುವುದಿಲ್ಲ. ಫಾರ್ಮ ಹೌಸ್‌ಗೆ ಬಂದು ಗಲಾಟೆ ಮಾಡಿ ಶಿಕ್ಷೆ ವಿಧಿಸುವ ತೀರ್ಮಾನ ತೆಗೆದುಕೊಳ್ಳುತ್ತಾರೆ, ಕಲ್ಯಾಣಿಗೆ ಹಾಕಿದ ಪಂಪ್ ತಗೆದುಕೊಳ್ಳಬೇಕು, ಸಾವಿರ ರೂಪಾಯಿ ದಂಡಕಟ್ಟಬೇಕು. ಪಂಚಗವ್ಯ ತಗೆದುಕೊಂಡು ಪ್ರಾಯಶ್ಚಿತ ಮಾಡಿಕೊಳ್ಳಬೇಕು. ಎಂದು ತೀರ್ಮಾನಿಸುತ್ತಾರೆ.

# ದಾಟು

ಭೈರಪ್ಪನವರ ದಾಟು ಅವರ ಉಳಿದ ಕಾದಂಬರಿಗಳಿಗಿಂತ ಭಿನ್ನ ನೆಲೆಯಲ್ಲಿ ರಚನೆಗೊಂಡ ಕಾದಂಬರಿ. ಅವರೇ ಹೇಳುವ ಹಾಗೆ ಈ ಕಾದಂಬರಿಯನ್ನು ೧೯೭೦ರ ಜನವರಿ ೨ ರಂದು ಬರೆಯಲು ಪ್ರಾರಂಭಿಸಿ ಫೆಬ್ರುವರಿ ೨೭ರಂದು ಮುಗಿಸಿದ್ದಾರೆ. ತಾವು ದೆಹಲಿಯಲ್ಲಿದ್ದಾಗ ಈ ಕಾದಂಬರಿಯನ್ನು ಬರೆದು ಮುಗಿಸಿದುದಾಗಿ ಕಾದಂಬರಿಯ ಕೊನೆಯ ಪುಟದಲ್ಲಿ (ದಾಟು, ಪು.ಸಂ.೪೫೬) ಹೇಳಿಕೊಂಡಿದ್ದಾರೆ. ಅಂದರೆ ಕಾದಂಬರಿಯು ಒಟ್ಟು ಬರವಣಿಗೆಯ ಕ್ರಿಯೆಗೆ ತಗೆದುಕೊಂಡು ದಿನಗಳ ಸಂಖ್ಯೆ ೫೭ ಮಾತ್ರ ಕೇವಲ ೫೭ ದಿನಗಳಲ್ಲಿ ಇಂಥ ಒಂದು ಬೃಹತ್ ಕಾದಂಬರಿಯನ್ನು ರಚಿಸಿದುದು ಭೈರಪ್ಪನವರ ಹೆಗ್ಗಳಿಕೆಯೇ ಸರಿ. ಈ ಕಾದಂಬರಿ ಒಟ್ಟು ೪೫೩ ಪುಟಗಳನ್ನೊಳಗೊಂಡಿದೆ. ಕಾದಂಬರಿಯ 'ವಸ್ತು' ಭಾರತೀಯ ಸಮಾಜದಲ್ಲಿರುವ ಜಾತಿವ್ಯವಸ್ಥೆಯನ್ನು ಕುರಿತದ್ದಾಗಿದೆ. ಮೊದಮೊದಲು ಒಂದೊಂದು ಜನಾಂಗಗಳು ಒಂದೊಂದು ವೃತ್ತಿಯಲ್ಲಿ ತೊಡಗಿಕೊಂಡಿದ್ದು ನಂತರ ವೃತ್ತಿಗಳೇ ಜಾತಿಗಳ ಸ್ವರೂಪವನ್ನು ಪಡೆದುಕೊಂಡು. ತಾವು ಕೈಗಳ್ಳೊವ ವೃತ್ತಿಯ ಕಾರ್ಯಗೌರವವನ್ನು ಅನುಲಕ್ಷಿಸಿ ಉಚ್ಚ - ನೀಛ ಎಂಬುದರ ಭೇದ ಉಂಟಾಗಿ ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಈಡಿ ಮಾನವ ಜನಾಂಗವೇ 'ಚತುರ್ವಣದ ಚೌಕಟ್ಟಿಗೆ 'ಸಿಲುಕಿಕೊಂಡದ್ದು ಈಗ ಇತಿಹಾಸ. ಈ ಚತುರ್ವಣಗಳಲ್ಲಿ ಮೊದಮೊದಲು ಅವರವರ ಸಾಮರ್ಥ್ಯಕ್ಕನುಗುಣವಾಗಿ ಬ್ರಾಹ್ಮಣ, ಕ್ಷತ್ರೀಯನಾಗಬಹುದಿತ್ತು, ಕ್ಷತ್ರಿಯ ಬ್ರಾಹ್ಮಣನಾಗಬಹುದಿತ್ತು, ಶೂದ್ರ ಕ್ಷತ್ರಿಯನಾಗಬಹುದಿತ್ತು ಅಥವಾ ಬ್ರಾಹ್ಮಣನೂ ಕೂಡಾ ಆಗಬಹುದಿತ್ತು ಅಂದರೆ ಒಂದು ವರ್ಣದ ಜನ ಇನ್ನೊಂದು ವರ್ಣಕ್ಕೆ ತಮ್ಮ ತಮ್ಮ ಕಾರ್ಯಕೌಶಲ್ಯ ಮತ್ತು ನಿಷ್ಟತೆಯ ಆಧಾರದ ಮೇಲೆ ಸಮಾಜದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರನೆಂದು ಗುರುಸಿಲ್ಪಡತ್ತಿದ್ದ ಕಾಲವದು. ಕಾಲಗತಿಸಿದಂತೆಲ್ಲ ಈ ವ್ಯವಸ್ಥೆ ಹುಟ್ಟಿನಿಂದ ಗುರುತಿಸಲ್ಪಡಲು ಪ್ರಾರಂಭವಾಯಿತೆಂಬುದು ನಮಗೆಲ್ಲ ತಿಳಿದ ವಿಷಯವಾಗಿದೆ. ಯಾವಾಗ ಈ ವ್ಯವಸ್ಥೆ ಜನ್ಮಕ್ಕೆ ಬದ್ಧವಾಯಿತೋ ಅಂದಿನಿಂದ 'ಜಾತಿವ್ಯವಸ್ಥೆ' ತನ್ನ ಕರಾಳ ಸ್ವರೂಪವನ್ನು ಸಮಾಜದ ಮೇಲೆ ತೋರಲಾರಂಭಿಸಿತು. ಈ ಕರಾಳ ವ್ಯವಸ್ಥೆ ಸಹಜವಾಗಿಯೇ ಸ್ವಾರ್ಥಪರವಾದ ಸಂವಿಧಾನದ ಮೇಲೆಯೇ ರೂಪವನ್ನು ತಳೆದದ್ದರಿಂದ ಇಲ್ಲಿ ಪ್ರೀತಿ, ಅನುಕಂಪ. ಮಾನವೀಯತೆ ಮುಂತಾದ ಅಂಶಗಳು ತುಂಬಾ ಬಿಕ್ಕಟ್ಟಿನ ಸ್ಥಿತಿಗೆ ಸಿಲುಕಿದವು ಚತುರ್ವಣದೊಳಗೆ ಇದ್ದವರ ಸ್ಥಿತಿ ಈ ರೀತಿಯಾದರೆ, ಈ ನಾಲ್ಕು ವರ್ಣಗಳಿಗೆ ಹೊರತಾದ 'ಪಂಚಮ' ರೆಂದು ಕರೆಸಿಕೊಂಡು ಅಸ್ಪಶ್ಯತೆಯ ಶಾಪವನ್ನು ತಳೆದು ಊರಿನಲ್ಲಿದ್ದೂ ಇರಲಾರದವರಾಗಿ ಮನುಕುಲದಲ್ಲಿದ್ದು ಗುರುತಿಸುವಿಕೆಗೆ ಹೊರತಾಗಿ ಬದುಕಿದ ಜನಾಂಗದ ಬದುಕು

ತುಂಬಾ ಹೀನಾಯ ಸ್ಥಿತಿಗೆ ಇಳಿದಿದ್ದು ಭಾರತೀಯ ಸಮಾಜದಲ್ಲಿ ದಾರುಣ ಸ್ಥಿತಿಗೆ ಕಾರಣವಾಗಿ ನಿಂತುಕೊಂಡಿತು ಎಂಬ ಅಂಶಗಳನ್ನು ನಾವೆಲ್ಲ ತಿಳಿದು ಕೊಂಡದ್ದೆ ಆಗಿದೆ. ಕಾಲಗತಿಸಿದಂತೆಲ್ಲ ಸಮಾಜದಲ್ಲಿ ಈ ಜಾತಿವ್ಯವಸ್ಥೆಯ ಬೇರುಗಳು ಅಷ್ಟೇ ವ್ಯವಸ್ಥಿತವಾಗಿ ನಮ್ಮ ನೆಲದಲ್ಲಿ ಗಟ್ಟಿಯಾಗಿ ತುಂಬಾ ಆಳಕ್ಕೆ ಇಳಿದುಕೊಳುತ್ತಲೇ ಬಂದವು. ವಿದೇಶಿ ಆಕ್ರಮಣಕಾರರು ಬಂದಾಗಲೂ ಈ ವ್ಯವಸ್ಥೆ ಅಷ್ಟಾಗಿ ವಿಚಲನಗೆ ಒಳಗಾದಂತೆ ಕಂಡು ಬರುವುದಿಲ್ಲ ಭಾರತಕ್ಕೆ ಬ್ರಿಟಿಷರ ಆಗಮನವಾದಗಲೂ ಈ ವ್ಯವಸ್ಥೆ ಅಲ್ಲಾಡಿದಂತೆ ತೋರುವುದಿಲ್ಲ ಬ್ರಿಟೀಷ ಆಡಳಿತದಲ್ಲಿ ಹಲವಾರು ಮಹತ್ವದ ಬದಲಾವಣೆಗಳು ಉಂಟಾದರೂ ಜಾತಿ ವ್ಯವಸ್ಥೆ ಮತ್ತು ತನ್ನ ಮೂಲಸ್ವರೂಪವನ್ನು ಉಳಿಸಿಕೊಂಡೆ ಬಂದಿತೆಂದು ಹೇಳ ಬಹುದು. ಈ ಮಧ್ಯೆ ಭಾರತೀಯ ದಾರ್ಶನಿಕ ಪರಂಪರೆಯಲ್ಲಿ ಜಾತಿವ್ಯವಸ್ಥೆ ಯ ಅತ್ಯಂತ ಕೆಳಹಂತದಲ್ಲಿ ನಿಂತ ವ್ಯಕ್ತಿಯನ್ನು ಗಮನಿಸುವುದು ಪ್ರಾಂರಭವಾದಂತೆ , ಅವನ ಕಷ್ಟಕೋಟಲೆಗಳಿಗೆ ಸ್ಪಂದಿಸುವ ವಿಚಾರಧಾರೆ ಗಟ್ಟಿಯಾಗಿ ಬೆಳೆಯುತ್ತ ಹೊಸವಿಚಾರ ಧಾರೆಗೆ ಅದರ ಶೋಷಣೆಗೆ ಸಹಕಾರಿಯಾದಂತೆ ತೋರುತ್ತದೆ.

ಸ್ವಾತಂತ್ರ್ಯಾನಂತರದ ಭಾರತೀಯ ಸಾಮಾಜಿಕ ವ್ಯವಸ್ಥೆಯನ್ನು ಗಮನದಲ್ಲಿಟ್ಟುಕೊಂಡು ಭೈರಪ್ಪನವರು ಈ ಕಾದಂಬರಿಯಲ್ಲಿ ರಚಿಸಿದ್ದಾರೆ. 'ಜಾತಿವ್ಯವಸ್ಥೆ'ಯ ಗಾಢ ಪರಿಣಾಮಗಳನ್ನು ತಮ್ಮ ವೈಚಾರಿಕ ದೃಷ್ಟಿ ಕೋನಗಳ ಹಿನ್ನಲೆಯಲ್ಲಿ ವಿಶ್ಲೇಷಿಸಲು ಈಕಾದಂಬರಿಯಲ್ಲಿ ಅವರು ತಮ್ಮೆಲ್ಲ ಅಬಿವ್ಯಕ್ತಿ ಸಾಧ್ಯತೆಗಳನ್ನು ಬಳಸಿಕೊಂಡಿದ್ದಾರೆ. ಜಾತಿವ್ಯವಸ್ಥೆ ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ಒಂದು ಜ್ವಲಂತ ಸಮಸ್ಯೆ ಇದರ ಸುಳಿಯಲ್ಲಿ ಸಿಲುಕಿಕೊಂಡ ಜನತೆ ಏನೆಲ್ಲಾ ಕಷ್ಟ ನಷ್ಟಗಳನ್ನು ಅನುಭವಿಸಿದ್ದಾರೆ, ಅನುಭವಿಸುತ್ತಿದ್ದಾರೆ. ಮಾನವೀಯತೆಯ ಸಹಜತೆಗೆ, ಪ್ರೀತಿಗೆ ಇದು ಹೇಗೆ ಅಡ್ಡಿಯಾಗಿದೆ ಎಂಬುದರ ವಿಸ್ತೃತ ಚಿತ್ರಣವನ್ನು ನಾವು ಈ ಕಾದಂಬರಿಯಲ್ಲಿ ಕಾಣುತ್ತೇವೆ. ಇಂಥ ಸಂಕೀರ್ಣ ವ್ಯವಸ್ಥೆಯನ್ನು ಬದಲಾಯಿಸುವ ನಿರ್ಧಾರಕ್ಕೆ ತನ್ನನ್ನು ತೊಡಗಿಸಿಕೊಳ್ಳುವ ಸತ್ಯಭಾಮೆ ಈ ಕಾದಂಬರಿಯ ಕೇಂದ್ರ ಪಾತ್ರ ದಾಟು ಕಾದಂಬರಿಯ ಆಶಯ ಇವಳ ಪಾತ್ರದ ಮುಖಾಂತರವೇ ಬೇರೆ ಬೇರೆ ಸ್ತರಗಳಲ್ಲಿ ಬಿಚ್ಚಿಕೊಳ್ಳುತ್ತ ಹೋಗುತ್ತದೆ.

''ಮಂತ್ರಿಯಾಗಿರುವ ಮೇಲಗಿರಿಗೌಡರ ಮಗ ಶ್ರೀನಿವಾಸ ಮತ್ತು ತಾನು ಮದುವೆಯಾಗಲು ನಿಷ್ಕರ್ಷಿಸಿರುವದಾಗಿಯು ತಾವು ಆರ್ಶಿವಾದಿಸಬೇಕೆಂದು'' ಕೇಳುವ ಅವಳು ಈ ವ್ಯವಸ್ಥೆಯನ್ನು ನಿರ್ಧಾರ ಪೂರ್ವಕವಾಗಿ ದಾಟುವ ನಿರ್ಣಯಕ್ಕೆ ಬರುತ್ತಾಳೆ.

''ಜಾತಿಕುಲಗಳ ಬಗೆಗೆ ನನ್ನ ಅಭಿಪ್ರಾಯ ನಿಮಗೆ ಗೊತ್ತೆ ಇದೆ. ನೀವು ಮತ್ತು ಊರಿನ ಇತರರು ಇದನ್ನು ಅನೀತಿ ಎನ್ನಬಹುದು ಆದರೆ ಇದು ಅತ್ಯಂತ ನೀತಿಯುತ ನಿರ್ಣಯವೆಂದು ನನ್ನ ಶುದ್ಧ ನಂಬಿಕೆ ಎದುರು ನಿಂತು ಮದುವೆ ಮಾಡಿಕೊಡುವುದು ನಿಮಗೆ ಸಾಧ್ಯವಾಗದಿರಬಹುದು. ಆದರೆ ಅಲ್ಲಿಂದಲೇ ಆಶಿರ್ವಾದ ಕಳಿಸಿ'' - (ದಾಟು, ಪುಟ - ೨೧) ಎಂಬ ಸತ್ಯಭಾಮೆಯ ಪತ್ರದ ಸಾಲುಗಳಿಂದ ಕಾದಂಬರಿಯ ವಸ್ತುವಿಗೆ ಚಾಲನೆ ದೊರೆಯುತ್ತದೆ. ದಾಟುವ ಕ್ರಿಯಯ ಪ್ರಥಮ ಹಂತವಾಗಿಯೂ ಈ ಮಾತುಗಳನ್ನು ನಾವು ಚರ್ಚೆಗೆ ಎತ್ತಿಕೊಳ್ಳಬಹುದಾಗಿದೆ. ಸತ್ಯಭಾಮೆಯ ಅಚಲ ನಿರ್ಧಾರವನ್ನು ನಾವು ಇಲ್ಲಿ ಗುರುತಿಸಬಹುದು, ಜಾತಿ ವ್ಯವಸ್ಥೆಯನ್ನು ದಾಟುವ ಕ್ರಿಯೆ ಸತ್ಯಭಾಮೆಯೆಂತವರಿಗೆ ಅತ್ಯಂತ ನೀತಿಯುತ

ನಿರ್ಣಯವಾದರೆ ಅವಳ ತಂದೆ ವೆಂಕಟರಮಣಯ್ಯನಂಥವರಿಗೆ ಮತ್ತು ಗ್ರಾಮದ ಇತರರಿಗೆ ಅನೀತಿಯುತವಾದ ನಿರ್ಣಯ. ಸತ್ಯಭಾಮೆಯ ಬದಲಾವಣೆಯನ್ನು ಬಯಸುವ ಮೂಲಕ ಜಾತಿವ್ಯವಸ್ಥೆಯ ಭದ್ರಕೋಟೆಗೆ ಮೊಟ್ಟ ಮೊದಲ ಆಘಾತವನ್ನು ಕೊಡುತ್ತಾಳೆ. ಅವಳ ವಿಚಾರ ಇತಿಹಾಸದ ಅಧ್ಯಯನದಿಂದ ಪ್ರೇರಿತವಾಗಿದ್ದರೂ ಜಡಗೊಂಡ ವ್ಯವಸ್ಥೆಗೆ ತೀವ್ರ ಸೆಳೆತವನ್ನು ಜೀವಂತಿಕೆಯನ್ನು ತರುತ್ತದೆ. ಯಾವುದನ್ನು ಒಂದು ಪರಂಪರೆ ನೀತಿಯೆಂದು ಕರೆಯುತ್ತ ಬಂದಿದೆಯೋ ಅಂತ ವ್ಯವಸ್ಥೆಯ ಹುಳುಕುಗಳನ್ನು ಅವಳು ತೆರೆದಿಡುತ್ತಾಳೆ. ಹಾಗೆಯೇ ಯಾವುದನ್ನು ಅನೀತಿ ಎಂದು ಕರೆಯಲಾಗಿದೆಯೋ ಅದನ್ನೆ ಶುದ್ಧ ನೀತಿಯೆಂದು ಪಲ್ಲಟಗೊಳಿಸುತ್ತ ತನ್ನ ವಿಚಾರಗಳ ಗಟ್ಟಿತನವನ್ನು ಸತ್ಯಭಾಮೆ ಪ್ರತಿಷ್ಠಾಪಿಸಲು ಪ್ರಯತ್ನಿಸುತ್ತಾಳೆ. ಅವಳ ದೃಷ್ಟಿಯಲ್ಲಿ ಜಾತಿವ್ಯವಸ್ಥೆಯನ್ನು ದಾಟುವುದು ಶುದ್ಧ ನೀತಿ ಪ್ರೀತಿಗೆ ಎಂಥ ವಿಷವನ್ನಾದರೂ ಅಮೃತವನ್ನಾಗಿ ಮಾರ್ಪಡಿಸುವ ಶಕ್ತಿಯಿದೆ ಎಂಬುದನ್ನು ನೆನದಾಗ ಸತ್ಯಭಾಮೆಯ ನಿಲುವು ಮೆಚ್ಚುಗೆಗೆ ಪಾತ್ರವಾಗುತ್ತದೆ. ತಾನು ಮದುವೆಯಾಗುವ ಶ್ರೀನಿವಾಸ ತನಗಿಂತ ಕುಲದಲ್ಲಿ ಕೀಳು ಎಂಬ ವಿಚಾರ ಗ್ರಾಮದ ಜನತೆಗೆ ತಿಳಿದರೆ ಕೊಲಾಹಲವಾಗುತ್ತದೆಂಬ ವಿಚಾರವು ಅವಳಿಗೆ ತಿಳಿದಿದೆ. ಆದರೆ ಅಂಥ ಕೊಲಾಹಲ ಅಲ್ಪ ಆಯುಷ್ಯದ್ದು, ಆಮೇಲೆ ಜನ ತೆಪ್ಪಗಾಗುತ್ತಾರೆ ಎಂಬ ಸಮಾಧಾನವನ್ನು ಅವಳು ತನ್ನ ತಂದೆಗೆ ನೀಡುತ್ತಾಳೆ. ಆದರೆ ತನ್ನ ವೈದಿಕ ನಂಬಿಕೆಗಳಿಗೆ ಜೋತು ಬೀಳುವ ವೆಂಕಟರಮಣಯ್ಯ ಸತ್ಯಭಾಮೆಯ ಈ ವಿಚಾರವನ್ನು ಪುರಸ್ಕರಿಸುವುದಿಲ್ಲ. ತಾನು ನಂಬಿಕೊಂಡು ಬಂದ ನಂಬಿಕೆಗಳಿಗೆ ಆಗುವ ಆಘಾತವನ್ನು ವೆಂಕಟರಮಣಯ್ಯ ಒಪ್ಪಲು ಸಿದ್ಧನಿಲ್ಲ. ವೆಂಕಟರಮಣಯ್ಯ ಪರಂಪರೆಯನ್ನು ಪ್ರತಿನಿಧಿಸಿದರೆ ಸತ್ಯಭಾಮೆ ಆಧುನಿಕತೆಯನ್ನು ಪ್ರತಿನಿಧಿಸುತ್ತಾಳೆ. ''ಭಗವದ್ಗೀತೆಯನ್ನು ಬರೆದವನು ಮನುಷ್ಯನೇ ಹೊರತು ಭಗವಂತನೇನಲ್ಲ'' - (ದಾಟು, ಪುಟ - ೩೨) ಎನ್ನುವ ಅವಳ ವಿಚಾರ ತುಂಬಾ ಆರೋಗ್ಯಕರವಾದದು.

ವೆಂಕಟರಮಣಯ್ಯ ಸಾಮಾಜಿಕ ಬದಲಾವಣೆಗೆ ತನ್ನನ್ನು ಒಗ್ಗಿಸಿಕೊಳ್ಳುವ ಮನೋಭಾವವನ್ನು ತೋರುವುದಿಲ್ಲ, ಬೆಟ್ಟಯ್ಯನ ಜೊತೆಗೆ ಅವನು ಬೆಂಗಳೂರಿಗೆ ಬರುವ ಸಂದರ್ಭದಲ್ಲಿ ಇದನ್ನು ಗುರುತಿಸಬಹುದಾಗಿದೆ.

''ಬಸ್ಸು ನಡುನಡುವೆ ಕೈನೀಡಿದವರಿಗೆಲ್ಲ ನಿಂತು ಕುಣಿಗಲು ತಲುಪಿತು. ಇಲ್ಲಿ ಕಾಲು ಗಂಟೆಯಾದರೂ ನಿಲ್ಲುತ್ತದೆ ಪ್ರಯಾಣಿಕರೆಲ್ಲ ಇಳಿದು ಹೋಟೆಲ್ಲಿಗೆ ಹೋದರು ಬೆಟ್ಟಯ್ಯನವರು ಹೋಟೆಲ್ಲಿನೊಳಕ್ಕೆ ಹೋದದ್ದು ಕಾಣಿಸಿತು.''

''ಬೆಟ್ಟಯ್ಯ ನಮ್ಮೂರ ಹೋಟೆಲ್ಲಿಗಾದರೆ ಬರುಲ್ಲ. ಇಲ್ಲೆಲ್ಲ ಸಲೀಸಾಗಿ ಹೋಗ್ತಾನೆ. ಹೋಟೆಲ್ಲಿಗೆ ಹೊಲೆಯರು, ಮಾದಿಗರನ್ನು ಸೇರ್‍ಸೊಲ್ಲ ಅಂದ್ರೆ ಸರ್ಕಾರದೊರು ಕೇಸು ಹಾಕ್ತರಂತೆ. ದೇವಸ್ಥಾನಕ್ಕೆ ಸೇರಿಸಬೇಕು ಅಂತಾ ಕಾನೂನು ಮಾಡಿರುವಾಗ ಹೋಟೆಲ್ಲಿಗೆ ಸೇರಿಸದೇ ಬಿಡುತ್ತಾರೆಯೇ ಕಾಲ ಎಲ್ಲಿಲ್ಲಿಗೆ ಬರ್‍ತಿದೆ ?'' - (ದಾಟು, ಪು - ೩೨.೩೩) ಎಂದು ತರ್ಕಿಸುವ ಅವರ ಆಲೋಚನೆ ಸಂಪೂರ್ಣವಾಗಿ ಅಸ್ಪೃಶ್ಯತೆಯನ್ನು ಮಾನ್ಯಮಾಡುತ್ತದೆ. ಬದಲಾಗುತ್ತಿರುವ ಸಾಮಾಜಿಕ ಸ್ಥಿತಿಯನ್ನು ಕಂಡು ದಿಗಿಲುಗೊಳ್ಳುವುದನ್ನು ಕಾಣಬಹುದಾಗಿದೆ. ಗ್ರಾಮೀಣ ಪರಿಸರದಲ್ಲಿ ಗಟ್ಟಿಯಾಗಿ ಉಳಿದ ಜಾತಿವ್ಯವಸ್ಥೆ ಪಟ್ಟಣ ಪರಿಸರದಲ್ಲಿ ತನ್ನ ಮಹತ್ವವನ್ನು ಕಳೆದುಕೊಳ್ಳುತ್ತಿರುವುದನ್ನು ಅವರು ಗುರುತಿಸಿ

ಗಾಭರಿಗೊಳ್ಳುತ್ತಾರೆ. ತಾವು ನಂಬಿಕೊಂಡು ಬಂದ ವಿಚಾರಗಳನ್ನೆ 'ಧರ್ಮ'ವೆಂದು ಒಪ್ಪುವಮನೋಸ್ಥಿತಿ ಬದಲಾವಣೆಯನ್ನು ಸಹಿಸಿಕೊಳ್ಳುವ ಹಂತವನ್ನು ತಲುಪುವುದೇ ಇಲ್ಲ. ಬೆಟ್ಟಯ್ಯನವರು ಹೇಳುವ '' ನೋಡಿ ಕಾಲ ಬದಲಾಯಿಸ್ತಾ ಇದೆ '' ಎಂಬ ಮಾತು ಅವರಲ್ಲಿ ಯಾವ ಪ್ರಭಾವವನ್ನು ಬೀರುವುದಿಲ್ಲ ಇನ್ನು ಸತ್ಯಭಾಮೆಯ ಕೊಠಡಿಗೆ ಬಂದು ಅವಳನ್ನು ಎಕ್ಕಡದಲ್ಲಿ ಹೊಡೆಯುವ ದೃಶ್ಯ ತುಂಬಾ ಅನಾಗರಿಕವಾಗಿದೆ. ಜಾತಿವ್ಯವಸ್ಥೆಯ ಕಟ್ಟಿನಲ್ಲಿ ಸಿಕ್ಕುಕೊಂಡ ವೆಂಕಟರಮಣಯ್ಯನಂತವರ ಕ್ರೌರ್ಯವನ್ನು ತೋರುತ್ತದೆ. ಬೆಟ್ಟಯ್ಯನೆದುರೇ ಅವಳನ್ನು ಹೊಲೆ ಮುಂಡೆ, ಮಾದಿಗಗಿತ್ತಿ ಎಂದು ರಕ್ತಹನಿಯುವ ಹೊರಗೆ ಎಕ್ಕಡದಲ್ಲಿ ಥಾರಿಸುವ ವೆಂಕಟರಮಣಯ್ಯ ತಂದೆಯಾಗಿ ತುಂಬಾ ದುರ್ಬಲ ಮನಸ್ಸಿನ ನಾಗರಿಕ ಸಮಾಜದ ಅನಾಗರಿಕ ವ್ಯಕ್ತಿಯಾಗಿ ತೋರುತ್ತಾರೆ. ಅಷ್ಟೇ ಸಂಯಮದಿಂದ ನಡೆದು ಕೊಳ್ಳುವ ಬೆಟ್ಟಯ್ಯ ಸುಸಂಸ್ಕೃತ ವ್ಯಕ್ತಿಯಾಗಿ ಕಾಣುತ್ತಾರೆ.

ವೆಂಕಟರಮಣಯ್ಯನಿಗೆ ಗಾಂಧೀಜಿಯ ವಿಚಾರಧಾರೆಯ ಅಪ್ರಸ್ತುತವಾಗುತ್ತದೆ. ''ಹಸಿ ನೆಲಗಡಲೆ ತಿಂದ, ಆಡಿನ ಹಾಲು ಕುಡಿದು ಪಿತ್ತನೆತ್ತಿಗೇರಿ ಆ ಮುದುಕ ಅಂದದ್ದೆ ಇವರೆಲ್ಲ ಕೇಳಿದ್ದೆ'' ಎಂಬ ಮಾತಿನಲ್ಲಿ ಜಢಗೊಂಡ ಮನಸ್ಸಿನ ಜಾತಿಸಮರ್ಥನೆಯನ್ನು ಕಾಣುತ್ತೇವೆ.

ಬೆಟ್ಟಯ್ಯನಂತವರು ಗಾಂಧೀಜಿಯ ಸಂಪರ್ಕದಿಂದ ಮತ್ತು ವಿಚಾರ ಧಾರೆಯಿಂದ ಪ್ರೇರಿತರಾದವರು ತಾಳ್ಮೆ ಮತ್ತು ಅಹಿಂಸೆಯ ಪ್ರತೀಕವಾಗಿದ್ದ ಅವರು ಬದಲಾವಣೆಯನ್ನು ಬಯಸುವ ಆಧುನಿಕ ಮನೋಭಾವದ ತಲೆಮಾರನ್ನು ಪ್ರತಿನಿಧಿಸುತ್ತಾರೆ.

ದಾಟು ಕಾದಂಬರಿಯಲ್ಲಿ ಜಾತಿ ವ್ಯವಸ್ಥೆಯ ಸುದೀರ್ಘ ಇತಿಹಾಸವನ್ನು ನೆನಪಿಸುತ್ತಾ ''ತುಂಬ ದಿನದಿಂದ ಬೆಳೆದು ಬಂದ ಇಂಥ ಪದ್ಧತಿಯೆನ್ನು ಯಾರೇ ಮುರಿದರು ಕಷ್ಟವಾಗುತ್ತೆ, ಉಳಿದೋರಿಗೂ ಆಗುತ್ತೆ ಒಂದು ಸಲ ಕಷ್ಟ ಅನುಭವಿಸುಕ್ಕೆ ಯಾರೂ ತಯಾರಿಲ್ಲದಿದ್ದರೆ ರೂಢಿ ಮುರಿಯೋದು ಹ್ಯಾಗೆ ? ನೀವು ಯಾವುದನ್ನು ಧರ್ಮ ಅಂತಿರೋ ಅದೆಲ್ಲ ರೂಢಿ. ಈ ವ್ಯತ್ಯಾಸದ ಮೂಲ ತತ್ವ ಯಾವುದು ? ಜನಾಂಗವೇ, ಬಣ್ಣವೇ, ರೂಪಲಕ್ಷಣವೇ ?''

''ಹಿಂದೂಸ್ಥಾನದಲ್ಲಿರೋ ಒಂದೊಂದು ಪ್ರದೇಶದ ಜನರನ್ನು ನೋಡಿ ಜಾತಿ ವ್ಯತ್ಯಾಸ ಕಾಣೊದೇ ಇಲ್ಲ ಒಂದೇ ಚಹರೆ ಇರುತ್ತೆ.''

''ನಮ್ಮ ನಮ್ಮ ಅಂತರಂಗ ನಿಜ ನುಡಿಯುತ್ತೆ ನಮ್ಮ ನಮ್ಮ ಅನುಭವವೇ ದಿಕ್ಕು ತೋರಿಸುತ್ತೆ ಆದರೆ ರೂಢಿ ಅಂತರಂಗಾನ ಮುಚ್ಚಿ ಹಾಕುತ್ತೆ. ಅನುಭವದ ಅರ್ಥವನ್ನು ಕೈತಪ್ಪಿಸುತ್ತೆ ಧೈರ್ಯವಿದ್ದೋರು ರೂಢಿನ ಗೆಲ್ಲತಾರೆ, ಗೆದ್ದು ಬದುಕ್ತಾರೆ, ಹೇಡಿಗಳು ಮನಸ್ಸಿನ ಮೇಲೆ ಮಣ್ಣು ಮುಚ್ಚಿಕೊಂಡು ಮಣ್ಣು ಹುಳುವಿನ ಹಾಗೇ ಜೀವನ ಮಾಡುತ್ತಾರೆ. ಆದರೆ ನನ್ನ ಅಂತರಂಗ ಹೇಳಿದ ಹಾಗೆ ಮಾಡಿ ರೂಢಿಯನ್ನು ಕೆಡವಿದ ಸಂತೋಷ ಸಿಕ್ಕಿದರೆ ಸಾಕು.''

ಈ ಮೇಲಿನ ಮಾತುಗಳ ಮೂಲಕ ಸತ್ಯಭಾಮೆಗೆ ಮತ್ತು ದಾಟುವ ಕ್ರಿಯೆಗೆ ಕಾದಂಬರಿಕಾರರು ಸಶಕ್ತವಾದ ವೈಚಾರಿಕ ನೆಲೆಗಟ್ಟನ್ನು ಒದಗಿಸುತ್ತಾರೆ. ಅಣ್ಣನ ವ್ಯಾಪಾರಿ ಮನೋಭಾವ, ಅಪ್ಪನ ಸಾಂಪ್ರದಾಯಿಕ ಮನಸ್ಸುಗಳ ಜೊತೆಗೆ ಸೆಣಸುತ್ತಲೇ ಬದಲಾವಣೆಯನ್ನು ಬಯಸುವ ಸತ್ಯಭಾಮೆಗೆ ತಾನು

ನಂಬುವ ಸಾಧಿಸುವ, ತಲುಪುವ ದಡ ತುಂಬಾ ದುರ್ಬಲವಾಗಿರುವುದು ಶ್ರೀನಿವಾಸನ ಮೂಲಕ ಅನಾವರಣಗೊಳ್ಳುತ್ತದೆ. ಶ್ರೀನಿವಾಸನ ಪಾತ್ರದ ಬೆಳವಣಿಗೆ ಕಾದಂಬರಿಯ ಮೂಲ ಆಶಯಕ್ಕೆ ಸಹಜವಾದ ಬೆಳವಣಿಗೆ ಎಂದು ಅನಿಸುವುದಿಲ್ಲ.

ತಮ್ಮ ನಂಬುಗೆ ಹಾಗೂ ಆಚಾರಗಳಲ್ಲಿ ಸಾಂಗತ್ಯವಿಲ್ಲದಿದ್ದರೂ ಜಾತಿವ್ಯವಸ್ಥೆಗೆ ಅಂಟಿಕೊಳ್ಳುವ ವೆಂಕಟರಮಣಯ್ಯನಂಥವರು ಸುಖವನ್ನು ಅನುಭವಿಸಬೇಕು, ಸಂಪ್ರದಾಯವನ್ನು ಉಳಿಸಿಕೊಳ್ಳಬೇಕು ಎನ್ನುವ ಅನಾರೋಗ್ಯಕರ ಮನಸ್ಸುಳ್ಳವರಾಗಿದ್ದಾರೆ.

ಇಡೀ ಕಾದಂಬರಿಯಲ್ಲಿ ಸತ್ಯಭಾಮೆ, ಮೋಹನದಾಸ, ಮೀರಾ, ಬೆಟ್ಟಯ್ಯನಂಥ ಪಾತ್ರಗಳನ್ನು ಒಂದುಕಡೆಗಿಟ್ಟು ನೋಡುವುದು ಮತ್ತು ವೆಂಕಟರಮಣಯ್ಯ, ಶ್ರೀನಿವಾಸ, ಮೇಲುಗಿರಿಗೌಡ, ತಿರುಮಲೆಗೌಡ, ಶ್ರೀನಿವಾಸನ ತಾಯಿ ಮುಂತಾದ ಪಾತ್ರಗಳನ್ನು ಒಂದು ಕಡೆಗಿಟ್ಟು ನೋಡಿದಾಗ ಜಾತಿ ಸಮಸ್ಯೆಯ ಸಂಘರ್ಷದ ಮುಖಾಮುಖಿ ಹೋರಾಟದ ಚಿತ್ರಣ ದೊರೆಯುತ್ತದೆ. ಕಾದಂಬರಿಯಲ್ಲಿ ಬದಲಾವಣೆ ಬಯಸುವ ಪಾತ್ರಗಳಿಗೆ ಕಾದಂಬರಿಕಾರರು ನಿರಂತರವಾಗಿ ಕ್ಲಿಷ್ಟ ಸನ್ನಿವೇಶಗಳ ಅಗ್ನಿ ಪರೀಕ್ಷೆಯನ್ನು ಏರ್ಪಡಿಸುತ್ತಾರೆ. ಬ್ರಾಹ್ಮಣಿಕೆ ಮತ್ತು ಶೂದ್ರತ್ವಗಳ ಬಗ್ಗೆವೈಚಾರಿಕ ನೆಲೆಗಟ್ಟಿನಲ್ಲಿ ಕಾದಂಬರಿಯುದ್ದಕ್ಕೂ ಒಂದು ಚಿಂತನೆಯಿದೆ.

ಜಾತಿಯನ್ನೇ ಆಧಾರವಾಗಿಟ್ಟುಕೊಂಡು ಮನುಷ್ಯನ ಯೋಗ್ಯತೆಯನ್ನು ಅಳೆಯುವುದು ಯಾವು ಕಾಲಕ್ಕೂ ಮಾನ್ಯಮಾಡುಬಹುದಾದ ವಿಚಾರವಲ್ಲ. ಆದರೆ ಕಾದಂಬರಿಯಲ್ಲಿ ಜಾತಿಯನ್ನು ಉಳಿಸಿಕೊಳ್ಳುವ ಮತ್ತು ಅದನ್ನು ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಳ್ಳುವ ವಿವರಗಳು ದೊರೆಯುತ್ತವೆ. ಮೇಲಗಿರಿಗೌಡ, ವೆಂಕಟೇಶ ಜಾತಿ ವ್ಯವಸ್ಥೆಯ ಮುಂದುವರಿಕೆಯನ್ನು ಸಮರ್ಥಿಸಿಕೊಳ್ಳುತ್ತಾರೆ.

ಭಾರತೀಯ ಸಮಾಜದಲ್ಲಿಯ ಹಲವು ಮುಖಗಳನ್ನು ದಾಟು ಪರಿಚಯಿಸುತ್ತದೆ ಕಾದಂಬರಿ ಪ್ರಾರಂಭವಾಗುವುದೇ ತಿರುಮಲಾಪುರ ಗ್ರಾಮದ ಹೆಸರಿನ ಮೂಲದ ವಿಶ್ಲೇಷಣೆಯೊಂದಿಗೆ. ಸಾಮಾನ್ಯವಾಗಿ ಪ್ರತಿ ಗ್ರಾಮಕ್ಕೂ ದೇವಾಲಯವಿರುವದು ಭಾರತೀಯ ಸಮಾಜದಲ್ಲಿ ಸಹಜವಾದದ್ದು. ದೇವಾಲಯ ಸಂಸ್ಕೃತಿ ಭಾರತೀಯ ಸಂಸ್ಕೃತಿಯ ಪರಂಪರೆಯಾಗಿ ಬೆಳೆದು ಬಂದದು ಈ ದೃಷ್ಟಿಯಿಂದ ಗಮನಾರ್ಹವಾಗಿದೆ. ಗ್ರಾಮದ ಸಾಂಸ್ಕೃತಿಕ ಕೇಂದ್ರವಾಗಿ ದೇವಾಲಯಗಳು ಬೆಳೆದು ಬಂದಿವೆ, ಗ್ರಾಮದಲ್ಲಿ ಶ್ರೀನಿವಾಸ ದೇವಾಲಯವಿರುವುದರಿಂದಲೇ ಗ್ರಾಮಕ್ಕೆ ತಿರುಮಲಾಪುರವೆಂಬ ಹೆಸರು ಬಂದಿದೆ ಎಂದು ಕಾದಂಬರಿಕಾರರು ತಿಳಿಸುತ್ತಾರೆ. ಈ ತಿರುಮಲಾಪುರ ಭಾರತೀಯ ಗ್ರಾಮೀಣ ಸಂಸ್ಕೃತಿಯ ಮತ್ತು ಯಜಮಾನ ಸಂಸ್ಕೃತಿಯ ಸ್ವರೂಪವನ್ನು ತೆರೆದಿಡುತ್ತದೆ.

ಗ್ರಾಮದಲ್ಲಿ ಉನ್ನತವರ್ಗದ ಜನರು ವಾಸಿಸುತ್ತಿದ್ದ ಪ್ರದೇಶವನ್ನು ಊರು ಎಂದು ಗುರುತಿಸಿದರೆ, ಊರಿನ ಪಕ್ಕದಲ್ಲಿ ಅಥವಾ ಊರಿಗೆ ಹೊಂದಿಕೊಂಡು ಸ್ವಲ್ಪ ದೂರಕ್ಕೆ ಇರುವ ಹೊಲೆಯರು ಮತ್ತು ಮಾದಿಗರು ವಾಸಮಾಡುವ ಪ್ರದೇಶವನ್ನು 'ಕೇರಿ' ಯೆಂದು ಗುರತಿಸುವದನ್ನು ಕಾಣಬಹುದು.

'ಕೇರಿಯ' ಜನ ತಮ್ಮ ಸ್ವತಂತ್ರ ಅಸ್ತಿತ್ವಕ್ಕಾಗಿ ಬಿಡುಗಡೆಗಾಗಿ ಹಂಬಲಿಸುವ ಸಂಗತಿ ಕಾದಂಬರಿಯ ಪ್ರಥಮ ಪುಟದಲ್ಲಿಯೇ ದೊರುಕುತ್ತದೆ. ಕೇವಲ ತಿರುಮಲಾಪುರದ ಜನರಷ್ಟೇ ವಿರೋಧಿಸದೇ ಪಕ್ಕದ

ಗ್ರಾಮದ ಜನತೆಯೂ 'ಕೇರಿ' ಯ ಸ್ವಾತಂತ್ರ್ಯವನ್ನೊಪ್ಪಲು ಸಿದ್ಧರಿರಲಿಲ್ಲ ಎಂಬುದು ಅವರ ವಿರೋಧದಿಂದ ವ್ಯಕ್ತವಾಗುತ್ತದೆ' ಊರಿನ' ಜನತೆಯಲ್ಲಿರುವ 'ವರ್ಗ' ಪ್ರಜ್ಞೆ 'ಕೇರಿಯ' ಜನತೆಯಲ್ಲಿ ಕಂಡುಬರುವುದಿಲ್ಲ. 'ಕೇರಿಯ' ಜನತೆಯ ಬಯಕೆಗಳನ್ನು ಸರಕಾರವೂ ಮಾನ್ಯಮಾಡದಿರುವುದು ಅವರ ಸ್ವಾತಂತ್ರ್ಯದ ಬಯಕೆಯನ್ನು ಮೂಲದಲ್ಲಿಯೇ ಚಿವುಟಿದಂತಾಗಿದೆ. ಬಹುಶಃ ಭಾರತದ ಪ್ರತಿಗ್ರಾಮದ, ಕೇರಿಯ ಸ್ಥಿತಿಯೂ ಇದೆ ಆಗಿದೆ.

ಕಾದಂಬರಿಕಾರರು 'ಕೇರಿ' ಯ ಜನತೆ ಹೊಲೆಯ - ಮಾದಿಗ ಎಂಬ ವಿಶೇಷಣಗಳಿಂದ ಭೂಷಿತರಾದರು ಎಂಬ ವಿಚಾರ ಚಿಂತನೆ ಮಾಡುವಂತಿದೆ. ಅವಮಾನದ ಪದಗಳು ಹೇಗೆ ಭೂಷಣವಾಗುತ್ತವೆ ? ಎಂಬುದು ವಿಚಾರಮಾಡಲು ಯೇಗ್ಯವಾಗಿದೆ.

ಸ್ವಾತಂತ್ರ್ಯ ನಂತರ ಗಾಂಧೀಜಿಯ ಹರಿಜನೋದ್ಧಾರ, ಮಾನವೀಯತೆಯ ಕಳಕಳಿಯ ದ್ಯೋತಕವಾಗಿ ಈ ಹೊಲೆಯ ಮಾದಿಗ ಎಂಬ ಅವಮಾನದ ಪದಗಳನ್ನು ತೊಡೆದು ಹಾಕಲು ಮತ್ತು ಅ ಮೂಲಕ ಆ ಜನ ಸಮೂಹವನ್ನು ಮೇಲೆತ್ತಲು ಮಾಡಿದ ಪ್ರಯತ್ನವೂ ನಿರರ್ಥಕವಾಗಿರುವುದು ತಿರಯಮಲೆಗೌಡರ ಮಾತಿನ ಮೂಲಕ ವ್ಯಕ್ತವಾಗುತ್ತದೆ ಇದು ಕಟು ವಾಸ್ತವ ಕೂಡಾ ಆಗಿದೆ '' ತಿರುಮಲೇಗೌಡರು ಹೇಳಿದಂತೆ 'ಹರಿ' ಯವರಾಗಲಿಲ್ಲ'' - (ದಾಟು, ಪು-೧೪) ಎಂದರೆ ಅವರಿಗೆ ಅಂಟಿದ ಕಳಂಕ ಅದು ಹೋಗಲೇ ಇಲ್ಲ ಎಂಬುದನ್ನು ಸೂಚಿಸುತ್ತದೆ. ಇದಕ್ಕೆ ಕಾರಣಗಳೇನು ಎಂಬುದು ಅಧ್ಯಯನ ಮಾಡಲು ಯೋಗ್ಯ ವಿಷಯವೇ ಆಗಿದೆ. ಹೊಲೆಯ ಮಾದಿಗ ಜನಾಂಗಗಳು ಉತ್ತಮರಾಗಲು ಪ್ರಯತ್ನಿಸಲೇ ಇಲ್ಲವೋ ಅಥವಾ ಅವರ ಅಂಥ ಪ್ರಯತ್ನಗಳನ್ನೆಲ್ಲ ತುಂಬ ಯೋಜನಾಬದ್ಧವಾಗಿ ಹೇಗೆ ನಾಶಮಾಡಲಾಯಿತು ಎಂಬ ವಿಷಯವನ್ನು ತಿಳಿಯುವುದು ಅಗತ್ಯವಾಗಿದೆ.

ದೇವಸ್ಥಾನದ ಅರ್ಚಕರಾಗಿ ಬ್ರಾಹ್ಮಣರು ಇರುತ್ತಿದ್ದರು. ಅದೇ ರೀತಿ ತಿರಮಲಾಪುರದ ಶ್ರೀನಿವಾಸ ದೇವಸ್ಥಾನದಲ್ಲಿದ್ದ ಅರ್ಚಕರಾಗಿ ವೆಂಕಟರಮಣಯ್ಯ ಕಾರ್ಯನಿರ್ವಹಿಸುತ್ತಿದ್ದರು. ಸಾಮಾನ್ಯವಾಗಿ ಬ್ರಾಹ್ಮಣರು ಸಂಸ್ಕೃತ ಭಾಷೆಯಲ್ಲಿ ಪ್ರಾವಿಣ್ಯತೆಯನ್ನು, ಪಾಂಡಿತ್ಯವನ್ನು ಪಡೆದಿರುತ್ತಿದ್ದರು. ಅರ್ಚಕರ ಜೀವನ ಸಾಗಲು ಅವರಿಗೆ ಅರ್ಥಿಕ ಆಧಾರವಾಗಿ ' ಇನಾಂ' ಜಮೀನನ್ನು ಕೊಡುವ ಪದ್ಧತಿ ಇರುವುದು ಕಂಡು ಬರುತ್ತದೆ.

ಪುರೋಹಿತ ವರ್ಗ ವಿದ್ಯೆಯನ್ನು ಪಡೆದುಕೊಂಡು ಸಮಾಜದಲ್ಲಿ ಅತ್ಯಂತ ಗೌರವದ ಸ್ಥಾನವನ್ನು ಪಡೆದುಕೊಂಡಿರುತ್ತಿದುದ್ದು ಕಂಡುಬರುತ್ತದೆ ಮತ್ತು ಪತ್ರಿಕೆಗಳ ಕಾರ್ಯ ಅವುಗಳ ಚಲಾವಣೆ ಕೂಡ ಇವರೆ ಮಾಡುತ್ತಿದ್ದಂತೆ ತೋರುತ್ತದೆ. ಇದಕ್ಕೆ ವೆಂಕಟೇಶ ಪತ್ರಿಕೆಗಳ ಏಜೆನ್ಸಿಯನ್ನು ಪಡೆದುಕೊಂಡಿರುವುದೇ ಸಾಕ್ಷಿಯಾಗಿದೆ. ಬ್ರಾಹ್ಮಣ ಕುಟುಂಬಗಳಲ್ಲಿ ವಿದ್ಯೆಯನ್ನು ಗಂಡಿಗೆ ಹೇಗೆ ಕೊಡಿಸಲಾಗುತ್ತಿತ್ತೊ ಹೆಣ್ಣಿಗೂ ಕೂಡ ಕೊಡಿಸಲಾಗುತ್ತಿತ್ತು ಎಂಬುದು 'ಸತ್ಯಭಾಮೆ' ಯನ್ನು ಎಂ. ಎ. ವರೆಗೆ ಓದಿಸುವುದನ್ನು ನೋಡಿದಾಗ ತಿಳಿಯುತ್ತದೆ. ಬ್ರಾಹ್ಮಣ ಕುಟುಂಬದಲ್ಲಿ ಉನ್ನತ ಶಿಕ್ಷಣವನ್ನು ಪಡೆಯುವುದು ಸಾಮಾನ್ಯವಾಗಿತ್ತು ಆರ್ಥಿಕವಾಗಿ ಈ ವರ್ಗ ಅನುಕೂಲಕರವಾಗಿರುವಂತೆ ಕಾದಂಬರಿಯಲ್ಲಿ ಚಿತ್ರಸಲಾಗಿದೆ.

ಉನ್ನತ ವರ್ಗದ ಮನೆಗಳಲ್ಲಿ 'ನಾಮಕರಣ' ಸಮಾರಂಭವನ್ನು ತುಂಬಾ ಅದ್ದೂರಿಯಾಗಿಯೇ

ಮಾಡುತ್ತಿದ್ದರು. ಸಿಹಿಕಹಿ ಅಡುಗೆಯ ಸಮಾರಾಧನೆ ನಡೆಯುತ್ತಿತ್ತು. ಆದರೆ ಬ್ರಾಹ್ಮಣರ ಇಂಥ ಸಹಭೋಜನ ಪಂಕ್ತಿಯಲ್ಲಿ ಕೇವಲ ಬ್ರಾಹ್ಮಣರೆ ಭಾಗವಹಿಸುತ್ತಿದ್ದರು ಇದಕ್ಕೆ ಸಾಕ್ಷಿ ವೆಂಕಟೇಶನ ಮಗನಿಗೆ ನಾಮಕರಣ ಮಾಡುವ ಸಂದರ್ಭ.

ಅಯ್ಯಂಗಾರರು ಪುಳಿಯೋಗರೆಯನ್ನು. ಮಾಧ್ವರು ಬೇಳೆ ಹುಳಿಯನ್ನು, ಸ್ಮಾರ್ತರು ಮಜ್ಜಿಗೆ ಹುಳಿಯನ್ನು ತುಂಬಾ ರುಚಿಯಾಗಿ ಮಾಡುತ್ತಿದ್ದರು.

ರೈತಾಪಿವರ್ಗ 'ಬೂದುಗುಂಬಳ' ಬೆಳೆದು ತಾವು ತಿನ್ನದೇ ಕೇವಲ ಬ್ರಾಹ್ಮಣರಿಗೆ ಕೊಡುತ್ತಿದ್ದರೆಂಬುದು ಮತ್ತು ಇತ್ತೀಚೆಗೆ ಬೇರೆಯವರೂ ಅಂದರೆ ಶೂದ್ರರು ಬೂದುಗುಂಬಳ ತಿನ್ನಲು ಪ್ರಾರಂಭಿಸಿದ್ದಾರೆ ಎಂಬುದರ ಬಗ್ಗೆ ಹಳೆಮನೆಯ ಮುಖ್ಯಪ್ರಾಣರಾಯರು ಲೇವಡಿ ಮಾಡುತ್ತಾರೆ. ಈ ವಿಷಯವಾಗಿ ಮೆಲಗಿರಿಗೌಡ ರಾಮಾಯಣದ ಕತೆಯನ್ನು ವಿವರಿಸುತ್ತಾನೆ 'ಸುಮಂತ'ನ ಪ್ರಸ್ತಾಪದಲ್ಲಿ ಬ್ರಾಹ್ಮಣರೇ ಈ ರೀತಿ ಕಥೆಯನ್ನು ಕಟ್ಟಿ ಇಡೀ ಶೂದ್ರ ಜನಾಂಗವನ್ನೆ ವಂಚಿಸಿದರು ಎಂಬ ಹೇಳಿಕೆಯಲ್ಲಿ ಸತ್ಯವಿದೆ ಎನಿಸುತ್ತದೆ. ಈಗಲೂ ರೈತಾಪಿ ವರ್ಗ ಕೆಲವು ಕಡೆ ಬೂದಗುಂಬಳ ಕಾಯಿಯನ್ನು ತಿನ್ನಲೂ ಹಿಂದೇಟುಹಾಕುತ್ತಾರೆ, ಬ್ರಾಹ್ಮಣರು ತಿನ್ನಬಹುದಾದರೆ ಬೆಳೆದವರು ತಿನ್ನಬಾರದು ಎಂಬುವದು ಯಾವ ನ್ಯಾಯ? ಬಹುಶಃ ಇಂಥ ಸಂಗತಿಗಳು ಮೇಲ ವರ್ಗದವರು ತಮ್ಮ ಶ್ರಮ ರಹಿತ ಸುಖ ಜೀವನಕ್ಕೆ ಶೂದ್ರರನ್ನು ಹೇಗೆ ಬಲಿ ಗೊಡುತ್ತಿದ್ದರು ಎಂಬ ವಿಷಯ ತಿಳಿದು ಬರುತ್ತದೆ.

ಬ್ರಾಹ್ಮಣರು ಸಮುದಾಯಕ್ಕೆ ಗಳಿಸಿಕೊಂಡ ವಿದ್ಯೆಬಗ್ಗೆ ಅಭಿಮಾನವಿದೆ ಯಾವ ದೋಷವೂ ಇಲ್ಲದೇ ಸಂಸ್ಕೃತ ಭಾಷೆಯನ್ನು ಬಳಸುತ್ತಿದ ರೀತಿಯನ್ನು ಕಲಿಸುತ್ತಿದ್ದ ರೀತಿಯನ್ನು ಕಾದಂಬರಿಯಲ್ಲಿ ಹೇಳಲಾಗಿದೆ. ೨ (ದಾಟು, ಪು -೧೯,೨೦)

ಸ್ವರ ಉದಾತ್ತ ಅನುದತ್ತಗಳ ಸಹಿತ ವೇದ ನುಡಿಯೇ ನಾಲಿಗೆಯ ಬಿಟ್ಟರೆ ಶೂದ್ರ ಬಾಯಯಲ್ಲಿ ಹೇಗೆ ಬರುತ್ತೆ ಗರುಡ ಅನ್ನೂ ಸಂಸ್ಕೃತ ಪದ ಎರಡು ಹೈಸ್ಕೂಲಿನ ಕನ್ನಡ ಪಂಡಿತ ಕೃಷ್ಣಪ್ಪನವರು ಹೇಳುವ ಮಾತನ್ನು ಗಮನಿಸಿದಾಗ ಬ್ರಾಹ್ಮಣ ವರ್ಗ ಸ್ವಾತಂತ್ರ ನಂತರದ ಸಮಾಜದಲ್ಲಿ ವಿದ್ಯೆಯನ್ನು ಕಲಿಸಬಲ್ಲ ಗಳಿಸಬಲ್ಲ ಬಹುಪಾಲು ಅನುಕೂಲಗಳನ್ನು ಪಡೆದಿದ್ದರು. ಆದರೆ ಬದಲಾವಣೆಗೆ ಒಳಗಾದ ಸಮಾಜದಲ್ಲಿ ಶೂದ್ರ ವರ್ಗವು ಪ್ರಾದೇಶಿಕ ಭಾಷೆಗಳ ಮೂಲಕ ವಿದ್ಯೆಯನ್ನು ಪಡೆದುಕೊಂಡಿತು. ಸಮಾಜದಲ್ಲಿ ಗಣ್ಯ ಸ್ಥಾನವನ್ನು ಪಡೆದುಕೊಳ್ಳುತ್ತಾ ಸಾಗಿರುವುದು ಮಂತ್ರಿಯಾಗಿರುವ ಮೇಲಗಿರಿಗೌಡರ ಉದಾಹರಣೆಯಿಂದ ದೊರುಕುತ್ತದೆ.

'ಜಾತಿವ್ಯವಸ್ಥೆ' ತುಂಬಾ ಜಟಿಲವಾಗಿರುವದು ಸಂಕೀರ್ಣವಾಗಿಯೂ ಇರುವುದು ಕಾದಂಬರಿಯಲ್ಲಿ ನಡೆಯಬಹುದಾದ ಸಂಗತಿಗಳಿಂದ ತಿಳಿದು ಬರುತ್ತದೆ. ತಮ್ಮದೆ ಆದ ಜಾತಿಯಲ್ಲಿ ಹೆಣ್ಣು ಗಂಡುಗಳನ್ನು ತಂದುಕೊಳ್ಳುವುದು ಸಮಾಜದ ರೂಢಿಯಾಗುತ್ತ ಬಂದಿದೆ ಇದಕ್ಕೆ ಸಮಾಜದ ಒಪ್ಪಿಗೆ ಕೂಡಾ ಇತ್ತು. ಆದರೆ ಒಂದು ಜಾತಿಯಿಂದ ಇನ್ನೊಂದು ಜಾತಿಯಲ್ಲಿ ಹೆಣ್ಣು ತರುವುದಾಗಲಿ, ಕೊಡುವುದಾಗಲಿ ನಿಷೇಧವಾಗಿರುವುದು ಕಂಡು ಬರುತ್ತದೆ ಅದರಲ್ಲೂ ಮೇಲುವರ್ಗದ ಹೆಣ್ಣನ್ನು ತಂದು ಅವಳ ಕಡೆಯಿಂದ ಎಂಜಲು ತಟ್ಟೆಯನ್ನು ತೊಳಿಸುವುದು ಪಾಪಕರ ಎಂಬ ಭಾವನೆ ಇರುವುದು. ಶ್ರೀನಿವಾಸನ ತಾಯಿ ತನ್ನ

ಮಗನಿಗೆ ಸತ್ಯಭಾಮೆಯನ್ನು ತನ್ನ ಸೊಸೆಯನ್ನಾಗಿ ಸ್ವೀಕರಿಸದಿರುವದಕ್ಕೆ ಮುಖ್ಯಕಾರಣವಾಗಿದೆ. ಉನ್ನತ ಜಾತಿಯ ಹೆಣ್ಣನ್ನು ತಂದರೆ ತಮ್ಮ ಮನೆ ಉಳಿಯುವುದಿಲ್ಲ ನಾಶವಾಗುತ್ತದೆ ಎಂಬುದು ಅವಳ ವಾದವಾಗಿದೆ. ಇದಕ್ಕೆ ಮನಸ್ಮೃತಿ ಸಮಾಜದ ಮೇಲೆ ಮಾಡಿದ ಗಂಭೀರ ಪರಿಣಾಮವು ಕಾರಣವಾಗಿರಬಹುದು.

ಬ್ರಾಹ್ಮಣರನ್ನು ಕುದರೆಗೆ ಹೋಲಿಸಿ ತಮ್ಮನ್ನು ಅಂದರೆ ಶೂದ್ರ ವರ್ಗವನ್ನು ಕತ್ತೆಗೆ ಹೊಲಿಸಿಕೊಳ್ಳುವದನ್ನು ನೋಡಿದರೆ ಶೂದ್ರರಿಗೆ ತಮಗಿಂತ ಬ್ರಾಹ್ಮಣರು ಶ್ರೇಷ್ಠರೆಂಬ ನಂಬಿಗೆ ಇದ್ದಂತೆ ತೋರುತ್ತದೆ.

ಶೂದ್ರರು ಮಾಡಿದ ಆಡುಗೆಯನ್ನು ಬ್ರಾಹ್ಮಣ ವರ್ಗ ಸ್ವೀಕರಿಸದಿರುವುದಕ್ಕೆ ಕಾರಣಗಳಿರುವಂತೆ ಬ್ರಾಹ್ಮಣರು ಮಾಡಿದ ಆಡುಗೆಯನ್ನು ಪಟೇಲ ತಿರುಮಲೇಗೌಡನು ಸ್ವೀಕರಿಸುವುದಿಲ್ಲ ತಾನು ಕೂಡಾ ಬ್ರಾಹ್ಮಣರಿಗಿಂತ ಹೆಚ್ಚು ಎನ್ನುವುದು ಅವನ ಭಾವನೆ.

'ಜಾತಿವ್ಯವಸ್ಥೆ'ಯನ್ನು ಮನುಷ್ಯರೇ ಸೃಷ್ಟಿಸಿದ್ದರು ಚತುರ್ವರ್ಣವನ್ನು ಸೃಷ್ಟಿಸಿದ್ದ ಭಗವಂತನೆ ಹೊರತು ಮನುಷ್ಯನಲ್ಲ ಎಂಬ ನಂಬಿಕೆಯನ್ನು ಇಡೀ ಸಮಾಜದಲ್ಲಿ ಪ್ರಚಾರ ಪಡಿಸಿದಂತೆ ತೋರುತ್ತದೆ.

ಪಟ್ಟಣದಲ್ಲಿ ಹೊಲೆಯರು ಮಾದಿಗರು ಸಮಾಜದಲ್ಲಿ ಎಲ್ಲರಿಗಿಂತ ಬೇರೆ ತರ ಅದೂ ಗ್ರಾಮೀಣ ಸಮಾಜದಲ್ಲಿ ಅಸ್ಪೃಶ್ಯರಾಗಿ ಉಳಿದಿರುವುದು ತಿಂಡಿಯನ್ನು ಸಾಬರವನ ಕೈಯಿಂದ ಪಡೆಯುವ ವೆಂಕಟರಮಣಯ್ಯ ಬೆಟ್ಟಯ್ಯನಿಂದ ಪಡೆದರೆ ಮೈಲಿಗೆ ಎಂದು ತಿಳಿಯುತ್ತಾನೆ.

ಸ್ವಾತಂತ್ರ್ಯಾನಂತರ ಎಲ್ಲಾ ವರ್ಗಗಳಿಗೂ ವಿದ್ಯೆಯನ್ನು ಪಡೆಯುವ ಸಮಾನ ಅವಕಾಶವನ್ನು ದೊರಕಿಸಿಕೊಂಡಿದ್ದರಿಂದ ಸಮಾಜದಲ್ಲಿ ಬೆಳವಣಿಗೆಯ ಗಾಳಿ ಬೀಸುವುದು ಕಂಡುಬರುತ್ತದೆ. ಜಾತಿಯೆಂಬುದು ಮನುಷ್ಯ ನಿರ್ಮಿತ ವ್ಯವಸ್ಥೆ ಇದನ್ನು ದಾಟಿದರೆ ಯಾವು ತೊಂದರೇನೂ ಇಲ್ಲ ಎಂಬ ಮನೋಭಾವ ನಿಧನಾವಾಗಿ ಸಮಾಜದಲ್ಲಿ ಕಾಣಿಸಿಕೊಳ್ಳುತ್ತದೆ. ಆದರೂ ಪುರೋಹಿತ ವರ್ಗ ಇರುವವರೆಗೆ, ಜಾತಿ ವ್ಯವಸ್ಥೆ ನಾಶ ವಾಗುವುದಿಲ್ಲ ಎಂಬ ಸೂಚನೆಯಿದೆ.

ವೆಂಕಟೇಶ ಬದಲಾದ ಸಮಾಜದಲ್ಲಿ ' ಹೊಟಲ್' ನ್ನು ಇಟ್ಟಿರುವುದಲ್ಲದೇ ಪುರೋಹಿತ ವರ್ಗದ ಎಲ್ಲಾ ಗುಣಗಳನ್ನು ಉಳಿಸಿಕೊಂಡು ಬರುವುದರ ಪ್ರತೀಕವಾಗಿಯೇ ನಿಲ್ಲುತ್ತಾನೆ.

ತಿರುಮಲೇಗೌಡರು ಕ್ಷತ್ರಿಯ ವರ್ಗದ ಪ್ರತೀಕದಂತೆ ತೊರುತ್ತಾರೆ. ತಮ್ಮ ಜನಾಂಗದ ಬಗ್ಗೆ ಅಪಾರವಾದ ಕಾಳಜಿಯನ್ನುವ್ಯಕ್ತಪಡಿಸುತ್ತಾರೆ, ಮನುಷ್ಯನಲ್ಲಿ ಬದಲಾವಣೆಯ ಬಗ್ಗೆ ಒಪ್ಪಿಗೆ ಇದ್ದರೂ ರಾಜಕೀಯ ಲೆಕ್ಕಚಾರಕ್ಕೆ ಒಳಗಾಗಿ ಬದಲಾವಣೆಯನ್ನು ಮಧ್ಯದಲ್ಲಿಯೇ ಕೈಬಿಡುತ್ತಾರೆ. ಈ ಮೂಲಕ ಮಗ 'ಶ್ರೀನಿವಾಸ'ನ ಮದುವೆಗೆ ತಮ್ಮ ಅಧಿಕಾರವನ್ನು ಬಳಸಿ ಅಡ್ಡಿಯನ್ನು ಒಡ್ಡುತ್ತಾರೆ ಆದರೆ ಸತ್ಯಭಾಮೆ ಮೊದಲಿನಿಂದಲೂ ಪ್ರಶ್ನಿಸುವ ಮೂಲಕ ಸತ್ಯವನ್ನು ಕಂಡುಕೊಳ್ಳಲು ಹವಣಿಸುವಂತವಳು. ಚಿಕ್ಕವಳಿರುವಾಗ ಪರುಷಸೂಕ್ತವನ್ನು ಕಂಠಪಾಠ ಮಾಡಿದ ಅವಳು ತಂದೆಯನ್ನು ಅರ್ಥಕೇಳಿದಳು ಚತುರ್ವರ್ಣಗಳು ಹುಟ್ಟಿದ ಬಗೆಯನ್ನು ವೆಂಕರಾಮಯ್ಯ ಹೇಳ ತೊಡಗಿದರು.

ಬ್ರಾಹ್ಮಣೋಸ್ಯ ಮುಖ ಮಾಸಿತ್, ಬಾಹು ರಾಜನ್ಯಃ ಕೃತ
ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ

ಅಂದರೆ ಬ್ರಾಹ್ಮಣರು ಈ ಬ್ರಾಹ್ಮಣ ಬಾಯಿಂದಲೂ ಕ್ಷತ್ರಿಯರು ಬಾಹುಗಳಿಂದಲೂ, ವೈಶ್ಯರೂ ತೊಡೆಯಿಂದಲೂ, ಶೂದ್ರರು ಕಾಲುಗಳಿಂದಲೂ ಹುಟ್ಟಿದರು ಎಂಬ ಅರ್ಥವನ್ನು ಅವಳ ತಂದೆ ಹೇಳಿದ ನಂತರ ಅವಳು ಕೇಳಿದಳು ಹಾಗಾದರೆ ಸಾಬರು, ಕ್ರಿಶ್ಚಿಯನ್ನರು ಎಲ್ಲಿಂದ ಹುಟ್ಟಿದರು ? (ದಾಟು ಪು-೧೪೨)

ಈ ತರದ ಪ್ರಶ್ನೆಯಿಂದ ಸತ್ಯಳಿಗೆ ಮೊದಲಿನಿಂದಲೂ ರೂಢಿಯಿಂದ ಬಂದದ್ದನ್ನು ಮಾತ್ರ ಸತ್ಯವೆಂದು ಒಪ್ಪಲು ಅವಳು ಸಿದ್ಧಳಿರಲಿಲ್ಲ ಎಂಬುದು ತಿಳಿದು ಬರುತ್ತದೆ.

ದಾಟು ಸಮಕಾಲೀನ ಸಾಮಾಜಿಕ ವ್ಯವಸ್ಥೆಯ ಎಲ್ಲ ಸ್ವರೂಪಗಳನ್ನು ಚಿತ್ರಿಸುತ್ತದೆ. ಅಕ್ಷರ ಸಂಸ್ಕೃತಿಯಿಂದ ಜಾತಿವ್ಯವಸ್ಥೆಯನ್ನು ನಾಶಮಾಡಬೇಕೆಂಬ ಜಾಗೃತಿ ಮೂಡಿರುವುದು ಕಾದಂಬರಿಯ ಹಲವಾರು ಸನ್ನಿವೇಶಗಳಲ್ಲಿ ತೋರುತ್ತದೆ. ದಲಿತರಲ್ಲಿ ವಿಶೇಷವಾಗಿ ಜಾಗೃತಿ ಮೂಡಿದೆ ಎಂಬುದನ್ನು ಮೋಹನದಾಸನಂಥವರ ಹೋರಾಟದಿಂದ ತಿಳಿಯಬಹುದು. ದೇವಾಲಯ ಪ್ರವೇಶಕ್ಕಾಗಿ ಅವನು ಪ್ರಯತ್ನಿಸುವುದು ಸಮಾನತೆಗಾಗಿ ಮಾಡುವ ಹೋರಾಟವಾಗಿದೆ. ಆದರೆ ಸಮಾಜದ ಬಹುವರ್ಗದ ಜನರ ಮನಸ್ಸು ಸಂಪೂರ್ಣವಾಗಿ ಬದಲಾಗದೇ ಇರುವುದು ದಲಿತರ ದೇವಾಲಯ ಪ್ರವೇಶದ ನಂತರ ತಿಳಿಯುತ್ತದೆ. ಮೊದಲ ಬಾರಿ ರಾಜಕೀಯ ಕಾರಣಕ್ಕಾಗಿ ದೇವಾಲಯ ಪ್ರವೇಶವನ್ನು ಮೇಲಗಿರಿಗೌಡ ಏರ್ಪಡಿಸಿದರೂ, ಪ್ರವೇಶದ ನಂತರ ಇಡೀ ದೇವಾಲಯವನ್ನು ಶುದ್ಧಿ ಗೊಳಿಸುವುದು ಹಿಂದೂ ಧರ್ಮದಲ್ಲಿರುವ ಜನರ ಭಾವನೆಗಳನ್ನು ವಕ್ಯ ಪಡಿಸುತ್ತದೆ. ಸಮಾಜ ಅಸ್ಪೃತೆಯನ್ನು ಆಚರಿಸುವ ಮನೋಭಾವವನ್ನು ಉಳಿಸಿಕೊಳ್ಳುವ ಪ್ರತೀಕವಾಗಿ ಈ ಶುದ್ಧಗೊಳಿಸುವ ಕ್ರಿಯೆ ನಡೆಯುತ್ತದೆ.

ಬಲಗೈ ಎಡಗೈ ಎಂದು ಭೇದ ತೋರುವ ದಲಿತರು ಒಂದು ಕಡೆ ಇದ್ದರೆ, ಸಮಾನತೆ ಎಂದು ಹೋರಾಡುವ ಮೋಹನದಾಸ ಇನ್ನೊಂದು ಕಡೆ, ಸತ್ಯಳೂ ಅವನಸ ಈ ಹೋರಾಟಕ್ಕೆ ಬೆಂಬಲವಾಗಿ ನಿಲ್ಲುತ್ತಾಳೆ.

ರಾಜಕೀಯ ಕಾರಣಕ್ಕಾಗಿಯೇ ಬ್ರಾಹ್ಮಣ ಹೆಣ್ಣನ್ನು ತೆಗೆದುಕೊಳ್ಳಲು ಒಪ್ಪದ ಮೇಲಗಿರಿಗೌಡ, ಧಾರ್ಮಿಕ, ಸಾಮಾಜಿಕ ಕಾರಣಕ್ಕಾಗಿ ಅವಳನ್ನು ಸೊಸೆ ಎಂದು ಸ್ವೀಕರಿಸದ ಶ್ರೀನಿವಾಸನ ತಾಯಿ ಈ ಜಾತಿವ್ಯವಸ್ಥೆಯನ್ನು ನಾಶಮಾಡುವಲ್ಲಿ ಅಡ್ಡಿಯಾಗುತ್ತಾರೆ.

ಮಾತಂಗಿಯ ಜೊತೆ ಮಲಗುವ ಅರ್ಚಕ ವೆಂಕಟರಮಣಯ್ಯ, ಮೀರಾಳನ್ನು ಉಪಯೋಗಿಸಿಕೊಳ್ಳುವ ಶ್ರೀನಿವಾಸ ಮೇಲ್ವರ್ಗದವರು ದಲಿತರನ್ನು ಲೈಂಗಿಕವಾಗಿ ಹೇಗೆ ಶೋಷಣೆ ಮಾಡುತ್ತಿದ್ದಾರೆ ಎಂಬುದಕ್ಕೆ ಸಾಕ್ಷಿಯಾಗಿದ್ದಾರೆ.

ಬ್ರಾಹ್ಮಣರು ಹರಿಜನರನ್ನು ಅಸ್ಪೃಶ್ಯರೆಂದು ಭಾವಿಸಿದರೆ, ದಲಿತರು ಬ್ರಾಹ್ಮಣರು ತಮ್ಮ ಕೇರಿಯಲ್ಲಿ ಬಂದರೆ ಲಕ್ಷ್ಮಿ ಹೊರಟು ಹೋಗುತ್ತಾಳೆ ಎಂದು ಸಗಣಿ ಎಸೆಯುವ ಪದ್ಧತಿ ಇರುವುದನ್ನು ಕಾದಂಬರಿಯಲ್ಲಿ ಗುರುತಿಸ ಬಹುದಾಗಿದೆ. ಅರ್ಚಕ ವೆಂಕಟರಮಣಯ್ಯ ಮಾತಂಗಿಯನ್ನು ಹುಡುಕಿಕೊಂಡು ಬಂದ ಸಂದರ್ಭದಲ್ಲಿ ಆತನಿಗೆ ಸಗಣಿಯಿಂದ ಹೊಡೆಯುತ್ತಾನೆ.

# ನಾಯಿ ನೆರಳು

'ನಾಯಿ ನೆರಳು' ಪುನರ್ಜನ್ಮದ ಕಥೆಯನ್ನು ಹೊಂದಿದ ಕಾದಂಬರಿ, ನಮ್ಮ ಪೂರ್ವಿಕರನ್ನು ಬಹುವಾಗಿ ಕಾಡಿದ ಸಮಸ್ಯೆ 'ಸತ್ತ ನಂತರ ಏನಾಗುತ್ತದೆ' ಎಂಬುದು. ಮರಣ ಬದುಕಿನ ಅಂತ್ಯವಾದರೆ ಜನನ ಬದುಕಿನ ಪ್ರಾರಂಭವೆಂಬ ತಿಳವಳಿಕೆ ನಮಗಿದ್ದರೂ ಸಹಿತ ಸಾವಿನ ನಂತರ ಏನು ಎನ್ನುವ ಗಹನವಾದ ಪ್ರಶ್ನೆ ನಮ್ಮ ಮುಂದೆ ನಿಲ್ಲುತ್ತದೆ.

ಪ್ರಪಂಚದ ಬಹುಪಾಲು ಧರ್ಮಗಳು ಪುನರ್ಜನ್ಮವನ್ನು ಒಪ್ಪಿಕೊಂಡಿವೆ ಜನ್ಮದಿಂದ ಜನ್ಮಕ್ಕೆ ಅವನು ಮಾಡಿದ ಪುಣ್ಯ ಪಾಪಗಳ ಲೆಖ್ಖದಲ್ಲಿ ಕರ್ಮದ ಸ್ಥಿತಿಗನುಗುಣವಾಗಿ ಬೇರೆ ಬೇರೆ ಜನ್ಮಗಳು ಪಡೆಯುತ್ತಾ ಸಾಗುತ್ತಾನೆ ಎನ್ನುವ ನಂಬಿಕೆಯನ್ನು ಈ ಕಾದಂಬರಿ ಸಮರ್ಥಿಸುತ್ತದೆ ವಿಜ್ಞಾನ ಪ್ರತಿಪಾದಿತ ಸತ್ಯ ಇದು ಅಲ್ಲದೇ ಆಗಿದ್ದರೂ, ವಿಜ್ಞಾನದಲ್ಲಿ ಕೂಡಾ ಮನುಷ್ಯನ ಸಾವಿನಾಚೆ ಇರುವ 'ಗೂಢತೆ' ಯಾವುದು ಎಂಬುದಕ್ಕೆ ಉತ್ತರ ಇಲ್ಲ. ಆದ್ದರಿಂದ ಕಲ್ಪನೆಯ ಮತ್ತು ಧಾರ್ಮಿಕ ವಿಚಾರಗಳ ಆಧಾರದ ಮೇಲೆ ಪುನರ್ಜನ್ಮದ ನಂಬಿಕೆ ಒಂದೂ ಸ್ವರೂಪವನ್ನು ಪಡೆದುಕೊಳ್ಳುತ್ತದೆ. ಬದುಕಿನಲ್ಲಿ ಅವನು ಚೆನ್ನಾಗಿ ಬದುಕಬೇಕು ಆದಷ್ಟು ಪಾಪಕಾರ್ಯಗಳಿಂದ ದೂರವಿರಬೇಕು ಈ ಶರೀರ ಪರೋಪಕಾರಿಯಾದ ಕಾರ್ಯಗಳಿಗಾಗಿಯೇ ಜನ್ಮ ತಳೆದದ್ದು ಎನ್ನುವ ಆಶಯದಿಂದ 'ಕರ್ಮ ಸಿದ್ಧಾಂತ' ಗಳ ವಿಚಾರಗಳು ಮೂಢಿ ಬಂದಿರಬೇಕು. ಆದರೆ ಇಲ್ಲಿ ಕೂಡಾ ಅಪಾಯಗಳಿವೆ. ಒಂದು ಜನ್ಮದಲ್ಲಿ ಅವನು ಬಡವನಾಗಿದ್ದರೆ, ಕೀಳು ಜಾತಿಯಲ್ಲಿ ಜನಿಸಿದ್ದರೆ ಅಥವಾ ಯಾವುದಾದರೂ ರೋಗ ಅವನನ್ನು ಭಾದಿಸುತ್ತಿದ್ದರೆ ಇದು ಕೂಡಾ ಪೂರ್ವಜನ್ಮದ ಕರ್ಮದ ಫಲವೇ ಎಂದು ತಿಳಿದುಕೊಂಡು ಬಿಟ್ಟರೆ ಇದ್ದ ಸ್ಥಿತಿಯನ್ನು ಬದಲಾಯಿಸದೇ ಒಪ್ಪಿತ ವ್ಯವಸ್ಥೆಯನ್ನೇ ಮುಂದುವರೆಸಿಕೊಂಡು ಹೋಗುವ ಅಪಾಯ ಎದುರಾಗುತ್ತದೆ. ಈ ಕಾರಣದಿಂದ ಆಧುನಿಕರು ಈ ಕರ್ಮ ಸಿದ್ಧಾಂತವನ್ನೇ ತಿರಸ್ಕರಿಸುತ್ತಾರೆ ಸಾಮಾಜಿಕ ಬದಲಾವಣೆಗೆ ಅವಕಾಶವನ್ನೆ ನೀಡದಿರುವ ಮನೋಸ್ಥಿತಿ ಇದರಿಂದ ಉಂಟಾಗಬಹುದು ಅಥವಾ 'ಪೂರ್ವಜನ್ಮ' ವನ್ನು ಒಪ್ಪಿಕೊಂಡಾಗ 'ಕ್ಷೇತ್ರಪಾಲ'ನ ಬದುಕಿನಲ್ಲಿ ಎದುರಾದ ಸಮಸ್ಯೆಗಳು ಎದುರಾಗಬಹುದು.

ಮೊದಲನೆಯ ಜನ್ಮದಲ್ಲಿ ವಿಶ್ವೇಶ್ವರನೆಂದೂ ಎರಡನೇ ಜನ್ಮದಲ್ಲಿ ಕ್ಷೇತ್ರಪಾಲನೆಂದೂ ಕರೆಸಿಕೊಂಡ ವ್ಯಕ್ತಿಯ ಕಥೆ ಇಲ್ಲಿ ಹಲವು ಸಂಗತಿಗಳೊಂದಿಗೆ ರೂಪ ಪಡೆಯುತ್ತಾ ಸಾಗುತ್ತದೆ.

ಆಧುನಿಕ ಸಮಾಜದಲ್ಲಿ 'ವಿಜ್ಞಾನ'ಕ್ಕೆ ಮಹತ್ವದ ಸ್ಥಾನವಿದೆ. ವೈಜ್ಞಾನಿಕ ಸಂಶೋಧನೆಗಳು ನಮ್ಮ ಬದುಕಿನಲ್ಲಿ ವ್ಯಾಪಕ ಬದಲಾವಣೆಗಳನ್ನು ತಂದಿವೆ. ಭೋಗ ಸಂಸ್ಕೃತಿ ದಿನದಿಂದ ದಿನಕ್ಕೆ ಮೌಲ್ಯಗಳನ್ನು

ತಿರಸ್ಕರಿಸಿ ಬೆಳೆದು ತನ್ನದೇ ಆದ ಸಮಸ್ಯೆಗಳನ್ನು ಆಹ್ವಾನಿಸುತ್ತಿದೆ ಇಂಥ ಸಂದರ್ಭದಲ್ಲಿ ವಿಶ್ವದ ಅನೇಕ ಭಾಷೆಗಳಲ್ಲಿ ಸಾಹಿತ್ಯ ಸೃಷ್ಟಿಯು ವಿವಿಧ ಪ್ರಯೋಗಗಳನ್ನು ಅನುಸರಿಸಿಕೊಂಡು ಬೆಳೆಯುತ್ತಿದೆ. ಈ ಯುಗದಲ್ಲಿ ವೈಚಾರಿಕ ಬರಹವೂ ತನ್ನದೇ ಆದ ಸ್ಥಾನ ಪಡೆದುಕೊಂಡಿದೆ. ಭಾವನೆ ಮತ್ತು ಬೌದ್ಧಿಕ ಸಾಹಚರ್ಯದ ಫಲವಾದ ಬರವಣಿಗೆ 'ಸತ್ಯ'ದ ನಿರಂತರ ಶೋಧನೆ ಕೈಗೊಳ್ಳುತ್ತದೆ. ಒಪ್ಪಿತವಲ್ಲದ ವಿಷಯಗಳು ಸದಾ ಪ್ರಶ್ನೆಗಳನ್ನು ಎದುರಿಸುತ್ತಲೇ ಇರುತ್ತವೆ. ಒಂದು ಸಮಾಜ ನಿರಂತರವಾಗಿ ನಂಬಿಕೊಂಡು ಬಂದ ಸತ್ಯಗಳು ಬದಲಾದ ಸಾಮಾಜಿಕ ಸಂದರ್ಭದಲ್ಲಿ ತೀವ್ರವಾದ ಚರ್ಚೆಗೆ ಒಳಗಾಗುವ ಸಂದರ್ಭಗಳು ಇವೆ.

ಹಿಂದೂ ಧರ್ಮದ ತತ್ವಜ್ಞಾನ 'ಆತ್ಮ'ದ ಬಗ್ಗೆ ಅದರ ಅಸ್ತಿತ್ವದ ಬಗ್ಗೆ ಒಂದು ಸ್ವರೂಪವನ್ನು ಕಟ್ಟಿಕೊಡುತ್ತದೆ. ಸಾಕಾರ ಶರೀರ ನಾಶವಾದರೂ ನಿರಾಕಾರವಾದ 'ಆತ್ಮ' ನಾಶವಾಗುವುದಿಲ್ಲ ಅದು ಬೇರೆ ಶರೀರಗಳಲ್ಲಿ ಮತ್ತೆ ಆಶ್ರಯ ಪಡೆಯುತ್ತದೆ. ಅಂದರೆ 'ಆತ್ಮ' ಪುನರ್ಜನ್ಮವನ್ನು ತಾಳುತ್ತದೆ ಎಂಬ ನಂಬಿಗೆ ಇದೆ.

ಆದರೆ ಆಧುನಿಕ ವಿಚಾರ ಈ ಆತ್ಮದ ಇರುವಿಕೆಯನ್ನೇ ಅಲ್ಲಗಳೆಯುತ್ತದೆ. ಶರೀರ ಬಿಟ್ಟು ಆತ್ಮವಿಲ್ಲ ಮರಣ ಬಿಟ್ಟು ಮೋಕ್ಷವಿಲ್ಲ ''ಸತ್ತ ಬಳಿಕ, ಸ್ವರ್ಗ, ನರಕ, ಮೋಕ್ಷ, ಪುನರ್ಜನ್ಮ ಇವೆಲ್ಲವುಗಳು ಶಾಸ್ತ್ರ ಜಾಲ! ಪುರಾಣದ ಬದನೆಕಾಯಿ.'' ಎಂದು ಕುಮಾರ ಕಕ್ಕಯ್ಯ ಪೋಳ ತಿರಸ್ಕರಿಸುತ್ತಾರೆ.

ಇಂದಿಗೂ ಮರಣಾನಂತರ ಏನು ? ಎಂಬ ಪ್ರಶ್ನೆಗಳಿಗೆ ಖಚಿತವಾದ ಉತ್ತರವಿಲ್ಲ ಇಂಥದೊಂದು ಉತ್ತರವನ್ನು ಕಂಡುಕೊಳ್ಳುವ ಪ್ರಯತ್ನವೇ 'ಪುನರ್ಜನ್ಮ'ದ ಕಲ್ಪನೆ ಇರಬಹುದು. ಈ ಕಲ್ಪನೆ, ನಂಬುಗೆ ಕೆಲವರಿಗೆ ತೊಂದರೆಯನ್ನು ಉಂಟು ಮಾಡಿರುವ ಸಾಧ್ಯತೆಗಳೂ ಇವೆ 'ಪುನರ್ಜನ್ಮ'ವನ್ನು ಮೂಢನಂಬಿಕೆ ಎಂದೂ ತಿಳಿಯಲಾಗುತ್ತಿದೆ ಆದರೆ ಹಿಂದೂ ಧರ್ಮ, ಶಾಸ್ತ್ರಗಳಲ್ಲಿ ಆತ್ಮಗಳ ಕುರಿತು ಸಮರ್ಥನೆ ಮಾಡುವ ವಿಚಾರಗಳು ಇವೆ. ಇಂಥ ವಿಚಾರಗಳ ನಂಬುಗೆಯನ್ನು ಪೋಷಿಸುವ ರೀತಿಯಲ್ಲಿ 'ನಾಯಿನೆರಳು' ರಚನೆಗೊಂಡಿದೆ. ಬದುಕಿನಾಚೆಗೆ ಏನಿದೆ ? ಎಂಬುದನ್ನು ತಿಳಿಯುವ ಕಾರಣ ಇಂಥ ಕಲ್ಪನೆಗಳು, ನಂಬುಗೆಗಳು ಸಮಾಜದಲ್ಲಿ ಸ್ಥಾನ ಪಡೆದುಕೊಳ್ಳುತ್ತವೆ. ಇಂದ್ರಿಯಾನುಭವಗಳಿಗೆ ಹೊರತಾದ 'ಸತ್ಯ'ದ ಕಡೆಗೆ ಕೈಚಾಚುವ ಪ್ರಯತ್ನವೂ ಇದಾಗಿದೆ.

ಕರಿಗೆರೆಯ ಪಟೇಲ ತೋಪೇಗೌಡರ ಶ್ರಾದ್ಧದಲ್ಲಿ ತಿರುಮಲ ಜೋಯ್ಸ ಕಬ್ಬಿಣದ ಬಾಂಡಲೆಯ ತುಂಬಾ ಎಳ್ಳೆಣ್ಣೆಯನ್ನು ಒಂದು ದಪ್ಪ ಬೂದು ಗುಂಬಳಕಾಯಿಯನ್ನು ದಾನವಾಗಿ ಪಡೆಯುತ್ತಾನೆ. ಇದಾದ ಎರಡು ತಿಂಗಳಿಗೆ ಜೋಯ್ಸರ ಹೆಂಡತಿ ಲಕ್ಷ್ಮಿದೇವಮ್ಮ ಗರ್ಭವತಿಯಾಗುತ್ತಾರೆ. ಈ ಮಗುವನ್ನು ಹೆರುವಾಗಲೇ ಪ್ರಾಣಬಿಡುತ್ತಾರೆ. ಆದರೆ ಮಗು ಮಾತ್ರ ಬದುಕಿ ಉಳಿಯುತ್ತದೆ. ಈ ಮಗುವಿನ ಹೆಸರೇ ಕ್ಷೇತ್ರಪಾಲ, ಕ್ಷೇತ್ರಪಾಲನಿಗೆ ಮಾತು ಬಂದಾಗಿನಿಂದ 'ನನಗೆ ಮದುವೆಯಾಗಿದೆ ಹೆಂಡತಿ ಹೆಸ್ರು ವೆಂಕಮ್ಮ ಒಂದು ಗಂಡು ಮಗೂನೂ ಇದೆ.' ಎನ್ನುತ್ತಿರುತ್ತದೆ ಈ ವಿಚಿತ್ರ ಸುದ್ದಿ ಬೇರೆ ಹಳ್ಳಿಗಳಿಗೂ ಹಬ್ಬುತ್ತದೆ. ಆಗ ಕ್ಷೇತ್ರಪಾಲನಿಗೆ ಹದಿನೆಂಟು ವರ್ಷವಯಸ್ಸು ಜೋಗಿನಹಳ್ಳಿಯ ಅಚ್ಚಣ್ಣಯ್ಯನವರಿಗೂ ಈ ವಿಷಯ ತಿಳಿಯುತ್ತದೆ. ಅವರ ಮಗ ವಿಶ್ವೇಶ್ವರ ಸುಮಾರು ಹತ್ತೊಂಬತ್ತು ವರ್ಷಗಳ ಹಿಂದೆ ಪ್ರಯಾಗದಲ್ಲಿ ಅಸು

ನೀಗಿರುತ್ತಾನೆ. ಕ್ಷೇತ್ರಪಾಲನ ಸುದ್ದಿ ತಿಳಿದು ಅಚ್ಚಣ್ಣಯ್ಯನವರು ಕ್ಷೇತ್ರಪಾಲನ ಊರಿಗೆ ಬಂದು ಪರೀಕ್ಷಿಸಿದಾಗ ತಮ್ಮ ಮಗ ವಿಶ್ವೇಶ್ವರನೆ ಕ್ಷೇತ್ರಪಾಲನಾಗಿ ಹುಟ್ಟಿದ್ದಾನೆ ಎಂದು ನಂಬುತ್ತಾರೆ. ತಮ್ಮ ಜೊತೆಗೆ ಜೋಗಿಹಳ್ಳಿಗೆ ಕರೆದುಕೊಂಡು ಬರುತ್ತಾರೆ. ಜೋಗಿನಹಳ್ಳಿಯ ಜನ ಕೂಡಾ ಇದನ್ನು ನಂಬುತ್ತಾರೆ.

ವೆಂಕಮ್ಮ ಈಗ ವಿಧವೆಯಲ್ಲ ಎಂದು 'ತಾಯಿ' ಕೆಂಪಮ್ಮನ ಹೇಳಿಕೆಯ ಆಧಾರದ ಮೇಲೆ ಕ್ಷೇತ್ರಪಾಲ ವೆಂಕಮ್ಮನ ಜೊತೆ ಸಂಸಾರವನ್ನು ಮಾಡುತ್ತಾನೆ ಆದರೆ ಈ ನಂಬಿಕೆಗೆ ತೀವ್ರ ವಿರೋಧವನ್ನು ತೋರುವ ವ್ಯಕ್ತಿ ಅಚ್ಯುತ. ಅವನು ವಿಜ್ಞಾನದ ವಿದ್ಯಾರ್ಥಿ. ಆಧುನಿಕ ಮನಸ್ಸುಳ್ಳ ಅಚ್ಯುತನಿಗೆ ತನ್ನ ತಾಯಿ ಈ ಅಪರಿಚಿತ ವ್ಯಕ್ತಿಯೊಡನೆ ಸಂಸಾರ ಮಾಡುವುದು ಹೇಯವೆನಿಸುತ್ತದೆ. ಕೊನೆಗೆ ಅಚ್ಯುತ ತನ್ನ ಅಜ್ಜನಿಗೆ ತಿಳಿಯದಂತೆ ಕ್ಷೇತ್ರಪಾಲನನ್ನು ಆಸ್ತಿಯನ್ನು ಅಪಹರಿಸಲು ಬಂದವನೆಂದು ಆರೋಪಿಸಿ ಜೈಲಿಗೆ ಕಳುಹಿಸುತ್ತಾನೆ. ತನ್ನ ಗ್ರಾಮದವರೆಲ್ಲರೂ ವೆಂಕಮ್ಮನ ಕ್ಷೇತ್ರಪಾಲನ ಪುನರ್ ದಾಂಪತ್ಯವನ್ನು ಒಪ್ಪಿದರೂ ಸ್ವತಃ ಮಗನಾಗಿ ಆಚ್ಯುತ ಈ ಸಂಬಂಧವನ್ನು ಒಪ್ಪುವುದಿಲ್ಲ, ಇದೊಂದು ಅಪವಿತ್ರ ಸಂಬಂಧವೆಂದೇ ತಿರಸ್ಕರಿಸುತ್ತಾನೆ.

'ಪುನರ್ಜನ್ಮ'ವನ್ನು ಪುಷ್ಟೀಕರಿಸುವಂತೆ ರಚನೆಗೊಂಡ ಈ ಕಾದಂಬರಿ ಓದುಗನಲ್ಲಿ ಹಲವು ಸಂಶಯಗಳಿಗೆ ಎಡೆಮಾಡಿಕೊಡುತ್ತದೆ. ಸಮಾಜವೂ ಕೂಡ 'ಪುನರ್ಜನ್ಮ'ದ ಕಥೆಗಳನ್ನು ಕಥೆಯಾಗಿ ಸ್ವೀಕರಿಸುಬಹುದೇ ಹೊರತು ನಿಜವಾದ ಸಂದರ್ಭಗಳಲ್ಲಿ ಈ ಸ್ಥಿತಿಯನ್ನು 'ಹುಚ್ಚು' ಎಂದೇ ಪರಿಗ್ರಹಿಸುತ್ತಾರೆ. ಇಲ್ಲವೇ ಇದೊಂದು ದೆವ್ವದ ಕಾಟವೆಂದೂ ತಿಳಿಯುತ್ತಾರೆ.

ಮಲೆಯಾಳಕ್ಕೆ ಹೋಗಿ ಮಾಟಮದ್ದುಗಳನ್ನು ಕಲಿತು ಬಂದ ಕೆರೇಹಳ್ಳಿ ಭಾಸ್ಕರಾಚಾರಿ ಕೋಳಿಕೊಯ್ದು ಮಧ್ಯರಾತ್ರಿಯಲ್ಲಿ ಕ್ಷೇತ್ರಪಾಲನಿಗೆ ದೆವ್ವ ಹಿಡಿದಿದೆ ಎಂದು ಭಾವಿಸಿ ದೆವ್ವ ಬಿಡಿಸುವ ಕಾರ್ಯಕ್ಕೆ ಮುಂದಾಗುತ್ತಾನೆ. ಮುಂಗಾಲಿನ ಮೇಲೆ ಬರೆಗಳನ್ನು ಹಾಕುತ್ತಾನೆ. ಆದರೆ ಕ್ಷೇತ್ರಪಾಲಮಾತ್ರ ಇದರಿಂದ ತೀವ್ರವಾದ ನೋವನ್ನು ಅನುಭವಿಸುತ್ತಾನೆ.

ಪೂರ್ವಜನ್ಮದ ವಿವರಗಳನ್ನು ಅಚ್ಚಣ್ಣಯ್ಯನವರಿಗೆ ನಂಬಿಕೆಯಾಗುವಂತೆ ಸ್ಪಷ್ಟವಾಗಿಯೇ ಹೇಳುವ ಕ್ಷೇತ್ರಪಾಲ ತಾನು ವೆಂಕಮ್ಮನ ಗಂಡ ಮತ್ತು ಹಿಂದಿನ ಜನ್ಮದಲ್ಲಿ ನಿಮ್ಮ ಮಗ ವಿಶ್ವೇಶ್ವರನೇ ಆಗಿದ್ದೆ ಎಂದು ನಂಬುವ ವಿವರಗಳನ್ನು ಕೊಡುತ್ತಾನೆ. ಈ ವಿಶ್ವೇಶ್ವರ ನೀರಿಗೆ ಬಿದ್ದು ಸಾಯುವಾಗ ಒಂದು ಮಗುನೂ ಇತ್ತು ಅವನಿದ್ದಾಗ ಇನ್ನೂ ನಾಮಕರಣ ವಾಗಿರಲಿಲ್ಲ ಎನ್ನುವ ಸಂಗತಿಗಳನ್ನು ತಿಳಿದುಕೊಂಡು ಅಚ್ಚಣ್ಣಯ್ಯನವರು ಸಂಶಯ ಪಡದೇ ಕ್ಷೇತ್ರಪಾಲನೇ ತಮ್ಮ ಮಗನೆಂದು ನಿರ್ಧರಿಸುತ್ತಾರೆ. ಅವನು ಉಪ್ಪಾರ ಪಾಪಯ್ಯನನ್ನು ಗುರುತಿಸುವುದು ಈ ನಂಬಿಕೆಗೆ ಮತ್ತಷ್ಟು ಪುಷ್ಟಿಯನ್ನು ತರುತ್ತದೆ. ಕಾದಂಬರಿಕಾರರು 'ಪುನರ್ಜನ್ಮದ' ಬಗ್ಗೆ ಒದುಗನಲ್ಲಿ ಗಟ್ಟಿಯಾದ ನಂಬಿಕೆ ಬೆಳೆಯುವಂತೆ ಸನ್ನಿವೇಶಗಳನ್ನು ಸೃಷ್ಟಿಸುತ್ತಾರೆ. ಅಂಥ ಸನ್ನಿವೇಶಗಳಲ್ಲಿ :

ಉಪ್ಪಾರ ಪಾಪಯ್ಯ ಮತ್ತು ಕ್ಷೇತ್ರಪಾಲನ ಮಧ್ಯೆ ನಡೆಯುವ ಸಂಭಾಷಣೆ ದೃಶ್ಯ ಮಹತ್ವದ್ದು
'ನಿಮ್ಮನೆ ಆಳು ಹೊಲೇರ ಕರಿಯನ ಮದುವೆ ಹೆಂಗಾಯ್ತು ಗೊತ್ತಾ ?'

'ಗೊತ್ತಿಲ್ಲದೆ ಏನು ಅವನು ಚಿಕ್ಕಿ ಇಬ್ಬರೂ ದನ ಕಾಯುವ ಕಬ್ಬಿನ ಗದ್ದೇಲಿ ಒಂದಾಗಿದ್ರು, ಚಿಕ್ಕಿ ಬಸುರಿಯಾದಾಗ ತನ್ನ ಮರ್ಯಾದೆ ಹೋಯ್ತು ಅಂತ ಚಿಕ್ಕಿ ಅಪ್ಪ ಕರಿಯನ್ನ ಹೊಡೆದು ಸಾಯ್‌ಸೋಕೆ ಹೋಗಿದ್ದ ನಮ್ಮ ಅಪ್ಪಾ ಅವರೇ ಮಧ್ಯಸ್ಥಿಕೆ ವಹಿಸಿ, ನಾಯಿ ಮುಟ್ಟಿದ ಮಡಿಕೆ ನಾಯಿಗೇ ಕಟ್ಟು ಅಂತ ನ್ಯಾಯ ಹೇಳಿ ಕರಿಯಂದು ಚಿಕ್ಕಿದೂ ಲಗ್ನ ಮಾಡಿಸಿದ್‌ರು.'

ಎಂದು ಹೇಳಿದಾಗ ಈ ಕ್ಷೇತ್ರಪಾಲ ವಿಶ್ವೇಶ್ವರನೇ ಎಂದು ಗಟ್ಟಿಯಾಗಿ ನಂಬುತ್ತಾರೆ. ಉಪ್ಪಾರ ಪಾಪಯ್ಯ ತನ್ನ ಮೊದಲ ರಾತ್ರಿಯಲ್ಲಿ ಹೆಂಡತಿಯನ್ನು ಬಚ್ಚಿಟ್ಟ ವಿಷಯದ ಬಗ್ಗೆಯೂ ಕೇಳುತ್ತಾನೆ ಇದೇ ರೀತಿ ವೆಂಕಮ್ಮ ಕೂಡಾ ಕ್ಷೇತ್ರಪಾಲನನ್ನು ಪರೀಕ್ಷೇಗೆ ಒಡ್ಡುತ್ತಾಳೆ. ಆದರೆ ಪುನರ್ಜನ್ಮದ ಎಲ್ಲ ಸ್ಮರಣೆಗಳನ್ನು ಖಚಿತವಾಗಿ ಹೇಳುವ ಕ್ಷೇತ್ರಪಾಲ ತಾನು ಹಿಂದಿನ ಜನ್ಮದ ವಿಶ್ವೇಶ್ವರನೇ ಎಂದು ಖಚಿತಪಡಿಸುತ್ತಾನೆ.

'' ನಮ್ಮ ಪುರಾಣ ಸಾಹಿತ್ಯದ ಪ್ರಕಾರ 'ನಾಯಿ' ಪೂರ್ವಜನ್ಮದ ಸಂಕೇತ ಆದುದರಿಂದ ವಿಶ್ವೇಶ್ವರನನ್ನು ಅದು ಕಾದಂಬರಿಯುದ್ದಕ್ಕು ಹಿಂಬಾಲಿಸುತ್ತದೆ. ಅವನು ಎಷ್ಟರ ಮಟ್ಟಿಗೆ ಪೂರ್ವಕರ್ಮಕ್ಕೆ ಅಂಟಿಕೊಂಡಿದ್ದನೆಂದರೆ ಸದಾ ಅವನು ನಾಯಿಯ ಕತ್ತನ್ನು ತಬ್ಬಿಕೊಂಡೇ ಮಲಗತ್ತಿದ್ದ. ವಿಶ್ವೇಶ್ವರ ಹುಟ್ಟಿ (ಕ್ಷೇತ್ರಪಾಲ) ಒಂದೂವರೆ ವರ್ಷದೊಳಗೆ ಆ ನಾಯಿ ಅವನಿಗೆ ಅ ನಾಯಿ ಅಂಟಿಕೊಳ್ಳುತ್ತದೆ ಅದು ಅವನ ಜೊತೆ ಅವನ ಪೂರ್ವ ಜನ್ಮದ ಹುಟ್ಟುರಾದ ಜೋಗಿನಹಳ್ಳಿಗೂ ಬರುತ್ತದೆ ಅವನ ಅವನು ಪುಟ್ಟಿಯ ಜೊತೆಯಲ್ಲಿ ಓಡಿ ಹೋಗಿ ಹಳ್ಳಿಯೊಂದರಲ್ಲಿರುವಾಗ ,ಅವನು ಪೊಲಿಸರಿಗೆ ಸಿಕ್ಕಿಹಾಕಿಕೊಳ್ಳಲು ಈ ನಾಯಿಯೇ ಸುಳಿವು ಕೊಡುತ್ತದೆ; ಒಂದು ರೀತಿಯಲ್ಲಿ ಕ್ಷೇತ್ರಪಾಲನ ಕರ್ಮದ ಬಿಡುಗಡೆಗೆ ದಾರಿ ಮಾಡಿಕೊಡುತ್ತದೆ. ಕ್ಷೇತ್ರಪಾಲನಿಗೆ ಏಳುವರ್ಷ ಕಠಿಣ ಶಿಕ್ಷೆ ಆದಾಗ, ಆ ನಾಯಿಯನ್ನು ಪೋಲಿಸರು ಅವನಿಂದ ಬೇರ್ಪಡಿಸಲು ಪ್ರಯತ್ನ ಪಡುತ್ತಾರೆ ಆದರೆ ಆ ನಾಯಿ ಒಪ್ಪದಿರಲು ಹಂಟರಿನಿಂದ ಹೊಡೆದು ಸಾಯಿಸುತ್ತಾರೆ.''

ನಾಯಿಯನ್ನು ಕರ್ಮದ ಸಂಕೇತಕ್ಕೆ ಕಾದಂಬರಿಕಾರರು ಬಳಸಿದ್ದಾರೆ. ಕರ್ಮ, ಪುನರ್ಜನ್ಮದಂತಹ ವಿಷಯಗಳನ್ನು ಸಾಹಿತ್ಯದ ಮೂಲಕ ಪ್ರತಿಷ್ಠಾಪಿಸಲು ಈ ಕಾದಂಬರಿಯನ್ನು ಬರೆದಂತೆ ತೊರುತ್ತದೆ. ಕ್ಷೇತ್ರಪಾಲನ ಪಾತ್ರವಾಗಲಿ, ಕಾದಂಬರಿಯ ವಸ್ತುವಾಗಲಿ 'ಸಿದ್ಧ' ರೂಪದಲ್ಲಿ ಸ್ವೀಕರಿಸಿದಂತಹದಾಗಿದೆ.

# ವಂಶವೃಕ್ಷ

''ಭಾರತೀಯ ಜೀವನ ಕ್ರಮವು ಆಧುನಿಕತೆಗೆ ಹೊರಳಿಕೊಳ್ಳುತ್ತಿರುವ ಸಂಕ್ರಮಣ ಕಾಲದ ಸಂದಿಗ್ಧಗಳನ್ನು, ರೂಢಿಯ ಮಾತಿನಲ್ಲಿ ಹೇಳಬೇಕೆಂದರೆ ಮೌಲ್ಯ ಸಂಘರ್ಷವನ್ನು ಚಿತ್ರಿಸುವುದು ಕಾದಂಬರಿಯ ಉದ್ದೇಶವಾಗಿದೆ.'' ಆದ ಕಾರಣ ಭೈರಪ್ಪನವರ ಎಲ್ಲ ಮುಖ್ಯ ಕಾದಂಬರಿಗಳಂತೆ (ಗೃಹಭಂಗ ಹೊರತು ಪಡಿಸಿ) ವಂಶವೃಕ್ಷವೂ ಕೂಡಾ ಒಂದು ಸೋದ್ದಿಶ್ಯ ಕಲಾಕೃತಿಯೇ. ಸನಾತನ ಮೌಲ್ಯ ವ್ಯವಸ್ಥೆ ಆಧಾರ ಕಳೆದುಕೊಳ್ಳತ್ತ, ಹೊಸ ಮೌಲ್ಯ ವ್ಯವಸ್ಥೆಯ ಸ್ಥಾಪನೆಗೆ ಅಧೀರತೆಯಿಂದ ಕಾತರಿಸುವ ಸಮಾಜದ ಚಿತ್ರಣ ವಂಶವೃಕ್ಷದಲ್ಲಿ ಕಂಡು ಬರುತ್ತದೆ'' ಎಂದು ಎಚ್. ಎಸ್. ವೆಂಕಟೇಶ ಮೂರ್ತಿ ಅಭಿಪ್ರಾಯ ಪಡುತ್ತಾರೆ.

ಕನ್ನಡದ ಶ್ರೇಷ್ಠ ಕಾದಂಬರಿಗಳಲ್ಲಿ ವಂಶವೃಕ್ಷವೂ ಕೂಡಾ ಒಂದು. ಕಪಿಲಾ ನದಿಯಲ್ಲಿ ಪ್ರವಾಹ ಬಂದು ಶ್ರೀನಿವಾಸ ಶ್ರೋತ್ರಿಯವರ ಮಗ ನಂಜುಂಡ ಶ್ರೋತ್ರಿ ಪ್ರವಾಹಕ್ಕೆ ಸಿಕ್ಕು ಸತ್ತು ಹೋಗುವ ಘಟನೆಯೊಂದಿಗೆ ಕಾದಂಬರಿ ಪ್ರಾರಂಭವಾಗುತ್ತದೆ. ಏಕಮಾತ್ರ ಪುತ್ರನ ಅಕಾಲ ಮರಣದಿಂದ ತಂದೆ ತಾಯಿಗಳಿಗೆ ಆಗುವ ದುಃಖ ಹೆಚ್ಚೊ ? ಇಪ್ಪತ್ತನೆ ವಯಸ್ಸಿಗೆ ಗಂಡನನ್ನು ಕಳೆದುಕೊಂಡ ಪ್ರೇಮಮಯೀ ಪತ್ನಿಯ ದುಃಖ ಹೆಚ್ಚೋ ? ಎನ್ನುವ ಪ್ರಶ್ನೆಗಳಿಗೆ ವಿವರವನ್ನು ಒದಗಿಸುವ ರೀತಿಯಲ್ಲಿ ಕಾದಂಬರಿಯ ಮುಂದಿನ ಬೆಳವಣಿಗೆಯಾಗುತ್ತದೆ.

ಬಾಳಿ ಬದುಕ ಬೇಕಾದ ಮಗ ಇಂಥ ದುರಂತಕ್ಕೆ ಒಳಗಾದಾಗ ಯಾವುದೇ ಕುಟುಂಬವೂ ಆಘಾತಕ್ಕೆ ಸಿಲುಕಿ ತತ್ತರಿಸುವುದು ಸಹಜ. ಇದಕ್ಕಿಂತ ಮುಖ್ಯವಾಗಿ ತಾರುಣ್ಯದಲ್ಲಿಯೇ ಗಂಡನನ್ನು ಕಳೆದುಕೊಂಡು ವೈಧ್ಯವ್ಯದ ಸಂಕಟವನ್ನು ಅನುಭವಿಸುತ್ತ ಬದುಕುವ 'ಕಾತ್ಯಾಯನಿ' ಯಂಥ ತರುಣಿಯರ ಗೋಳು ಮತ್ತೊಂದು ಕಡೆ. ಸನಾತನ ಧರ್ಮದಲ್ಲಿ ದಾಂಪತ್ಯದ ಉದ್ದೇಶ ಸಂತಾನೋತ್ಪತ್ತಿಗಾಗಿ, ಅಂದರೆ ವಂಶವನ್ನು ಉದ್ಧರಿಸುವುದಕ್ಕೆ. ಈಗ ಕಾತ್ಯಾಯನಿಯ ಬದುಕಿನಲ್ಲಿ ವಂಶೋದ್ಧಾರಕ್ಕಾಗಿ ಪುತ್ರನ ಜನನವಾಗಿದೆ. ಪುನಃ ಮದುವೆಯಾಗುವುದು ಅಧರ್ಮ ಎಂಬ ವಿಚಾರವಿದೆ. ಆದರೆ ಪ್ರಕೃತಿಯನ್ನು ಗೆಲ್ಲುವುದು ಅಷ್ಟು ಸುಲಭದ ಮಾತಲ್ಲ. ಆದರೆ ಶ್ರೋತ್ರಿಯವರ ಬದುಕಿನ ಘಟನೆಯಿಂದ ಇದು ಸಾಧ್ಯ ಎಂಬ ಚಿತ್ರಣವನ್ನು ಕಾದಂಬರಿ ಒದಗಿಸುತ್ತದೆ. ಶ್ರೋತ್ರಿಯರು ಲಕ್ಷ್ಮಿಯನ್ನು ತಿರಸ್ಕರಿಸುವ ಮೂಲಕ ತಮ್ಮ ಜೀವನ ಶ್ರದ್ಧೆಯನ್ನು ಕಾಪಾಡಿಕೊಳ್ಳತ್ತಾರೆ. ವೇದ, ಶಾಸ್ತ್ರ, ಪುರಾಣ, ಧರ್ಮಶಾಸ್ತ್ರ, ಆಯುರ್ವೇದಗಳ ಅಧ್ಯಯನ ಮಾಡುತ್ತಿರುವ ಶ್ರೀನಿವಾಸ ಶ್ರೋತ್ರಿ ಸನಾತನ ಧರ್ಮದ ಪ್ರತಿನಿಧಿ. ಎಂಥ ದುಃಖವನ್ನು ಮೆಟ್ಟಿನಿಲ್ಲುವ ಸಹನಶಕ್ತಿ

ಅವರಲ್ಲಿದೆ. ಪೂರ್ವಿಕರ ಜೀವನ ಶ್ರದ್ಧೆಯನ್ನು ಈಗಿನವರಿಗೆ ತಿಳಿಯುವ ಹಾಗೆ ಮಾಡಬೇಕೆನ್ನುವುದು ಅವರ ಉದ್ದೇಶ. ಋಷಿ ಸದೃಶವಾದ ಬದುಕು ಅವರದು. ಭಾರತೀಯ ಸಂಸ್ಕೃತಿಯ ಬಗೆಗೆ ಅಪಾರವಾದ ಪ್ರೀತಿ, ಗೌರವಗಳು ಅವರಲ್ಲಿದೆ. ಡಾ||ಸದಾಶಿವರಾಯರ ಜೊತೆಗೆ ನಡೆಸುವ ಸಂಭಾಷಣೆಯಲ್ಲಿ ಇದನ್ನು ಗುರುತಿಸಬಹುದು. ಅಧ್ಯಯನದಲ್ಲಿ ಅಪಾರ ಆಸಕ್ತಿಯನ್ನು ಹೊಂದಿದ ಶ್ರೋತ್ರಿಯವರು ಮೂರು ವೇದಗಳಿಂದಲೂ ಶ್ಲೋಕಗಳನ್ನು ಉದ್ಧರಿಸಿ ಹೇಳುವ ಪಾಂಡಿತ್ಯವುಳ್ಳವರು. ಡಾ|| ಸದಾಶಿವರಾಯರು ಪ್ರಕಟಿಸಿದ 'ಪ್ರಾಚೀನ ಭಾರತೀಯ ರಾಜ್ಯಶಾಸ್ತ್ರಕ್ಕೆ ಧರ್ಮದ ಆಧಾರ' ಎನ್ನುವ ಪುಸ್ತಕವನ್ನು ಶ್ರೀನಿವಾಸ ಶ್ರೋತ್ರಿಯವರಿಗೆ ಅರ್ಪಿಸುತ್ತಾರೆ. ಅಷ್ಟೊಂದು ಗೌರವವನ್ನು ಪಡೆದುಕೊಂಡವರು ಶ್ರೋತ್ರಿ. ವಂಶದ ಬಗ್ಗೆ ಅಪಾರವಾದ ಅಭಿಮಾನ ಅವರಿಗಿದೆ.

''ಅವರ ಪರಿಪೂರ್ಣ ವಿಶ್ವಾಸದ ಪ್ರಕಾರ ಮನುಷ್ಯನ ಮದುವೆಯಾಗುವುದು ಗೃಹಸ್ಥ ಧರ್ಮಕ್ಕಾಗಿ; ಗೃಹಸ್ಥನಾಗುವುದು ಈ ಲೋಕದಲ್ಲಿರುವ ಕರ್ತವ್ಯಗಳನ್ನು ಪೂರೈಸುವುದಕ್ಕಾಗಿ, ನಂತರ ಮಕ್ಕಳಾಗುವುದು ವಂಶವೃಕ್ಷದ ಕೊನೆ ಮುಂದುವರಿಯುವುದಕ್ಕಾಗಿ, ನಂತರ ಸಂತಾನವಿಲ್ಲದೆ ಸಾಯುವ ಮನುಷ್ಯ ವಂಶವೃಕ್ಷದ ಕೊನೆಯ ಮಗನಾಗಿ ತನ್ನಿಂದ ಮುಂದೆ ಬರೀ ಶೂನ್ಯವನ್ನು ಬಿಟ್ಟು ಸಾಯಬೇಕು. ಪಿತೃಗಳಿಂದ ಪಡೆದ ಈ ಜೀವವು ಪಿತೃ ಋಣ ತೀರಿಸುವುದು ತನ್ನ ಸಂತಾನದ ಮೂಲಕವೇ.'' (ವಂಶವೃಕ್ಷ, ಪು-೪೯) ಎಂಬ ನಂಬಿಕೆ ಅವರದು.

ವ್ಯಕ್ತಿಯ ಗೌರವ ಅಭಿಮಾನಗಳು ತನ್ನ ವಂಶದಿಂದೇ ಬಂದವು ಎನ್ನುವುದು ಅವರ ವಿಶ್ವಾಸವಾಗಿತ್ತು. ಮೊಮ್ಮಗ 'ಚೀನಿ'ಗೆ ಜ್ವರಬಂದ ಸಂದರ್ಭದಲ್ಲಿ ಕಾತ್ಯಾಯನಿ ಭಾವಾವೇಶಕ್ಕೆ ಒಳಾಗಾಗುತ್ತಾಳೆ. ಜ್ವರ ಕಳೆದು ಮಗು ಮಾತನಾಡಿದ ನಂತರ ಶ್ರೋತ್ರಿಯವರು ಕಾತ್ಯಾಯನಿಗೆ ಈ ರೀತಿ ಹೇಳುತ್ತಾರೆ. 'ಮಗೂ ಸುಖಾನ ನಾವು ಹೇಗೆ ಸ್ವೀಕರಿಸುತ್ತೇವೋ ಹಾಗೆಯೇ ದುಃಖಾನೂ ಒಪ್ಪಿಕೋಬೇಕು. ಭಾವನಾವೇಗಕ್ಕೆ ಮನಸ್ಸು ಬಿಡೋದರಿಂದ ಯಾವ ಸಾಧನೆಯೂ ಆಗುಲ್ಲ' (ವಂಶವೃಕ್ಷ, ಪು-೫೨)

ಆದರೆ ಕಾತ್ಯಾಯನಿ ತಾರುಣ್ಯದಲ್ಲಿಯೇ ಪತಿಯನ್ನು ಕಳೆದುಕೊಂಡವಳು ಈಗ ಮಗುವೂ ಹೋಗಿ ಬಿಟ್ಟರೆ ಎನ್ನುವ ಆತಂಕ ಅವಳದು. ಭಗವದ್ಗಿತೆಯಲ್ಲಿ ಹೇಳಿರುವ ವೇದಾಂತವನ್ನು ಅರಗಿಸಿಕೊಳ್ಳುವ ಶಕ್ತಿ ಅವಳಲ್ಲಿ ಇಲ್ಲ.ತನ್ನ ದುಃಖ ಪರಿಹಾರ ಮಾಡೋ ಶಕ್ತಿ ಯಾವ ವೇದಾಂತಕ್ಕು ಇಲ್ಲ ಎಂದು ಅವಳು ನಿರ್ಧರಿಸುತ್ತಾಳೆ.

ಡಾ|| ಸದಾಶಿವರಾಯರು ತಮ್ಮ ಅಧ್ಯಯನಕ್ಕೆ ಸಹಾಯಕವಾಗುವ ಕರುಣಾ ರತ್ನೆಯನ್ನ ಮದುವೆಯಾಗುವುದು ಕಾದಂಬರಿಯಲ್ಲಿ ಒಪ್ಪಿತ ಸಂಗತಿಯಾಗುತ್ತದೆ. ಆದರೆ ಕಾತ್ಯಾಯನಿ ಪುನರ್ ಮದುವೆಯಾಗುವುದು ಒಪ್ಪಿತ ಮೌಲ್ಯವಾಗುವುದಿಲ್ಲ ಏಕೆಂದರೆ ''ಕೌಟುಂಬಿಕ ಪರಂಪರೆ ಅಥವಾ ಕುಲಧರ್ಮ ಅದನ್ನು ಮುಂದುವರೆಸಿಕೊಂಡು ಹೋಗಬೇಕಾದ ಸಂತತಿಯ ಜೀವಾಳದ ಮಹತ್ವ ಇತ್ಯಾದಿ ಸಮಸ್ಯೆಯನ್ನು ಕ್ರೋಢೀಕರಿಸಿದ ಕಾದಂಬರಿ 'ವಂಶವೃಕ್ಷ' ಕುಲದ ಪರಂಪರೆಯನ್ನು ಕಾಪಾಡಿಕೊಳ್ಳಬೇಕೆಂಬ ಶ್ರೀನಿವಾಸ ಶ್ರೋತ್ರಿಯರು ಮತ್ತು ದೇಶದ ಜನಾಂಗದ ಜೀವಂತ ಪರಂಪರೆಯೇ ಇತಿಹಾಸವೆಂದು ನಂಬಿ ನೋಡುವ ಡಾ|| ಸದಾಶಿವರಾಯರು. ಈಕಾದಂಬರಿಯ ವಾಂಶಿಕ ದೃಷ್ಟಿಯ ಎರಡು ಕಣ್ಣುಗಳು ಅಂದರೆ

ವಂಶವೃಕ್ಷವು ಹಿಂದೂ ಧರ್ಮವನ್ನು ಕುರಿತ ಒಂದು ಪ್ರಮೇಯದ ಪ್ರಸ್ತಾಪ.'' ೨ ಎಂದು ಗೌರೀಶ ಕಾಯ್ಕಿಣಿಯವರು ಅಭಿಪ್ರಾಯ ಪಡುತ್ತಾರೆ.

ಕಾದಂಬರಿಕಾರರು ತಮ್ಮ ದೃಷ್ಟಿಕೋನವನ್ನು ತಮ್ಮದೇ ಆದ ರೀತಿಯಲ್ಲಿ ಈ ಕಲಾಮಾಧ್ಯಮದ ಮೂಲಕ ಕಟ್ಟಿಕೊಟ್ಟಿದ್ದಾರೆ. ಈ ಕಾದಂಬರಿಯ ಶ್ರೋತ್ರಿಯವರು ಭಾರತೀಯ ಸಂಸ್ಕೃತಿಯ ಜೀವಂತ ಪ್ರತೀಕವಾಗಿದ್ದಾರೆ. ಧರ್ಮದ ಸೂಕ್ಷ್ಮತೆಗಳನ್ನು ಅರಿತುಕೊಂಡು ಅವರು ಆ ಮಾರ್ಗದಲ್ಲಿಯೇ ನಡೆಯಲು ಇಷ್ಟ ಪಡುತ್ತಾರೆ. ಈ ಕಾದಂಬರಿಯಲ್ಲಿ ಮೂಡಿ ಬಂದಿರುವ ಸ್ತ್ರೀಪಾತ್ರಗಳು ಭಾರತೀಯ ಸಂಸ್ಕೃತಿಯ ಪ್ರತಿರೂಪಗಳಾಗಿವೆ. ಶ್ರೀನಿವಾಸರ ಪತ್ನಿ ಭಾಗೀರತಮ್ಮನಾಗಲಿ, ಡಾ॥ ಸದಾಶಿವರಾಯರ ಹೆಂಡತಿ ನಾಗಲಕ್ಷ್ಮಿಯಾಗಲಿ ಗಂಡನಿಗೆ ಅಧೀನಳಾಗಿ ಬಾಳುವ ಮನೋಭಾವ ಹೊಂದಿದವರಾಗಿದ್ದಾರೆ. ಗಂಡನ ಸುಖಕ್ಕೆ ತಮ್ಮ ಸುಖವನ್ನು ತ್ಯಾಗ ಮಾಡುವ ಇವರು ಗ್ರಹಸ್ಥಾಶ್ರಮದ ಎಲ್ಲ ಮೌಲ್ಯಗಳನ್ನು ಪಾಲಿಸುವ ಸಹಜ ಮನಸ್ಥಿತಿಯನ್ನು ಹೊಂದಿದ್ದಾರೆ. ಭಾಗಿರತಮ್ಮ ಲಕ್ಷಿಯನ್ನು ಗಂಡನಿಗೆ ಸಹಕರಿಸುವಂತೆ ಒಪ್ಪಿಸುವುದು ಅವನ ಕಾಮತೃಪ್ತಿಯ ಉದ್ದೇಶದಿಂದ. ಕಾಮತೃಪ್ತಿ ದೊರೆಯದೇ ಸೊರಗಿ ಸೊರಗಿ ಏನಾದರೂ ಅನಾಹುತವಾದರೆ ಎಂಬ ಚಿಂತೆ ಅವಳನ್ನು ಕಾಡುತ್ತದೆ.

ಸನಾತನ ಮೌಲ್ಯಗಳ ವಿರುದ್ಧ ಆಧುನಿಕ ಮವಲ್ಯಗಳು ಸಂಘರ್ಷ ಇಲ್ಲಿ ಕಂಡು ಬರುತ್ತದೆ. ಕಾತ್ಯಾಯನಿ ತಾನು ವಿಧವೆಯಾಗಿದ್ದರೂ ಸದಾಶಿವರಾಯರ ಸಹೋದರ ರಾಜಾರಾಯನನ್ನು ಮದುವೆಯಾಗಲು ಇಷ್ಟಪಡುತ್ತಾಳೆ. ಕರುಣಾರತ್ನೆ ಕೂಡಾ ಆಧುನಿಕತೆಯ ಪ್ರತಿನಿಧಿ. ಅವಳು ವ್ಯಕ್ತಿ ನಿಷ್ಠಗೆ ಮಾರು ಹೋದವಳು.

ಡಾ॥ಸದಾಶಿವರಾಯರ ಹೆಂಡತಿ ನಾಗಲಕ್ಷ್ಮಿ ಪಾತಿವ್ರತ್ಯ ಸಹಿಷ್ಣುತೆ, ಶ್ರೀರಾಮಸ್ಮರಣೆಯಂಥ ಸನಾತನ ಮೌಲ್ಯಗಳ ಪ್ರತೀಕವಾಗಿದ್ದಾಳೆ. ಅವಳ ತನ್ನ ಪತಿಯ ಎರಡನೆಯ ಮದುವೆಯನ್ನು ಸಹಿಸಿಕೊಳ್ಳತ್ತಾಳೆ. ಮುಂದಿನ ಜನ್ಮಕ್ಕೆ ಇವರನ್ನೆ ಪತಿಯಾಗಿ ಕೊಡು, ಮುತ್ತೈದೆ ಸಾವನ್ನು ಹಣೆಯಲ್ಲಿ ಬರಿಯೂದು ಮರಿಬೇಡ ಎಂದು ನುಡಿಯುವ ಹಿಂದೂ ಸಂಸ್ಕೃತಿಯ ಆದರ್ಶ ಪತ್ನಿ ಇವಳು.

ಆಲೋಚನೆಗಳಲ್ಲಿ ಸಂಸ್ಕೃತಿ ಕುರಿತಾದ ವಿಚಾರಗಳಿವೆ. ''ಸಂಸ್ಕೃತಿಯ ಈ ಪರಂಪರೆಯ ಆದಿ ಯಾವುದು ? ವೇದಗಳಂತೆ ಇದು ಅಪೌರುಷವೇ ? ಅಥವಾ ಇತಿಹಾಸ ತಜ್ಞರು ಅಭಿಪ್ರಾಯ ಪಡುವಂತೆ ಕಿ.ಪೂ. ಎರಡುಸಾವಿರ ವರ್ಷದಿಂದ ಪ್ರಾರಂಭವಾಗುವುದೇ ? ಮೂರು ಸಾವಿರ ವರ್ಷಗಳೇ ? ಇದರ ಪ್ರಾರಂಭದ ಬಿಂದು ಯಾವುದು ? ಮಾನವ ಜೀವನ ಶಾಸ್ತ್ರಜ್ಞರ ದೃಷ್ಟಿಕೋನದಿಂದ ನಾವು ಮನುಷನ ಸಾಂಸ್ಕೃತಿಕ ಇತಿಹಾಸ ಕಾಲವನ್ನು ಅಳೆಯಬಹುದೆ? ಹೀಗೆ ಅವರ ಚಿಂತನೆ ಸಾಗುತ್ತದೆ. '' (ವಂಶವೃಕ್ಷ. ಪು-೪೦)

ಕರುಣಾರತ್ನೆ ಮತ್ತು ಅವರ ಮಧ್ಯೆ ಇತಿಹಾಸ ಮತ್ತು ಸಂಸ್ಕೃತಿಯ ಕುರಿತು ನಡೆಯುವ ಸಂಭಾಷಣೆ ಮಹತ್ವದ್ದಾಗಿದೆ.

'' ಇತಿಹಾಸವೂ ಸದಾ ಪ್ರಗತಿಮುಖಿ ಎಂದರೆ ನಮ್ಮ ಪೂರ್ವಜರ ಸಂಸ್ಕೃತಿ ನಮ್ಮದಕ್ಕಿಂತ ಕೀಳು ಎಂದಂತಾಯಿತು ವಿಗತಿಯೇ ಅದರ ದಿಕ್ಕು ಎಂದರೆ ನಾವು ಅಧಃಪತನದ ದಾರಿಯಲ್ಲಿ ಅನಿವಾರ್ಯವಾಗಿ

ಸಾಗುತ್ತಿದ್ದೇವೆ ಅಂದ ಹಾಗೆ ಭಾರತೀಯ ದೃಷ್ಟಿಯಲ್ಲಿ ಕೃತ, ತ್ರೇತಾ, ದ್ವಾಪರ, ಕಲಿ ಎಂದು ಕ್ರಮವಾಗಿ ಯುಗಗಳನ್ನು ವಿಂಗಡಿಸಿರುವುದನ್ನು ನೋಡಿದರೆ ಮೌಲಿಕವಾಗಿ ಇತಿಹಾಸವೂ ವಿಗತಿಯ ಎಡೆಗೆ ಸಾಗುತ್ತಿದೆ ಎನ್ನಬಹುದು ಆದರೆ ಕಲಿಯುಗವೇ ಕೊನೆಯದಲ್ಲ. ಈ ಯುಗವೂ ಮರಳಿ, ಪುನಃ ಯುಗಚಕ್ರವು ಸಾಗುತ್ತದೆ.'' (ವಂಶವೃಕ್ಷ, ಪು-೪೨)

ಸಂಸ್ಕೃತಿ ಕುರಿತ ಈ ಚಿಂತನೆಯಲ್ಲಿ ಸಂಸ್ಕೃತಿ ಪ್ರಗತಿ ಮುಖಿಯೇ ಅಥವಾ ವಿಗತಿಮುಖಿಯೇ ಎಂಬ ಚಿಂತನೆ ಕಾಣುತ್ತದೆ.

ಡಾ॥ಸದಾಶಿವರಾಯರು ಓದಿನ ಮಧ್ಯೆ ನಾಗಲಕ್ಷ್ಮಿಯನ್ನು ಉಪೇಕ್ಷೆ ಮಾಡುತ್ತಾರೆ. ಹೀಗಾಗಿ ಅವಳಿಗೆ ಅಸಮಾಧಾನವಿದೆ ಅದನ್ನು ಸದಾಶಿವರಾಯರ ತಮ್ಮ ರಾಜಾರಾಯನ ಮುಂದೆ ತೋಡಿಕೊಳ್ಳುತ್ತಾಳೆ. ಈ ಸಂದರ್ಭದಲ್ಲಿ ರಾಜರಾಯ ಅತ್ತಿಗೆಗೆ ಸಮಾಧಾನ ಪಡಿಸುತ್ತಾನೆ.

''ವಿದ್ವತ್ತಿನ ಕೆಲಸವೇ ಹೀಗೆ, ಅಣ್ಣ ಒಬ್ಬನಲ್ಲ ಇಂಗ್ಲೆಂಡಿನಲ್ಲೂ ವಿದ್ವಾಂಸರು ಹೀಗೆಯೇ ಇರ್‌ತಾರೆ. ನಮ್ಮ ದೇಶದಲ್ಲಿ ಅಂಥೋರು ಕಡಿಮೆ. ಅಣ್ಣನಂಥೋರು ಅಪರೂಪ ಎಂಬ ಮಾತಿಗೆ ನಾಗಲಕ್ಷ್ಮಿ ಹಾಗಾದರೆ ಅವರ ಹೆಂಡತಿಯರು ಏನು ಮಾಡ್ತಾರೆ? ಎಂದು ಪ್ರಶ್ನಿಸುತ್ತಾಳೆ. ಆ ಸಂದರ್ಭದಲ್ಲಿ ಇಂಗ್ಲೆಂಡಿನ ಮತ್ತು ಭಾರತೀಯ ಸ್ತ್ರೀಯರನ್ನು ತುಲನಾತ್ಮಕವಾಗಿ ಅವನೂ ನೋಡುತ್ತಾನೆ. ಆಕ್ಸ್‌ಫರ್ಡಿನ ಪ್ರಸಿದ್ಧ ಪ್ರೊಫೆಸರ್ ಹೆಂಡತಿಯರೆಲ್ಲರೂ ಪತಿಯ ವ್ಯಾಸಂಗದಲ್ಲಿ ಸಹಾಯಮಾಡುವ ಮಟ್ಟಿನ ವಿದ್ಯಾವತಿಯರೇ ಆಗಿದ್ದರು. ತಮ್ಮ ಪತಿಯ ಓದು ಬರಹ, ಟಿಪ್ಪಣೆ ಮಾಡುವುದು. ಅಚ್ಚಿನ ಹಾಳೆಗಳನ್ನು ತಿದ್ದುವುದು, ಮೊದಲಾದವುಗಳಲ್ಲಿ ಸಹಾಯ ಮಾಡುತ್ತಿದ್ದರು. ಪತಿಯ ಆಪ್ತಕಾರ್ಯದರ್ಶಿಯ ಕೆಲಸವನ್ನು ಅವರೇ ಮಾಡುತ್ತಿದ್ದರು. ಹೀಗಾಗಿ ಪತಿ ಪತ್ನಿಯರ ನಡುವೆ ಮಾತನಾಡುವ ವಿಷಯಗಳು ಹೇರಳವಾಗಿರುತ್ತಿದ್ದವು ಮಾತ್ರವಲ್ಲ. ಪತ್ನಿಯ ನೆರವಿಲ್ಲದೆ ಪತಿಯ ಯಾವ ಬೌದ್ಧಿಕ ಸಾಧನೆಯೂ ನಡೆಯುತ್ತಿರಲಿಲ್ಲ. ಪತ್ನಿಗೆ ಬೇಸರವಾಗುವ ಕಾರಣವೂ ಇರುತ್ತಿರಲಿಲ್ಲ. ಆ ದೇಶದ ಪದ್ಧತಿಯೇ ಬೇರೆ ತೆರನಾಗಿದೆ ತಮ್ಮ ಅಭಿರುಚಿಗೆ, ಜೀವನ ಸಾಧನೆಗಳಿಗೆ ಅನುರೂಪವಾದವರನ್ನೇ ಪರಸ್ಪರ ಮುಕ್ತವಾಗಿ ಆರಿಸಿಕೊಳ್ಳುತ್ತಾರೆ. ಒಂದು ವೇಳೆ ಇಬ್ಬರ ನಡುವೆ ಸ್ವಲ್ಪವೂ ಹೊಂದುವುದಿಲ್ಲವೆಂದು ಕಂಡು ಬಂದಾಗ ತಾವಾಗಿಯೇ ಬೇರೆಯಾಗಿ ಪುನಃ ತಮಗೆ ಹೊಂದುವಂಥವರನ್ನು ಹುಡುಕುತ್ತಾರೆ.'' (ವಂಶವೃಕ್ಷ, ಪು-೫೬)

ಮೇಲಿನ ವಿಷಯಕ್ಕೆ ತದ್ವಿರುದ್ಧವಾದ ಪರಿಸ್ಥಿತಿ ಭಾರತೀಯರದು ಹೆಣ್ಣಿನೊಂದಿಗೆ ಮುಕ್ತವಾಗಿ ಮಾತನಾಡುವ ಹಾಗಿಲ್ಲ. ಜೀವನ ಸಾಧನೆಗೆ ಅನುಕೂಲವಾಗುತ್ತಾರೆಯೇ ಇಲ್ಲವೊ ಎಂಬುದಕ್ಕಿಂತ ಜಾತಕ ನೋಡಿ ಹೆಣ್ಣು ಗಂಡುಗಳನ್ನು ನಿರ್ಧರಿಸುವುದು ನಮ್ಮ ಪದ್ಧತಿ. ಮದುವೆಯಾದ ನಂತರ 'ಪಾಲಿಗೆ ಬಂದದ್ದು ಪಂಚಾಮೃತ' ಎಂಬ ರೀತಿಯಲ್ಲಿ ಅನುಸರಿಸಿಕೊಂಡು ಹೋಗಬೇಕು ಹೆಂಡತಿಯನ್ನು ಬದುಕಿನ ಮಧ್ಯದಲ್ಲಿಯೇ ಕೈಬಿಡುವುದನ್ನು ನಮ್ಮ ಸಂಸ್ಕೃತಿ ಒಪ್ಪುವುದಿಲ್ಲ. ಗಂಡ ತೀರಿಕೊಂಡರೂ ವಿಧವೆಯಾದವಳು ಮರುಮದುವೆಯಾಗುವುದು ಅಷ್ಟು ಸರಿಯಾದ ಕ್ರಮವಲ್ಲ ಎಂಬ ನಂಬುಗೆ ಭಾರತೀಯರಲ್ಲಿರುವುದನ್ನು ಗಮನಿಸಬಹುದು.

ವಂಶವೃಕ್ಷದ ಕಥಾ ಸಂವಿಧಾನ ವಿಧವೆಯ ಪುನರ್ ವಿವಾಹವನ್ನು ಒಪ್ಪದೇ ಇರುವಂಥಹದಾಗಿದೆ.

ಒಂದು ವಂಶದ ವಸ್ತುವಾದ ಸ್ತ್ರೀ ಪುನರ್ ವಿವಾಹದಿಂದ ಮತ್ತೊಂದು ವಂಶಕ್ಕೆ ಕಾಲಿಟ್ಟಾಗ ಆಗಬಹುದಾದ ಮಾನಸಿಕ ತಳಮಳವನ್ನು ಕಾದಂಬರಿಕಾರರು ವಾಸ್ತವ ನೆಲೆಗಟ್ಟಿನ ಮೇಲೆಯೇ ಚಿತ್ರಿಸಿದ್ದಾರೆ. ಮೊದಲ ಸಂಬಂಧದ ಮಗು ಚೀನಿಯನ್ನು ಅಗಲಿ ಬಂದ ನಂತರ ಕಾತ್ಯಾಯನಿ ಅನುಭವಿಸುವ ನೋವು ಮಾತ್ರ ಸಹಜವಾದ ನೋವಾಗಿದೆ. ಕಾತ್ಯಾಯನಿ ತನ್ನ ಮಗು ಚೀನಿಯನ್ನು ಕೇಳುವ ಸಂದರ್ಭದಲ್ಲಿ ಶ್ರೀನಿವಾಸ ಶ್ರೋತ್ರಿಯವರಿಗೆ ಮತ್ತು ಅವಳಿಗೂ ನಡೆಯುವ ಸಂಭಾಷಣೆಯಲ್ಲಿ ಸ್ತ್ರೀ ಮದುವೆಯಾಗುವುದು ಒಂದು ಬಾರಿ ಮಾತ್ರ ಎನ್ನುವ ನಂಬಿಕೆ ಇದೆ. ವಿಧವೆಯಾದವಳು ಪುನಃ ಕನ್ಯೆಯಂತೆ ಹೊಸ ಪತ್ನಿತ್ವವನ್ನು ಪ್ರಾರಂಭಿಸುವುದು ಉಚಿತವಾದ ಕಾರ್ಯವೆನಿಸುವುದಿಲ್ಲ. ಇದು ಧರ್ಮಕ್ಕೆ ವಿರುದ್ಧವಾದ ಕ್ರಿಯೆ ಎನ್ನುವುದು ಶ್ರೋತ್ರಿಯವರ ನಂಬುಗೆ. ಪುರುಷ ಹೆಂಡತಿ ಸತ್ತನಂತರವೂ ಮದುವೆಯಾಗಬಹುದು ಇದಕ್ಕೆ ಕಾತ್ಯಾಯನಿಯ ತಂದೆಯ ನಿದರ್ಶನ ಕಾದಂಬರಿಯಲ್ಲಿ ದೊರೆಯುತ್ತದೆ. ಆದರೆ ವಿಧವೆಯಾದ ಕಾತ್ಯಾಯನಿಯ ಮದುವೆಯನ್ನು ಕಾದಂಬರಿ ಸ್ವೀಕರಿಸುವುದಿಲ್ಲ. ಕಾದಂಬರಿಕಾರರು ಇದೊಂದು ಪ್ರಮಾದವೆಂದೇ ತೀರ್ಮಾನಿಸಿ ಕಾದಂಬರಿಯ ಬೆಳವಣಿಗೆಯನ್ನು ಮಾಡುತ್ತಾರೆ. ಗಂಡನ ಶ್ರಾದ್ಧದ ದಿನವೇ ಅವಳು ಬರುವ ಸನ್ನಿವೇಶ. ಪುನರ್ವಿವಾಹದ ನಂತರ ಒಂದರ ನಂತರ ಒಂದು ಮಗುವಿನ ಗರ್ಭಪಾತವಾಗುವುದು. ಕಾತ್ಯಾಯನಿಗೆ ಹಿಂದಿನ ನೆನಪುಗಳೆಲ್ಲ ಕಾಡುವುದು. ಬಹುಶಃ ಕಾದಂಬರಿಕಾರರ ಪೂರ್ವ ನಿರ್ಧಾರವನ್ನು ಸೂಚಿಸುತ್ತದೆ. ವಿಧವೆಯಾದ ಕಾತ್ಯಾಯನಿಯ ಪುನರ್‌ವಿವಾಹ ಎಲ್ಲ ರೀತಿಯಿಂದಲೂ ವಿಫಲವಾಗುವ ಸನ್ನಿವೇಶಗಳು ಕಾದಂಬರಿಯಲ್ಲಿ ನಿರ್ಮಾಣವಾಗುತ್ತವೆ. 'ಒಂದು ವಂಶದ ಬೀಜವನ್ನು ಧರಿಸಿದ್ದ ಕ್ಷೇತ್ರವೂ ಮತ್ತೊಂದು ವಂಶದ ಬೀಜವನ್ನು ಧರಿಸಲು ಹೋಗುವುದು ಪಾಪ. ಆ ಪಾಪದ ಫಲವಾಗಿಯೇ ಮೂರು ಶಿಶುಗಳು ಹುಟ್ಟುವ ಮೊದಲೆ ದಕ್ಕದೇ ಹೋದವು.' (ವಂಶವೃಕ್ಷ, ಪು -೨೮೮) ಎಂಬ ಭಾವನೆ ಕಾತ್ಯಾಯನಿಗೆ ಬರುವುದು ವಂಶ ಪ್ರಜ್ಞೆಯ ಪ್ರತೀಕವಾಗಿದೆ.

# ಗ್ರಹಣ

'ಗ್ರಹಣ' ಕಾದಂಬರಿ ಸೂರ್ಯಗ್ರಹಣದ ವಿಷಯವನ್ನು ವಿಶ್ಲೇಷಿಸುವುದರೊಂದಿಗೆ ಪ್ರಾರಂಭವಾಗುತ್ತದೆ. ಹಿಮವತೀ ನದಿಯ ದಡದಲ್ಲಿರುವ ಹಿಮಗಿರಿ ಎಂಬ ಊರಿನಲ್ಲಿ ಜರುಗುವ ಸಂಗತಿಗಳು ಕಾದಂಬರಿಯಲ್ಲಿ ಚರ್ಚೆಯಾಗುತ್ತವೆ. ಭಾರತೀಯರ ನಂಬಿಗೆಯ ಪ್ರಕಾರ ಗ್ರಹಣವೆಂದರೆ ರಾಹು - ಕೇತುಗಳು ಸೂರ್ಯ - ಚಂದ್ರರನ್ನು ನುಂಗುವ ಒಂದು ವಿದ್ಯಮಾನ. ವೈಜ್ಞಾನಿಕ ತಿಳುವಳಿಕೆಯ ಪ್ರಕಾರ ಖಗೋಲ ಲೋಕದಲ್ಲಿ ನಡೆಯುವ ಒಂದು ವಿಸ್ಮಯ. ಸೂರ್ಯ ಚಂದ್ರನಿಂದ ಮರೆಮಾಡಲ್ಪಟ್ಟಾಗ ಉಂಟಾಗುವ ಸ್ಥಿತಿಯನ್ನೇ ಸೂರ್ಯ ಗ್ರಹಣವೆಂದು ಅರ್ಥೈಸುವುದು ಖಗೋಲ ವಿಜ್ಞಾನದಲ್ಲಿ ಸಾಮಾನ್ಯವಾದುದು.

'ಗ್ರಹಣ'ದ ಹಿನ್ನಲೆಯಲ್ಲಿಯೇ ಕಾದಂಬರಿಯ ವಿಷಯ ಬೆಳೆಯುತ್ತದೆ. ಗ್ರಹಣ ಜರುಗುವ ಸಂದರ್ಭದಲ್ಲಿ ಈಗಲೂ ಭಾರತೀಯರು ಹಲವು ರೀತಿಯ ಸಂಪ್ರದಾಯಗಳನ್ನು ಆಚರಿಸುತ್ತಾರೆ. ಮನೆಯೊಳಗಿನ ನೀರೆಲ್ಲವನ್ನು ಚೆಲ್ಲಿ ಹೊಸದಾಗಿ ಗ್ರಹಣ ಬಿಟ್ಟ ನಂತರ ನೀರು ತುಂಬುವುದು, ನೀರಿನ ಪಾತ್ರೆಗಳಿಗೆ, ಅಡುಗೆ ಪಾತ್ರೆಗಳಿಗೆ ದರ್ಭೆ ಹಾಕುವುದು. ಗ್ರಹಣ ಬಿಟ್ಟ ನಂತರ ಸ್ನಾನ ಮಾಡಿ ಊಟ ಮಾಡುವುದು ಗರ್ಭಿಣಿ ಹೆಂಗಸರು ಗ್ರಹಣವನ್ನು ವೀಕ್ಷಿಸದೇ ಕತ್ತಲು ಕೋಣೆಯಲ್ಲಿ ಕೂಡುವುದು. ಯಾವುದೇ ತರಕಾರಿಗಳನ್ನು ಕತ್ತರಿಸದೇ ಇರುವುದು, ಕತ್ತರಿಸಿದರೆ ಮುಂದೆ ಜನಿಸುವ ಮಕ್ಕಳ ಅಂಗಾಂಗಗಳು ಊನವಾಗಿರುತ್ತವೆ ಅಥವಾ ಸೀಳಿರುತ್ತವೆ ಎಂಬ ಹಲವಾರು ನಂಬಿಕೆಗಳು ಇವೆ.

ಹಿಮಗಿರೀಶ್ವರ ಕಾಲೇಜಿನ ಪ್ರಿನ್ಸಿಪಾಲರ ಪತ್ನಿ ವಿಜ್ಞಾನವನ್ನು ಅಭ್ಯಸಿಸಿದ ಪದವಿಧರೆ ಮತ್ತು ಅಧ್ಯಾಪಕಿಯಾದರೂ ಅವಳು ಗರ್ಭಿಣಿಯಾದ ಕಾಲದಲ್ಲಿ ಜರುಗುವ ಸೂರ್ಯಗ್ರಹಣದ ಸಂದರ್ಭದಲ್ಲಿ ಧಾರ್ಮಿಕ ವ್ರತವನ್ನು ಆಚರಿಸುತ್ತಾಳೆ. ಆದರೆ ವಿಪರ್ಯಾಸದ ಸಂಗತಿಯೆಂದರೆ ವಾಸ್ತವವಾಗಿ ಅವಳು ಗರ್ಭಿಣಿಯೇ ಆಗಿರುವುದಿಲ್ಲ. ವಿಜ್ಞಾನ ಅಭ್ಯಸಿದ ಲಲಿತಮ್ಮ ಅವೈಜ್ಞಾನಿಕ ನಂಬಿಕೆಗೆ ಜೋತುಬೀಳುತ್ತಾಳೆ.

''ಗ್ರಹಣ ಹಿಡಿದ ವರ್ಷ ಮಾವಿನ ಹಣ್ಣುಗಳೆಲ್ಲ ಕೊಳೆತು ಹೋಗುತ್ತೆ ಅಚ್ಚಮ್ಮನೋರು ಅದೇ ಕೇಳಿದರು ಮರದ ಮೇಲಿನ ಹಣ್ಣುಗಳೇ ಕೊಳೆತು ಬೀಳುತ್ವೆ ಲಲಿತಮ್ಮ ತುಂಬಿದ ಬಸುರಿ ನೀವು ಎಚ್ಚರವಾಗಿರಿ ಬಿಡುಗಡೆಯಾಗಿ ಸ್ನಾನ ಮಾಡೂತನಕ ಏನೂ ತಿನ್ನಬ್ಯಾಡಿ. ಗ್ರಹಣ ಹಿಡಿದಾಗ ಮೈಮೇಲೆ ಆ ಮೈಲಿಗೆಯ ಬಿಸಿಲು ಬೀಳಿಸಬ್ಯಾಡಿ ಆ ಬಿಸಿಲನ್ನು ಕಣ್ಣಿನಲ್ಲೂ ನೋಡಬ್ಯಾಡಿ. ಒಳಗಿರೂ ಮಗೂಗೆ ಏನಾದರೂ ಆದೀತು

ಅಂದು'' (ಗ್ರಹಣ, ಪು-೯) ಯಜ್ಞೇಶ್ವರ ಶಾಸ್ತ್ರ ಅಚ್ಚಮ್ಮನವರ ಈ ಮಾತನ್ನು ಲಲಿತಮ್ಮ ನಂಬುತ್ತಾಳೆ ಮತ್ತು ಅದೇ ರೀತಿ ಆಚರಿಸುತ್ತಾಳೆ.

ಶಾಸ್ತ್ರ ಧರ್ಮಾಧರ್ಮಗಳಿಗೆ ಸಂಬಂಧಿಸಿದ ವ್ಯವಹಾರ ತಮ್ಮದೆಂದು ನಂಬಿ ಮಠದ ಪುರೋಹಿತ ಸ್ಥಾನವನ್ನು ವಹಿಸಿಕೊಂಡ ಯಜ್ಞೇಶ್ವರ ಶಾಸ್ತ್ರೀಗಳು ಪ್ರಿನ್ಸಿಪಾಲರು ಲಲಿತಮ್ಮಳನ್ನು ಮದುವೆಯಾಗುತ್ತೇನೆಂದು ಹೇಳಿದಾಗ ವಿರೋಧಿಸುತ್ತಾರೆ. ಆದರೆ ಅವರ ಕುಟುಂಬಕ್ಕೆ ತುಂಬಾ ಆಪ್ತರಾದವರು ಯಜ್ಞೇಶ್ವರ ಶಾಸ್ತ್ರೀಗಳು.

ಅಪ್ಪೇಗೌಡರ ಆಸಕ್ತಿ ಹಾಗೂ ಸ್ವಾಮಿಗಳ ಮೇಲ್ವಿಚಾರಣೆಯಿಂದ ಮಠ ಬೆಳೆಯುತ್ತದೆ ಹೈಸ್ಕೂಲ ಕಟ್ಟಡ ತಲೆಯೆತ್ತುತ್ತದೆ ಆದರೆ ಸ್ವಾಮಿಗಳು ಮಹಿಳಾ ಆಸ್ಪತ್ರೆಯ ಡಾಕ್ಟರ್ ಸರೋಜಮ್ಮನನ್ನು ಮದುವೆಯಾಗುವ ವಿಚಾರವನ್ನು ಪ್ರಸ್ತಾಪಿಸುತ್ತಾರೆ. ಸನ್ಯಾಸಿ, ಕಾಷಾಯ ವಸ್ತ್ರಾಧಾರಿಗಳು ಒಂದು ಪೀಠದ ಅಧಿಕಾರಿಗಳು ಸಂಸಾರಿಯಾಗುವುದು ಹೇಗೆ ಸಾಧ್ಯ ? ಎಂಬ ಪ್ರಶ್ನೆ ಉದ್ಭವವಾಗುತ್ತದೆ.

''ಸನ್ಯಾಸವೆಂದರೆ ಸಾಗರ. ನದಿಯು ಪರ್ವತದ ತನ್ನ ಉಗಮಸ್ಥಾನವೆಂಬ ಮಾತೃಗರ್ಭದಿಂದ ಹೊರಬಂದ ಮೇಲೆ ಮಗುವಿನಂತೆ ಸಣ್ಣದಾಗಿ ಹರಿದು ಅನಂತರ ಮಹಾಜಲದಲ್ಲಿ ತನ್ನ ಪ್ರತ್ಯೇಕತೆಯನ್ನು ಅಳಿಸಿಕೊಳ್ಳುತ್ತದ'' (ಗ್ರಹಣ, ಪು-೩೮) ಎಂದು ಚಿಂತಿಸುವ ಯಜ್ಞೇಶ್ವರ ಶಾಸ್ತ್ರಿಗಳು ಇದನ್ನು ತಡೆಯಲು ಪ್ರಯತ್ನಿಸುತ್ತಾರೆ.ಸಂಸಾರ ಮತ್ತು ಸನ್ಯಾಸ ಪರಸ್ಪರ ವಿರುದ್ಧವೆಂಬ ಧಾರ್ಮಿಕ ನಂಬಿಕೆಗನುಗುಣವಾಗಿ ಈ ಕಾರ್ಯಕ್ಕೆ ಅವರು ತೊಡಗುತ್ತಾರೆ. ಆದರೆ ಸನ್ಯಾಸದ ಅರ್ಥವನ್ನೆ ಸ್ವಾಮಿಗಳು ಭಿನ್ನ ರೀತಿಯಲ್ಲಿ ಅವರಿಗೆ ವಿವರಿಸುತ್ತಾರೆ.''ವೇದೋಪನಿಷತ್ತಿನ ಕಾಲದಲ್ಲಿ ಋಷಿಗಳಿದ್ದರು.ಸನ್ಯಾಸಿಗಳಿರಲಿಲ್ಲ. ಋಷಿಗಳೆಲ್ಲ ಸಂಸಾರಿಗಳೇ ಆಗಿದ್ದರು,ಜೀವನದಲ್ಲಿ ಧರ್ಮಚ್ಯುತಿಯಾಗ್ತಾ ಆಗ್ತಾ ಸಂಸಾರಿಗಳಲ್ಲಿದ್ದ ಸದ್ಗುಣಗಳು ಕಡಿಮೆಯಾದವು.ಅದಕ್ಕೆ ಮದ್ದು ಅನ್ನುವ ಹಾಗೆ ಶುದ್ಧ ಸನ್ಯಾಸ ಅಂತ ಆರಂಭ ಮಾಡಿದರು.ಸನ್ಯಾಸ ಅನ್ನೋದು ಪ್ರತಿಯೊಬ್ಬನ ಜೀವನದ ಪ್ರತಿಯೊಬ್ಬ ಸಂಸಾರಿಯ ಒಂದು ಅವಿಭಾಜ್ಯ ಗುಣವಾಗಿರಬೇಕು.ಸಂಸಾರವನ್ನು ಪೂರ್ತಿ ಬಿಟ್ಟರೆ ಸನ್ಯಾಸದ ಅರ್ಥ ಉಳಿಯುವದಿಲ್ಲ.''

ಎಂದು ತಿಳಿಸುವ ಹಿಮಗಿರೀಶ್ವರ ಸ್ವಾಮಿಗಳು ತಮ್ಮ ಹೆಸರನ್ನು ಬದಲಿಸಿಕೊಳ್ಳುವ ಇಂಗಿತವನ್ನು ವ್ಯಕ್ತಪಡಿಸುತ್ತಾರೆ. ಆಶ್ರಮಗಳನ್ನು ಕುರಿತು ತಮ್ಮದೆ ರೀತಿಯಲ್ಲಿ ಅರ್ಥ ಕಂಡುಕೊಳ್ಳುತ್ತಾರೆ.

ನಮ್ಮ ಸಮಾಜದಲ್ಲಿ ಮಠಗಳು ಹುಟ್ಟಿಕೊಳ್ಳುವ ರೀತಿ ಮತ್ತು ಅವು ಸಮಾಜಕ್ಕೆ ಶಿಕ್ಷಣ ಸಂಸ್ಥೆಗಳ ಮೂಲಕ ಸಲ್ಲಿಸುವ ಸೇವೆಗಳ ವಿವರಗಳು ವಾಸ್ತವಾಂಶಗಳಿಂದ ಕೂಡಿವೆ. ಸನ್ಯಾಸಿ ಸಂಸಾರಸ್ಥನಾಗುತ್ತಾನೆಂದರೆ ನಮ್ಮ ಸಮಾಜದಲ್ಲಿ ನಡೆಯುವ ಅನೇಕ ಸಂಗತಿಗಳು ಮತ್ತು ಕಂಡು ಬರುವ ವಿರೋಧ ಕಾದಂಬರಿಯಲ್ಲಿ ಚಿತ್ರಿತತವಾಗಿವೆ. ಎಂ. ಎಲ್. ಎ ಚಂದ್ರಪ್ಪನವರು ಕಾಯಿಲೆಯಿಂದ ಮಲಗಿದ ಸಂದರ್ಭದಲ್ಲಿ ಅವರ ಮನೆಯ ಮುಂದೆ ಸೇರುವ ಜನ ಸಮೂಹ ಮತ್ತು ಅವರು ಪ್ರಶ್ನಿಸುವ ರೀತಿ ನಮ್ಮ ಸಾಮಾಜಿಕ ಮತ್ತು ಧಾರ್ಮಿಕ ಬದುಕಿನ ನೈಜ ಘಟನೆಗಳೇ ಆಗಿವೆ. ಈ ಸಂದರ್ಭದಲ್ಲಿ ನಡೆದ ಸಂಭಾಷಣೆಯನ್ನು ಇಲ್ಲಿ ಗಮನಿಸಬಹುದು,

' ಯಾಕ್ರಪ್ಪ ಬಂದಿರಿ ಹೀಗೆ !' ಶಾಸ್ತ್ರಿಗಳು ಗಟ್ಟಿಯಾಗಿ ಕೂಗಿದರು ಯಾರೂ ಮಾತನಾಡಲಿಲ್ಲ

ಅಷ್ಟು ಜನವೂ ನಿಶ್ಯಬ್ದವಾಯಿತು. ಶಾಸ್ತ್ರಿಗಳು ಮತ್ತೆ ಅದೇ ಪ್ರಶ್ನೆಯನ್ನು ಕೇಳಿದ ಮೇಲೆ, ಗುಂಪಿನ ಮಧ್ಯದಿಂದ ಒಬ್ಬ ಉತ್ತರ ಕೊಟ್ಟು :

'ಅಧರ್ಮ ವಾಗ್ತಿದೆಯಂತೆ'

' ಏನು ಅಧರ್ಮ ಅಂದರೆ ?'

' ಸ್ವಾಮಿಗಳು ಲೇಡಿ ಡಾಕ್ಟರನ್ನ ಮದುವೆಯಾದರಂತೆ'

'ಯಾರು ಹೇಳಿದರು ನಿಮಗೆ ?'

'ಸ್ವಾಮಿಗಳೇ ಪ್ಯಾಟೆ ಬೀದೀಲಿ ಹೇಳಿದರಂತೆ ಅವರು ಅಲ್ಲಿ ಕೂತಿರೋದು ಕಾಣಿಸ್ತದೆ ಕಾವಿ ಬಟ್ಟೆ ಬಿಟ್ಟು ಬಿಳಿ ಲುಂಗಿ, ಬಿಳಿ ಶರಟು ಯಾಕೆ ಹಾಕ್ಯಂಡ್ ಕುಂತವ್ರೇ ?' .... ಇದ ರೀತಿ ಸಂಭಾಷಣೆ ಮುಂದು ವರೆಯುತ್ತದೆ. (ಗ್ರಹಣ, ಪು-114) ಆದರೆ ಸರೋಜಮ್ಮಳು ಸ್ವಾಮಿಯನ್ನು ಮದುವೆ ಮಾಡಿಕೊಳ್ಳಲು ಒಪ್ಪುವದಿಲ್ಲ. ಆದರೆ 'ಮದುವೆಯಾದದ್ದು ನಿಜ, ನಿಷೇಕವೂ ಆಗಿತ್ತು' ಎಂದು ಹೇಳುವ ಅವಳು ಸ್ವಾಮಿಯ ಸಂಪರ್ಕದಿಂದ ಆದ ಬಸುರನ್ನು ಉಳಿಸಿಕೊಳ್ಳುವ ನಿರ್ಧಾರಕ್ಕೆ ಬರುತ್ತಾಳೆ. ಗ್ರಹಣದ ಹಿನ್ನೆಲೆಯಲ್ಲಿಯೇ ಎಲ್ಲ ಸಂಗತಿಗಳು ಹೊಸದೊಂದು ಅರ್ಥವನ್ನು ಪಡೆದುಕೊಳ್ಳುತ್ತವೆ.

---

**ಅಡಿಟಿಪ್ಪಣಿಗಳು**

೧. (ಭಿತ್ತಿ ಪುಟ ಸಂಖ್ಯೆ : ೩೯೭, ೩೯೮, ೩೯೯.)

೨. (ಭಿತ್ತಿ , ಪುಟ - ೪೦೦)

೩. (ಸಹಸ್ಪಂದನ, ಭೈರಪ್ಪನವರ ಕಾದಂಬರಿಗಳಲ್ಲಿ ಧರ್ಮ)

## ಅಧ್ಯಾಯ ೪

### ರಾಜಕೀಯ ಹಿನ್ನೆಲೆಯಲ್ಲಿ ಮನಷ್ಯ ಬದುಕನ್ನು ಕಟ್ಟಿಕೊಡುವ ಕಾದಂಬರಿಗಳು.

# ತಂತು

'ತಂತು' ಕಾದಂಬರಿ ೯೮೯ ಪುಟಗಳ ವ್ಯಾಪ್ತಿಯನ್ನು ಹೊಂದಿದೆ. ೧೧.೭.೧೯೮೮ರಲ್ಲಿ ಈ ಕಾದಂಬರಿಯನ್ನು ಬರೆಯಲು ಪ್ರಾರಂಭಿಸಿ ೦೪.೧೧.೧೯೮೯ರಲ್ಲಿ ಮುಕ್ತಾಯಗೊಳಿಸಿದ ಬಗ್ಗೆ ಕಾದಂಬರಿಯ ಕೊನೆಯ ಪುಟದಲ್ಲಿ ಸೂಚಿಸಲಾಗಿದೆ. ಕಾದಂಬರಿಯ ಮುನ್ನುಡಿಯಲ್ಲಿ ಭೈರಪ್ಪನವರು ಹೀಗೆ ಹೇಳಿದ್ದಾರೆ: ''೧೯೪೭ರಲ್ಲಿ ನಾನು ಹದಿಮೂರು ವರ್ಷದ ಹುಡುಗ ಪ್ರಭಾತ ಪೇರಿಯಲ್ಲಿ ಮುಂದೆ ನಡೆದು ಭಾಷಣ ಮಾಡಿ ಲಾರಿ ಹತ್ತಿ, ಹೆಂಡದ ಪೀಪಾಯಿಗೆ ತೂತು ಮಾಡಿ ಪೋಲಿಸರಿಂದ ಏಟು ತಿಂದಿದ್ದೆ. ಗಾಂಧೀ, ನೆಹರೂ, ಭೋಸ್, ಚೆಂಗಲರಾಯರೆಡ್ಡಿ ಮೊದಲಾದವರಿಗೆ ಜಯಕಾರ ಕೂಗುವುದರ ಮೂಲಕ ಕನಸು ಕಾಣುತ್ತಿದ್ದೆ. ಸ್ವಾತಂತ್ರ್ಯೋತ್ತರ ಭಾರತದ ನಿಟ್ಟು ನಡೆಗಳನ್ನು ನೋಡುತ್ತಾ ಉದ್ಧಕ್ಕೂ ತೊಳಲಿದ್ದೇನೆ. ಈ ಜೀವನವನ್ನು ಕುರಿತು ಒಂದು ಕಾದಂಬರಿ ಬರೆಯುವ ಒತ್ತಡ ಬಹಳ ದಿನಗಳಿಂದ ಇತ್ತು.'' ಈ ಹೇಳಿಕೆಯೇ ಈ ಕಾದಂಬರಿಯಲ್ಲಿ ರಾಜಕೀಯ ವಿಚಾರಗಳು ಮುಖ್ಯವಾಗಿ ಪ್ರಸ್ತಾಪವಾಗಿವೆ ಎಂಬ ಸೂಚನೆಯನ್ನು ನೀಡುತ್ತದೆ. ಸ್ವಾತಂತ್ರ್ಯೋತ್ತರ ಭಾರತದ ಸಾಮಾಜಿಕ, ರಾಜಕೀಯ ಚಿತ್ರಣ ಈ ಕಾದಂಬರಿಯಲ್ಲಿ ಮೂಡಿ ಬಂದಿದೆ.

''ಮೂರು ತಲೆಮಾರಿನ ಕಥೆ ಇಲ್ಲಿ ಇದ್ದರೂ ರವೀಂದ್ರ ಹಾಗೂ ಅವನ ಮಗ ಅನೂಪ್ ಹೀಗೆ ಎರಡು ತಲೆಮಾರಿನ ಸಂಘರ್ಷದ ದೀರ್ಘ ಕಥೆ ಈ ಕಾದಂಬರಿಯಲ್ಲಿ ಪ್ರಧಾನವಾಗಿ ಚರ್ಚಿತವಾಗಿದೆ, ಮೊದಲನೆಯ ತಲೆಮಾರಿನ ಕಥೆ ನೆನಪುಗಳ ಮೂಲಕ ಕಾದಂಬರಿಯಲ್ಲಿ ನೇಪಥ್ಯದಲ್ಲಿದೆ.'' -೧

ಈ ಕಾದಂಬರಿಯ ವಸ್ತುವನ್ನು ಕುರಿತು ಭೈರಪ್ಪನವರು ಈ ರೀತಿಯಲ್ಲಿ ಹೇಳಿಕೊಂಡಿದ್ದಾರೆ, '' ತನ್ನೂರು ಬಸವನ ಪುರದ ಚೆನ್ನಕೇಶವ ದೇವಾಲಯದಲ್ಲಿದ್ದ ದೊಡ್ಡ ಸರಸ್ವತಿ ವಿಗ್ರಹವನ್ನು ಕಳ್ಳಸಾಗಣೆದಾರರು ಮಾಯ ಮಾಡಿದ್ದರೆಂಬ ಸುದ್ದಿ ತಿಳಿದ ಪತ್ರಿಕಾ ಸಂಪಾದಕ ರವೀಂದ್ರ ಅಲ್ಲಿಗೆ ಹೋಗುತ್ತಾನೆ ಅಲ್ಲಿಂದ ಆರಂಭವಾಗಿ ಇಡೀ ಸ್ವಾಂತ್ರ್ಯೋತ್ತರ ಭಾರತದ ನಾಡಿಯ ಕತೆಯು ಬೆಳೆಯುತ್ತದೆ, ಬೆಂಗಳೂರು, ಬಸವನಪುರ, ಜೋಗಿಹಳ್ಳಿ, ಮೈಸೂರು, ದಿಲ್ಲಿ, ಬನಾರಸ, ಪಟ್ನಾ, ಕಲ್ಕತ್ತಾ, ಸಂಗೀತ, ಶಿಕ್ಷಣ,

ವೃತ್ತಪತ್ರಿಕೆ ಉದ್ಯಮ , ನಿರ್ಯಾತ ಮೊದಲಾದ ವ್ಯಾಪ್ತಿಗಳಿಗೆ ಪಾತ್ರಗಳ ಸ್ವಂತ ಅನುಭವದ ಮೂಲಕ ಜೀವ ಕೊಟ್ಟು ಆಕಾರದ ಐಕ್ಯವನ್ನು ಸಾಧಿಸಿ ಈ ಕಾದಂಬರಿಯು ಸಮಕಾಲೀನ ವಸ್ತುವನ್ನು ಕಲೆಯಾಗಿಸುವ ನಿರ್ಲಿಪ್ತಿಯನ್ನು ಪಡೆದಿದೆ. ''

ಈ ಮೇಲಿನ ಹೇಳಿಕೆಯಲ್ಲಿ ಭೈರಪ್ಪನವರು ಬಳಸುವ 'ನಿರ್ಲಿಪ್ತ' ಮತ್ತು 'ಕಲೆಯಾಗಿಸುವ' ಎಂಬ ಶಬ್ದಗಳನ್ನು ಗಮನಿಸಬೇಕು ಕಾದಂಬರಿಯ ಪಾತ್ರಗಳ ಅನುಭವ ಅವುಗಳ ಸ್ವಾನುಭವವೇ ಆಗಿದೆ ಎಂದು ಭೈರಪ್ಪನವರು ಸೂಚಿಸುತ್ತಾರೆ: ಭೈರಪ್ಪನವರ ಇಚ್ಛೆಮತ್ತು ಉದ್ದೇಶಗಳನ್ನು ಬಿಂಬಿಸುವ ಪಾತ್ರಗಳಾಗಿ ಅವುಗಳು ಬೆಳಯುವುದಿಲ್ಲ ಎಂಬ ಅಂಶವನ್ನು ಇಲ್ಲಿ ಒತ್ತಿ ಹೇಳಿದಂತಿದೆ. ಇನ್ನು ಭೈರಪ್ಪನವರ ಕಾದಂಬರಿಗಳು ವೈಚಾರಿಕ ಅಂಶಗಳನ್ನು ಚೆನ್ನಾಗಿ ಬಿಂಬಿಸಿದಷ್ಟು ಕಲಾತ್ಮಕತೆಯನ್ನು ಬಿಂಬಿಸುವುದಿಲ್ಲ ಎಂಬ ಅಭಿಪ್ರಾಯಕ್ಕೆ 'ಕಲೆಯಾಗಿಸು' ಮನಸ್ಸು ನಿರ್ಲಿಪ್ತವಾಗಿದೆ ಎನ್ನುವ ಪದಗಳ ಮೇಲೆ ಒತ್ತು ಕೊಡುತ್ತಾರೆ. ಈ ನಿರ್ಲಿಪ್ತಿಯಿಂದ ಹೊರತಾದ ಉದ್ದೇಶಗಳಿಂದ ಈ ಕೃತಿರಚನೆಯಾಗಿರುವುದಿಲ್ಲ ಎಂದು ಹೇಳಲು ಪ್ರಯತ್ನಿಸಿದಂತಿದೆ.

ಇದುವರೆಗೆ ಬಂದಿರುವ ಭೈರಪ್ಪನವರ ಕಾದಂಬರಿಗಳಲ್ಲಿ ಗಾತ್ರದಲ್ಲಿ ಹಿರಿದಾದುದು 'ತಂತು'ವೇ ಆಗಿದೆ''' ಸ್ವಾತಂತ್ರ್ಯಾನಂತರದ ಭಾರತದ ಕ್ಷಿಪ್ರ ಗತಿಯ ಬದಲಾವಣೆಯ ಬಗೆಗೆ ಇಷ್ಟು ತನ್ಮಯವಾಗಿ ಓರ್ವ ಲೇಖಕ ವಿಚಾರ ಮಾಡಿರುವುದು ಮಾಹಿತಿ ನೀಡಿರುವುದು, ವಿಶ್ಲೇಷಿಸಿರುವುದು ಈ ಕಾದಂಬರಿಯ ವಿಶೇಷ'' - ೨ ಎಂದು ಡಾ. ಎಸ್. ವಿದ್ಯಾಶಂಕರ ಅಭಿಪ್ರಾಯ ಪಡುತ್ತಾರೆ.

ಗಾಂಧೀಯುಗದ ನಂತರದ ರಾಷ್ಟ್ರ ಮತ್ತು ರಾಜ್ಯದ ರಾಜಕೀಯಗಳ ವಾಸ್ತವ ಚಿತ್ರಣ ಕಾದಂಬರಿಯಲ್ಲಿ ದೊರೆಯುತ್ತದೆ. ಮೌಲ್ಯಗಳು ಪಲ್ಲಟಗೊಳ್ಳುತ್ತಿರುವುದು, ವೈಯಕ್ತಿಕ ಲಾಭಗಳ ಮುಂದೆ 'ಮೌಲ್ಯ'ಗಳನ್ನು ಅಲಕ್ಷಿಸಿ ನಡೆದ ಜನ ಸಮುದಾಯದ ಮನೋವ್ಯಾಪಾರಗಳನ್ನು ವ್ಯಾಪಕ ವಿವರಣೆಗಳೊಂದಿಗೆ, ಆಧಾರಗಳೊಂದಿಗೆ ಕಾದಂಬರಿಕಾರರು ಚರ್ಚೆಗೆ ಒಳಪಡಿಸುತ್ತಾರೆ.

ನೈತಿಕ ಮೌಲ್ಯಗಲನ್ನು ಧಿಕ್ಕರಿಸಿ ನಿಂತ ಸ್ವಾರ್ಥ ರಾಜಕಾರಣಿಗಳು, ಭ್ರಷ್ಟಾಚಾರಕ್ಕೆ ಒಳಗಾಗಿ ರಾಜಕೀಯ ವ್ಯಕ್ತಿಗಳ ತಾಳಕ್ಕೆ ತಕ್ಕ ಹಾಗೆ ಕುಣಿಯುವ ಆಡಳಿತ ವ್ಯವಸ್ಥೆ , ಶಿಕ್ಷಣದ ಮೂಲ ಆಶಯಗಳನ್ನು ಬದಿಗೊತ್ತಿ, ವ್ಯಾಪಾರೀಕರಣ ಗೊಳಿಸುವುದು, ಹರಿಹರೆಯದವರು 'ಸ್ವೇಚ್ಚಾ'ಚಾರಕ್ಕೆ ಒಳಗಾಗುವುದು 'ಸ್ನೇಹ'ವೆಂಬ ಪವಿತ್ರ ಸಂಬಂಧವೂ 'ಸ್ವಾರ್ಥ'ದ ಒಳಸುಳಿಗೆ ಸಿಕ್ಕಿಕೊಳ್ಳುವುದು, ಮನಃಶಾಂತಿಗಿಂತ ಹಣವೇ ಪ್ರಧಾನವೆಂಬ ಆಡಂಬರ ಸಂಸ್ಕೃತಿಗೆ ಜನತೆ ಒಲಿಯುತ್ತಿರುವುದು ಮುಂತಾದ ಅಂಶಗಳನ್ನು ಕಾದಂಬರಿ ಪ್ರಧಾನವಾಗಿ ಚರ್ಚಿಸುತ್ತದೆ.

ಕಾಂಗ್ರೆಸ್ಸಿಗರೇ ಸ್ವತಃ ಗಾಂಧಿ ಪ್ರಣೀತ ತತ್ವಕ್ಕೆ ಮುಖ ತಿರುಗಿಸಿ ಐಷಾರಾಮಿ ಜೀವನ, ಮೋಸ, ಅಧಿಕಾರದಾಹ, ದೇಶದ ಬಡಜನತೆಗೆ ತಂತ್ರ ಕುತಂತ್ರಗಳಿಂದ ನಿರಂತರವಾಗಿ ಮೋಸ ಮಾಡುತ್ತ ನಡೆದಿರುವುದು ಭಾರತದ ಬಹು ಸಂಖ್ಯಾತ ಜನ ತೊಂದರೆಯಲ್ಲಿ ಸಿಲುಕಲು ಕಾರಣವಾಗಿದೆ ಎಂಬ ಅಂಶಗಳನ್ನು ಕಾದಂಬರಿಯಲ್ಲಿ ಗುರುತಿಸಬಹುದು.

ರವೀಂದ್ರನ ತಂದೆ ವೆಂಕಟಸುಬ್ಬಯ್ಯನವರು ಮತ್ತು ಅವನ ತಾಯಿ ಸಾಂತಮ್ಮನವರು ತಾವು

ಉಳಿಸಿದ ಹಣದಲ್ಲಿ ತಮ್ಮ ಊರಿಗೆ ಒಂದು ಆಸ್ಪತ್ರೆ ಬರುವಂತೆ ಮಾಡುತ್ತಾರೆ. ಅದಕ್ಕಾಗಿ ಒಂದು ಎಕರೆ ಭೂಮಿಯನ್ನು ಸರಕಾರಕ್ಕೆ ದಾನವಾಗಿ ಕೊಡುತ್ತಾರೆ. ತಾವು ದಾನಮಾಡಿದ್ದು ಬೇರೆಯವರಿಗೆ ತಿಳಿಯಬಾರದು ಎನ್ನುವ ನಿರ್ಲಿಪ್ತತೆ ಅವರದು. 'ದಾನ'ದಲ್ಲಿ ತೋರಿಕೆ, ಕೀರ್ತಿಯಾಸೆ, ಲಾಭ ಇವಾವುಗಳು ಇಲ್ಲ. ಇಂಥ ಮನೋಭಾವದ ಜನತೆ ಈ ನಾಡಿನಲ್ಲಿ ಇದ್ದುದ್ದಕ್ಕೆ ಬೇಕಾದಷ್ಟು ಆಧಾರಗಳು ದೊರೆಯುತ್ತವೆ. ಹೆಸರನ್ನೆ ಹಾಕಿಕೊಳ್ಳದೇ ಮಹಾಕೃತಿಗಳನ್ನು ರಚಿಸಿ ತೆರೆ ಮರೆಯಲ್ಲಿಯೇ ಉಳಿದ ಲೇಖಕರು, ಕವಿಗಳು ಈ ನಾಡಿನ ಸಾಂಸ್ಕೃತಿಕ ಹಿರಿಮೆಯನ್ನು ಮೆರೆದಿದ್ದಾರೆ. ಸಂಶೋಧಕರಿಗೆ ಈ ವಿಷಯ ಸ್ವಲ್ಪ ತೊಂದರೆಯನ್ನು ನೀಡಬಹುದು. ಆದರೆ ದಾನಿಗಳ ಈ ಮಹತ್ವದ ಗುಣ ಅನುಕರಣೀಯವಾಗಿದೆ. 'ಅಣ್ಣಯ್ಯ'ನಂಥವರಿಗೆ ವಿದ್ಯೆಯನ್ನು ಪಡೆಯಲು ಸಹಾಯ ಮಾಡುವುದು ಮತ್ತು ಅಣ್ಣಯ್ಯ ಅಧ್ಯಾಪಕನಾದ ನಂತರ ಈ ಹಣವನ್ನು ವಾಪಸ್ಸು ಕೊಡಲು ಬಂದಾಗ ನಯವಾಗಿ ಅದನ್ನು ಹಿಂದುರುಗಿಸಿ ತಮ್ಮ ಗುಣ ಶ್ರೀಮಂತಿಕೆಯನ್ನು ಮೆರೆದವರು.

ಇದೇ ರೀತಿ ಸೌದ್ರೆಗೌಡ ದಂಪತಿಗಳು ಕೂಡಾ ''ವಿವೇಕಾನಂದ ಶಾಲೆಗೆ ನೂರು ಇಪ್ಪತ್ತೈದು ಎಕರೆ ಭೂಮಿ ಹಾಗು ಸಾವಿರ ರುಪಾಯಿಗಳನ್ನು ದಾನ ಮಾಡುತ್ತಾರೆ. ಅಣ್ಣಯ್ಯನವರು ಗಾಂಧೀಜಿಯ ವಿಧ್ಯಾಭ್ಯಾಸ ಪದ್ಧತಿಯನ್ನು ಅನುಷ್ಠಾನಕ್ಕೆ ತರಲು ಹೊರಟವರು ಎನ್ನುವ ಕಾರಣಕ್ಕೆ ಸೌದ್ರೆ ದಂಪತಿಗಳು ಅಣ್ಣಯ್ಯನವರನ್ನು ಬೆಂಬಲಿಸುತ್ತಾರೆ. ಆದರೆ ಇದೇ ಸೌದ್ರೆಗೌಡರ ವಂಶಸ್ಥನಾದ ಪರುಶುರಾವೇಗೌಡ ಜಾತಿ ರಾಜಕೀಯವನ್ನು ನಡೆಸುತ್ತಾನೆ. ವಿವೇಕಾನಂದಾ ಶಾಲೆಯನ್ನು ಮುಚ್ಚಿಸಬೇಕೆಂದು ಹಾಲಕೆರೆಗೆ ಸರಕಾರಿ ಶಾಲೆಯನ್ನು ಮಂಜೂರಿ ಮಾಡುತ್ತಾನೆ. ಅಣ್ಣಯ್ಯನಂಥಃ ಸಾತ್ವಿಕ ಚಿಂತನೆಯ ವ್ಯಕ್ತಿಗಳು ದರ್ಪ - ದೌರ್ಜನ್ಯಗಳ ಪ್ರತಿರೂಪವಾದ ಪರುಶರಾಮೇಗೌಡನಂಥ ವ್ಯಕ್ತಿಗಳಿಂದ ಆಘಾತಕ್ಕೆ ಒಳಗಾಗುತ್ತಾರೆ. ಪರುಶರಾಮೇಗೌಡ ಬದಲಾದ ಕಾಲದ ರಾಜಕೀಯ ಪರಿಸ್ಥಿತಿ 'ಮೂರ್ತ' ಸ್ವರೂಪವಾಗಿ ಕಾಣುತ್ತಾನೆ.

ದೇಶದ ಸಾಂಸ್ಕೃತಿಕ ರೂಪಗಳಾದ ದೇವಾಲಯಗಳಲ್ಲಿ 'ವಿಗ್ರಹಗಳ' ಕಳ್ಳತನ ನಡೆಯುವುದದಿಂದು ಮಾಮೂಲು ಸಂಗತಿಯಾಗಿದೆ. ಕೆಲವು ರಾಜಕಾರಣಿಗಳೇ ಹಣದ ಆಸೆಗೆ ಇವುಗಳನ್ನು ಮಾರಲು ಕಳ್ಳತನ ಮಾಡಲು ಕುಮ್ಮಕ್ಕು ನೀಡುವುದು ಇಂದು ಸರ್ವೆಸಮಾನ್ಯವಾಗಿದೆ. ರಾಷ್ಟ್ರದ ಸಾಂಸ್ಕೃತಿಕ ನಾಶವನ್ನು ಕುರಿತು ರವೀಂದ್ರನ ಮೂಲಕ ಚಿಂತನೆಯನ್ನು ನಡೆಸಿದಂತೆ ಕಾದಂಬರಿಯ ವಿವರಗಳು ಬಿಚ್ಚಿಕೊಳ್ಳುತ್ತವೆ.

ದೇವಾಲಯಗಳ ರಕ್ಷಣೆ, ವಿಗ್ರಹಗಳ ರಕ್ಷಣೆ ಮತ್ತು ಅದಕ್ಕಾಗಿ ನಡೆಯುವ ಯಾವುದೇ ಕ್ರಿಯೆ ಈ ದೇಶದ ಸಂಸ್ಕೃತಿಯ ಒಳಿತಿಗೆ ಎಂಬುದು ರವೀಂದ್ರನ ನಂಬುಗೆ.

ಸ್ವಾತಂತ್ರ್ಯ ನಂತರದ ದೇಶದ ರಾಜಕೀಯ ವ್ಯವಸ್ಥೆಯ ಸ್ಥಿತಿಗತಿಗಳನ್ನು ಕಾದಂಬರಿ ಪ್ರಸ್ತಾಪಿಸುತ್ತದೆ ಅದರಲ್ಲೂ ಇಂದಿರಾಗಾಂಧಿಯ ದೇಶದ ಆಳ್ವಿಕೆಯ ಕಾಲ, ದೇವರಾಜ ಅರಸುರವರು ಕರ್ನಾಟಕವನ್ನು ಆಳುತ್ತಿರುವ ಕಾಲಗಳಿಂದ ಮುಂದಿನ ವಿಸ್ತ್ರತ ನೋಟ ಕಾದಂಬರಿಯಲ್ಲಿ ದೊರೆಯುತ್ತದೆ.

'' ಇಂದಿರಾಗಾಂಧಿಯು ರಾಜ್ಯಪಾಲರನ್ನು ಮುಂದೆ ನಾಯಿಗಳಂತೆ ಬಳಸಿಕೊಂಡು ತನ್ನ ಪಕ್ಷದ್ದಲ್ಲದ ರಾಜ್ಯಸರ್ಕಾರಗಳನ್ನು ಕಚ್ಚಿ ಎಳೇಸಿ ಹಾಕುತ್ತಿರುವ ಈ ಸಂದರ್ಭದಲ್ಲಿ ಕೇಂದ್ರ ಹಾಗೂ ರಾಜ್ಯಗಳ ಸಂಬಂಧಗಳನ್ನು ವಿವರಿಸುವ ಮೂರು ಕಂತಿನ ಮಧ್ಯಪ್ರದೇಶದ ಲೇಖನ ಬರೆಯಲು ತಾನು ಪಾಲ್ಕಿವಾಲರ

ಈ ಲೇಖನವನ್ನು ಓದಬೇಕೆಂಬ ನೆನಪಾಗಿ ಪೆನ್ಸಿಲ್ ಹಿಡಿದು ಸರಸರನೆ ಓದತೊಡಗಿದ '' - ೩ ಎಂಬ ಮಾತುಗಳು ಕಾದಂಬರಿಯ ಸಂಗತಿಗಳು ಜರುಗುತ್ತಿರುವದು ಇಂದಿರಾಗಾಂಧಿಯ ಆಳ್ವಿಕೆಯ ಸಂದರ್ಭದಲ್ಲಿ ಎನ್ನುವುದನ್ನು ಸ್ಪಷ್ಟ ಪಡಿಸುತ್ತವೆ.

ರವೀಂದ್ರನಿಗಿರುವ ದೇಶಿ ಸಂಸ್ಕೃತೀಯ ಪ್ರೀತಿ ಅವನ ಹೆಂಡತಿ ಕಾಂತಿಗೆ ಆ ಮಟ್ಟದಲ್ಲಿ ಇಲ್ಲ ಮೊದ ಮೊದಲು ಇವಳಲ್ಲಿ ಆ ಗೌರವದ ಒಂದು ಸಣ್ಣ ಎಳೆಯನ್ನಾದರೂ ಗುರುತಿಸಬಹುದು. ಆದರೆ ಇವಳ ಮಗ ಅನೂಪ್ ಸ್ವೇಚ್ಛಾಚಾರದ ಪ್ರತಿರೂಪ. ಕಾಂತಿ ನಂತರ ರವೀಂದ್ರನಂಥ ತ್ಯಾಗಿ, ಚಿಂತಕನಿಗೆ ದ್ರೋಹ ಮಾಡುವುದು ಸಮಾಜ ನೈತಿಕ ಮೌಲ್ಯಗಳಿಂದ ದೂರ ಸರಿಯುತ್ತಿರುವುದರ ಚಿಹ್ನೆಯಾಗಿದೆ.

## ಸ್ವಾತಂತ್ರ್ಯ ನಂತರದ ಶಿಕ್ಷಣ - ಶಿಕ್ಷಣ ಸಂಸ್ಥೆಗಳು ಮತ್ತು ವ್ಯಾಪಾರೀಕರಣ

ಸ್ವಾತಂತ್ರ್ಯ ನಂತರ ಶಿಕ್ಷಣ ಎಲ್ಲ ಸಮುದಾಯಗಳಿಗೂ ದಕ್ಕುವಂಥಾಗಿರುವದು ಮಹತ್ವದ ಅಂಶ. ಆದರೆ ಉಳ್ಳವರಿಗೆ ದೊರೆಯುವ ಸಕಲ ಸೌಲಭ್ಯಗಳುಳ್ಳ ಪರಿಸರ ಬಡವರಿಗೆ ಇನ್ನು ದೊರೆತಿಲ್ಲ. ಇಂಥ ಸಂದರ್ಭದಲ್ಲಿಯೇ ತಮ್ಮ ಮಕ್ಕಳಿಗೆ ಆಧುನಿಕ ಶಿಕ್ಷಣ ದೊರಕಬೇಕೆನ್ನುವ ಹಪಹಪಿಯಲ್ಲಿ ಮೌಲ್ಯ, ಮಾನವೀಕ ಗುಣವುಳ್ಳ ಶಿಕ್ಷಣ ದೊರಯಬೇಕೆನ್ನುವ ನಿಲುವು ಇಂದು ಕ್ಷೀಣಿಸುತ್ತಿದೆ. ''ಗುರು ವಿಷ್ಣು, ಗುರು ಬ್ರಹ್ಮ.... ಎನ್ನುವ ಗೌರವ ನಶಿಸಿ ಗುರು - ಶಿಷ್ಯ ಸಂಬಂಧದಲ್ಲಿ ಅಶಿಸ್ತು ತಾಂಡವಾಡುತ್ತಿದೆ.

''ಹದಿನಾಲ್ಕು ವರ್ಷದ ಅನೂಪ್ ತರಗತಿಗಳಿಗೆ ಚಕ್ಕರ್ ಹೊಡೆಯುವದು, ಉಪಾಧ್ಯಯರ ಕೈಯಲ್ಲಿ ಜಗಳ ಕಾಯುವುದು ತನ್ನಂಥವರೆ ಒಂದು ಗುಂಪಿನ ಜೊತೆ ಸೇರಿ ಶಾಲೆಯ ಶಿಸ್ತು ನಿಯಮಗಳನ್ನು ಧಿಕ್ಕರಿಸುವುದು.''

ತನ್ನ ಜೊತೆ ಹುಡುಗರೊಂದಿಗೆ ಶಾಲೆಯ ತಾಂತ್ರಿಕ ವಿಭಾಗದಿಂದ ಎಷ್ಟೋ ಉಪಕರಣಗಳನ್ನು ಕದ್ದು ಬ್ರಿಗೇಡ ರಸ್ತೆಯ ಒಂದು ಅಂಗಡಿಗೆ ಮಾರುವುದು. ಬ್ರಿಗೇಡ್ ರೋಡಿನಲ್ಲಿ ಚಿಕನ್ ತಿನ್ನಕ್ಕೆ ಅಂಥ ನಿನ್ನ ಕೇಳಿದ್ದರೆ ಕೊಡ್ತಿದ್ದಿಯಾ ಎಂದು ಅವಳಮ್ಮ ಕಾಂತಿಯನ್ನು ಪ್ರಶ್ನಿಸುವುದು. ಅನೂಪನನ್ನು ಮಗ್ಗಲು ಕುಳ್ಳರಿಸಿ ಕೊಂಡು ಹೇಳಿದಾಗ ಅಹಿಂಸೆ, ಪ್ರಾಣಿದಯೆ, ಬುದ್ಧ, ಜಿನ ಅಂಥ ಪ್ರೀತಿಯಿಂದ ಬಿಡಿಸಿ ಹೇಳ ತೊಡಾಗಿದಾಗಲೆಲ್ಲ ಅವನ ಮುಖದಲ್ಲಿ ಅಪನಂಬಿಕೆಯ ಕಿರುನಗೆ ಮೂಡುತ್ತದೆ. ಅವನ ಸ್ನೇಹಿತರಾದ ಜಗದೀಶ ಆರೋಡ, ವಿಪುಲ್ ಝುವೇರಿ,ಓಂಪ್ರಕಾಶ ಸಭರ್‌ವಾಲ ಜೊತೆ ಸೇರಿ ಚಿಕನ್ ಹೋಟೆಲ್‌ಗೆ ಹೋಗುವದು. ಆಧುನಿಕ ಜನಾಂಗದ ಬದಲಾದ ಮನೋಸ್ಥಿತಿಯನ್ನು ತೋರಿಸುತ್ತದೆ, ಧರ್ಮವೋ, ಅಧರ್ಮವೋ ಸುಖಪಡಬೇಕು ಎನ್ನುವ ಮನೋಭಾವ. ಅನೂಪ್‌ನ ತಂದೆಯನ್ನು ಹೊರತು ಪಡಿಸಿ ಇವನ ಜೊತೆಗಾರ ವಿದ್ಯಾರ್ಥಿಯ ತಂದೆಯರು ವ್ಯಾಪಾರಸ್ಥರು ; ಹಣವುಳ್ಳವರು ಮಕ್ಕಳ ಮೇಲೆ ಅಪಾರ ಮಮತೆಯುಳ್ಳವರು. ಮಕ್ಕಳ ಕಳ್ಳತನವನ್ನು ದೋಷ, ಲೋಪವೆಂದು ಭಾವಿಸದೇ ಶಿಕ್ಷಣ ಸಂಸ್ಥೆಯ ವ್ಯವಸ್ಥೆಯ ಮೇಲೆ ಆರೋಪ ಮಾಡುವುದು, ಹಣದ ಅಹಮಿಕೆಯಲ್ಲಿ ಮಕ್ಕಳಲ್ಲಿಯ ಗುಣಗಳನ್ನು ಬೆಳಸದೇ ಹೋಗುವ ಅಪಾಯವನ್ನು ಸೂಚಿಸುತ್ತದೆ.

ಭಾರತೀಯ ಸಮಾಜದಲ್ಲಿ ಮಾಂಸಾಹಾರಿಗಳು, ಶಾಖಾಹಾರಿಗಳು ಇರುವುದನ್ನು ಕಾಣುತ್ತೇವೆ.

ಕೆಲವು ಪ್ರಾಣಿಗಳಿಗೆ ಶಾಖಾಹಾರವೇ ಪಥ್ಯ, ಇನ್ನು ಕೆಲವು ಪ್ರಾಣಿಗಳಿಗೆ ಮಾಂಸಹಾರವೇ ಪಥ್ಯ. ಮಾಂಸಹಾರವನ್ನು ನಿಷೇಧಿಸಿರುವ ಧರ್ಮಗಳು ಕಡಿಮೆ ಎನ್ನುತ್ತ, ಭೈರಪ್ಪನವರು ರವೀಂದ್ರನ ಮಾತಿನ ಮೂಲಕ ಹೀಗೆ ಹೇಳುತ್ತಾರೆ : '' ವೈದಿಕರು ಮೂಲತಃ ಮಾಂಸಾಹಾರಿಗಳು, ಬುದ್ಧನು ವಿನಾಕಾರಣ ಪ್ರಾಣಿಗಳ ಭೇಟೆಯಾಡುವ ಕ್ಷತ್ರಿಯರ ಹವ್ಯಾಸವನ್ನು ನಿಷೇಧಿಸಿದನೇ ಹೊರತು ಮಾಂಸಭಕ್ಷಣೆಯನ್ನು ನಿಲ್ಲಿಸಲಿಲ್ಲ. ಅವನು ಸತ್ತದ್ದು ಮಾಂಸದ ದೋಷದಿಂದಲೇ ಎಂದು ತಾನು ಓದಿದ್ದು ನೆನಪಿಗೆ ಬಂತು, ವಾಸ್ತವವಾಗಿ ಸಕಲ ಜೀವಿಗಳಲ್ಲೂ ಇರುವ ಜೀವವನ್ನು ಗೌರವಿಸುವ ತಳಹದಿಯ ಮೇಲೆ ಅಹಿಂಸೆಯನ್ನು ಕಟ್ಟುನಿಟ್ಟಾಗಿ ಜಾರಿಗೆ ತಂದವರು ಜೈನರು, ಅವರಿಂದ ಪ್ರಭಾವಿತರಾದ ಬ್ರಾಹ್ಮಣರು ಕ್ರಮೇಣ ಮಾಂಸ ತ್ಯಾಗ ಮಾಡಿದ್ದು ಮಾತ್ರವಲ್ಲ, ಯಜ್ಞಯಾಗಾದಿಗಳಲ್ಲಿ ಪ್ರಾಣಿವಧೆಯನ್ನು ಕೈಬಿಟ್ಟು ಹಿಟ್ಟಿನ ಪಶುವಿನ ಆಹುತಿಯನ್ನು ಆರಂಭಿಸಿದರು. ವಧೆಯನ್ನು ನಿಲ್ಲಿಸಿದರೂ ಅದರ ಸಂಕಲ್ಪವನ್ನು ಉಳಿಸಿಕೊಂಡರೆ ವಧೆಮಾಡಿದಷ್ಟೇ ಪಾಪವೆಂದು ಜೈನರು ಎತ್ತಿ ತೋರಿಸಿದರು... ಒಟ್ಟಿನಲ್ಲಿ ಮಾಂಸ ಭಕ್ಷಣೆ ನಿಷೇಧಿಸುವ ಮಾನವನ ನೀತಿಯ ಬೆಳವಣಿಗೆಯಲ್ಲೊಂದು ಮುಖ್ಯವಾದ ಮಜಲು ಎಂಬುದು ಅವನ ನಂಬಿಕೆ.'' - ೫

ಭಾರತ, ವೈದಿಕ ಸಂಸ್ಕೃತಿ, ಜೈನ, ಬೌದ್ಧ, ಸಂಸ್ಕೃತಿಗಳ ಮಿಶ್ರಣವಾಗಿದೆ. ಒಂದು ಇನ್ನೊಂದರಿಂದ ಮಹತ್ವದ ಅಂಶವಗಳನ್ನು ಪಡೆದುಕೊಂಡಿವೆ. ಸ್ವಾತಂತ್ರ್ಯ ನಂತರದ ಭಾರತೀಯ ಸಂಸ್ಕೃತಿಯ ಮೇಲೆ ಇಸ್ಲಾಂ ಸಂಸ್ಕೃತಿ, ಕ್ರಿಶ್ಚಿಯನ್ ಸಂಸ್ಕೃತಿಗಳು ಪ್ರಭಾವ ಬೀರಿರುವದನ್ನು ಕಾಣಬಹುದು.

''ಮಹಾತ್ಮ ಗಾಂಧೀಜಿಯವರ ಹೋರಾಟವು ಅಹಿಂಸೆಯಿಂದಲೇ ಕೂಡಿತ್ತು ಮಹಾತ್ಮರು ಅಹಿಂಸೆಯ ಆಂದೋಲನವನ್ನು ರಾಷ್ಟ್ರದ ನೈತಿಕ ಹಾಗು ಜೀವನ ವಿಧಾನವನ್ನಾಗಿ ಮಾಡಿದರು.'' - ೬

ಮಹಾತ್ಮರ ಕೊಲೆಯಾದ ನಂತರ ಭಾರತದ ರಾಜಕಾರಣದಲ್ಲಿ ಮತ್ತು ಸಾಮಾಜಿಕ ಬದುಕಿನಲ್ಲಿ ಕ್ಷಿಪ್ರ ಬದಲಾವಣೆಗಳು ಉಂಟಾದವು.

''ದೇಶದ ಆಹಾರ ಶೈಲಿಯೇ ಬದಲಾಯಿಸಿತು ಮೊದಲು ಎಲ್ಲೊ ಅಪರೂಕ್ಕಿದ್ದ ಮಿಲ್ಟ್ರಿ ಹೋಟಲ್‌ಗಳು ಈಗ ವೆಜ್ ನಾನ್‌ವೆಜ್ ಜೊತೆ ಜೊತೆಯಾಗಿಲ್ಲದ ಹೋಟಲ್‌ಗಳು ಕಡೆಮೆ. ಎಷ್ಟೇ ಹೋಟಲ್, ರೆಸ್ಟೋರೆಂಟ್‌ಗಳಲ್ಲಿ ಸಸ್ಯಾಹಾರಿ ಖಾದ್ಯಗಳ ಸಂಖ್ಯೆ ತೀರಾ ಕಡಿಮೆ ಅನೂಚಾನವಾಗಿ ತಿನ್ನದಿರುವ ಬ್ರಾಹ್ಮಣ, ಲಿಂಗಾಯತ, ವೈಶ್ಯ, ಜೈನ ಹುಡುಗರು, ಹುಡುಗಿಯರು ಸಲೀಸಾಗಿ ನಾನವೆಜ್ ರೆಸ್ಟೋರೆಂಟಗಳಿಗೆ ಲಗ್ಗೆ ಹಾಕುತ್ತಾರೆ, ಇಲ್ಲದಿದ್ದರೆ ತಾವು ಹಿಂದುಳಿಯುತ್ತೇವೆ ಎಂಬ ಅಂಜಿಕೆ ! ವರಗಳು ವಧುಪರೀಕ್ಷೆಯ ಸಮಯದಲ್ಲಿ ಮುಂದೆ ನಾವಿಬ್ಬರೂ ಸಂಸಾರ ಹೂಡಿದಾಗ ನಾನ್‌ವೆಜ್ ಆಡುಗೆ ಮಾಡುಕ್ಕೆ ನಿನ್ನ ಆಪೇಕ್ಷೆವಿರಕೂಡದು. ಎಂಬ ಕರಾರು ಹಾಕುತ್ತರಾಂತೆ, ಒಪ್ಪದಿದ್ದರೆ ನಿನ್ನ ಮದುವೆಯಾಗುವದಿಲ್ಲ ಎಂಬ ಅರ್ಥದಲ್ಲಿ ಮಾತನಾಡುತ್ತಾರೆ. ಕಳೆದ ಸಲ ಗುಜರಾತಿಗೆ ಹೋದಾಗ ನೋಡಿದ್ದು : ಶೇಕಡಾ ತೊಂಬತ್ತು ಸಸ್ಯಾಹಾರಿಗಳಿದ್ದು ಆ ಜೈನ, ವೈಷ್ಣವ ನಾಡಿನಲ್ಲಿ ಈಗ ಎಲ್ಲೆಲ್ಲೂ ನಾನ್‌ವೆಜ್ ರೆಸ್ಟೋರೆಂಟಗಳು.''-೭

ರವೀಂದ್ರ ಮಾಂಸ ತಿನ್ನುವಾಗ ಹಸು ಸೀತಮ್ಮನ ನೆನಪು ಉಂಟಾಗುತ್ತದೆ. ಮಾಂಸಾಹಾರ ತನ್ನ ಸಂಸ್ಕೃತಿಗೆ ವಿರುದ್ಧವಾದದು ಎಂಬ ನಂಬಿಕೆ ಅವನದು. ತನ್ನ ಅಜ್ಜಿಯಿಂದ ತನಗೆ ಉಂಟಾದ ಸಂಸ್ಕಾರ

ಅನೂಪನಿಗೆ ಅವನ ಅಮ್ಮ ಕಾಂತಿಯಿಂದ ಉಂಟಾಗಿದ್ದರೆ ಅನೂಪ ಮಾಂಸಾಹಾರಿಯಾಗುತ್ತಿರಲಿಲ್ಲ. ಅವನಿಗೆ ಉಂಟಾದ ಪ್ರಭಾವಗಳೇ ಬೇರೆ. ಕಾಂತಿಯ ಆಧುನಿಕತೆಯ ಪ್ರಭಾವ, ಮಾಧ್ಯಮಗಳಾದ ಟಿ.ವಿ., ಸಿನಿಮಾ ಆರೋಡನಂಥವರ ಪ್ರಭಾವವುಂಟಾದದ್ದರಿಂದ ಮಾಂಸ ಭಕ್ಷಣೆ ಸಹಜ ಮತ್ತು ಅವಶ್ಯವಾದ್ದದೆಂದು ಅನೂಪ ತಿಳಿಯುತ್ತಾನೆ. ಅಪ್ಪನಿಗೆ ಕಾಡುವಂತೆ ಯಾವ ನೈತಿಕ ಸಮಸ್ಯೆಯೂ ಅವನನ್ನು ಭಾದಿಸುವುದಿಲ್ಲ.

ದೇಶದ ಜನತೆಗೆ ತಮ್ಮ ಸಂಸ್ಕೃತಿಯ ಮಹತ್ವ ಚಾರಿತ್ರ್ಯಿಕ ಅಂಶಗಳ ಅರಿವಿಲ್ಲ, ವಿಗ್ರಹಗಳನ್ನು ಮಾರಿ ಲಾಭ ಮಾಡಿಕೊಳ್ಳುವುದು ಪಾಪವೆಂದು ಅವರು ತಿಳಿಯುವಷ್ಟು ಸೂಕ್ಷ್ಮತೆಯನ್ನು ಉಳಿಸಿಕೊಂಡಿಲ್ಲ. ಮುಖ್ಯವಾಗಿ ಇಂಥ ಕೃತ್ಯಗಳಿಗೆಲ್ಲ ರಾಜಕಾರಣಿಗಳು ಭಾಗಿಯಾಗಿರುವದನ್ನು ಕಾದಂಬರಿ ದಾಖಲಿಸುತ್ತದೆ.

ತಂತು ಕಾದಂಬರಿ ಸ್ವಾತಂತ್ರ್ಯಾ ನಂತರ ಭಾರತದ ಗ್ರಾಮೀಣ ಸಂಸ್ಕೃತಿಯಲ್ಲಿ ಉಂಟಾದ ಬದಲಾವಣೆಯನ್ನು ದಾಖಲಿಸುತ್ತದೆ. ಬಿ.ಕೆ.ರವೀಂದ್ರ ತನ್ನ ಗ್ರಾಮಕ್ಕೆ ಹಿಂತಿರುಗಿದಾಗ ಉಂಟಾದ ಬದಲಾವಣೆಯನ್ನು ಅವನು ಗಮನಿಸುತ್ತಾನೆ. ಇದು ಭಾರತದ ಎಲ್ಲ ಹಳ್ಳಿಗಳಲ್ಲಿಯೂ ಉಂಟಾದ ಬದಲಾವಣೆ. ಶಾಂತವಾತವರಣ ಹಳ್ಳಿಯ ವಿಶೇಷ ಹಸಿರು ಗ್ರಾಮದ ಉಸಿರು ಎನ್ನುವ ಮಟ್ಟಿಗೆ ಸಹಜ. ಆದರೆ ಅಲ್ಲಿ ಈಗ ಹಿಪ್ಪೆ, ನೇರಳೆ ಮರಗಳ ತೋಪುಗಳಿಲ್ಲ. '' ತೋಪಿನ ಮರಗಳನ್ನೆಲ್ಲ ಸಂಪೂರ್ಣವಾಗಿ ಸವರಿ ಬೇರು ತೆಗೆದು ಮಟ್ಟಮಾಡಿ ಎಲೆಕ್ಟ್ರಿಕಲ್ ಕಾಲೋನಿಯ ಸೈಟು ಮಾಡಿ ಮನೆಗಳನ್ನು ಕಟ್ಟಿಸಿದ್ದಾರೆ. ಬಸ್ಸು ನಿಲ್ಲುವ ಜಾಗಾದ ಎರಡು ಕಡೆಗಳಿಗೂ ತಗಡಿನ ಕಟ್ಟಡಗಳಲ್ಲಿ ಕಟ್ಟಿದ ಹತ್ತು ಹದಿನೈದು ಇಪ್ಪತ್ತು ಮೂವತ್ತು ಹೋಟೆಲುಗಳು ಬೀಡಿ, ಸಿಗರೇಟ ಪೆಟ್ಟಿಗೆ ಅಂಗಡಿಗಳು, ಒಂದು ಚನ್ನಕೇಶವ ವೈನ್‌ಶಾಪು ಇನ್ನೊಂದು ವೆಂಕಟೇಶ್ವರ ವಿಸ್ಕಿ ಅಂಗಡಿ ಇದೆ. ''

ಹಳ್ಳಿಗಳಲ್ಲಿ ಬೀಡಿ, ಸಿಗರೇಟ್, ಸಾರಾಯಿ ಈಗ ಸಾಮಾನ್ಯ. ಬಿ.ಕೆ. ರವೀಂದ್ರನ ತಂದೆ ತಾಯಿಗಳಾದ '' ಕೌಸಲ್ಯಮ್ಮ ಹಾಗೂ ಸುಬ್ಬರಾಮಯ್ಯನವರ ಪುಣ್ಯ ಸ್ಮರಣೆಗಾಗಿ ಬಸಾಪುರದ ಗ್ರಾಮದ ಶ್ರೀಮಾನ್ ವೆಂಕಟಸುಬ್ಬಯ್ಯನವರು ಹಾಗೂ ಅವರ ಕುಟುಂಬ ಶಾಂತಮ್ಮನವರು ಭೂಮಿ ಮತ್ತು ಒಂದು ಲಕ್ಷ ರೂಗಳ ವೆಚ್ಚದಲ್ಲಿ ಕಟ್ಟಿಸಿಕೊಟ್ಟ ಲೋಕಲ್ ಫಂಡ್ ಆಸ್ಪತ್ರೆ '' ಎಂದು ಸ್ವತಂತ್ರ ಬಂದ ಮೇಲೆ ಮಂತ್ರಿಗಳು ಬಂದು ಉದ್ಘಾಟನೆ ಮಾಡಿದ್ದು ಮತ್ತು ಕರಿ ಅಮೃತಶಿಲೆಯಲ್ಲಿ ಅಕ್ಷರಗಳನ್ನು ಕೆತ್ತಿ ಅದಕ್ಕೆ ಚಿನ್ನದ ಮೆರಗು ಕೊಟ್ಟು ಆಸ್ಪತ್ರೆಯ ಮುಂದುಗಡೆ ಗೋಡೆಯಲ್ಲಿ ಶಿಲೆಯನ್ನು ಎಲ್ಲರಿಗೂ ಕಾಣುವಂತೆ ಹಾಕಿದ್ದರು. ಆದರೆ ರವೀಂದ್ರ ಹಲವು ಕಾಲ ಕಳೆದ ನಂತರ ಬಂದು ನೋಡಿದರೆ ಅಲ್ಲಿ ಆ ಫಲಕವೇ ಇಲ್ಲ. ಅದಕ್ಕೆ ಬದಲಾಗಿ ''ಕರ್ನಾಟಕ ರಾಜ್ಯದ ಆರೋಗ್ಯ ಸಚಿವರಾದ ಶ್ರೀರಾಮೇಗೌಡರು ಮತ್ತು ತಾಲ್ಲೂಕಿನ ಎಂ. ಎಲ್. ಎ. ಗಳಾದ ಹುಲಿಕೆರಿ ಶ್ರೀಕಂಠಗೌಡರು ಬಸವನಪುರ ಗ್ರಾಮಕ್ಕೆ ಭೇಟಿಯಿತ್ತ ಜ್ಞಾಪಕಾರ್ಥವಾಗಿ ಈ ಲೋಕಲ್ ಫಂಡ್ ಆಸ್ಪತ್ರೆಯ ಕಟ್ಟಡವನ್ನು ಮಹಾಜನತೆಯ ಸೇವೆಗೆ ಅರ್ಪಿಸಲಾಯಿತು'' - ೯ ಎಂಬ ಬರಹ ಪ್ರಸ್ತುತ ರಾಜಕಾರಣದಲ್ಲಿರುವ ಎಡಬಿಡಂಗಿತನವನ್ನು, ಕೃತಘ್ನ ಮನೋಭಾವವನ್ನು ಸೂಚಿಸುತ್ತದೆ. ರಾಜಕಾರಣಿಗಳು ತಾವು ಹೇಳಿದ್ದೆ ನಡೆಯಬೇಕು ಎನ್ನುವ ಅಹಂಭಾವವನ್ನು ತಾಳಿದುದು ಮತ್ತು ಅಧಿಕಾರಿಗಳನ್ನು ತಮ್ಮ ತಾಳಕ್ಕೆ ಕುಣಿಯುವ ಹಾಗೆ

ನೋಡಿಕೊಳ್ಳುವುದು ಸಾಮಾನ್ಯವಾಗಿದೆ.

'' ಎಂ. ಎಲ್. ಎ. ಯಾವ ಜಾತಿಯೋನಿರ್ತಾನೋ ಪೋಲೀಸಿನೋರು ಅವನ ಜಾತಿಯೋರಿಗೆ ಮಾತ್ರ ಸಹಾಯ ಮಾಡ್ತಾರೆ ಆ ಜಾತಿಯೋರನ್ನ ಮಾತ್ರ ಪೋಲಿಸ್ ಅಧಿಕಾರಿಯಾಗಿ ಹಾಕಿಸ್ಕೊಂಡಿರ್ತಾರೆ.'' - ೧೦ ಎನ್ನುವ ಮಾತು ಸದ್ಯದ ರಾಜಕಾರಣಕ್ಕೆ ಎಂಥ ಜಾಡ್ಯ ತಗುಲಿದೆ ಎಂಬುದನ್ನು ತಿಳಿಸುತ್ತದೆ.

'' ರಾಜಕೀಯ ವಿಡಂಬನೆ ಅದರಲ್ಲೂ ಮುಖ್ಯವಾಗಿ ಸ್ವಾತಂತ್ರ್ಯ ನಂತರದ ಕಾಲಮಾನದ ಇಂದಿರಾಗಾಂಧೀ ರಾಷ್ಟ್ರದ ಮೇಲೆ ತುರ್ತ ಪರಿಸ್ಥಿತಿಯನ್ನು ಬಲವಂತವಾಗಿ ಹೇರಿದ ಕಾಲಘಟ್ಟದ ರಾಜಕೀಯ ವಿದ್ಯಮಾನಗಳು ಕಾದಂಬರಿಯಲ್ಲಿ ಚರ್ಚೆಗೆ ಒಳಗಾಗಿವೆ.'' - ೧೧

ಕರ್ನಾಟಕದಲ್ಲಿ ದೇವರಾಜ್ ಅರಸು ' ಉಳುವವನೇ ಭೂಮಿಗೆ ಒಡೆಯ ಎಂಬ ಕಾನೂನು' ತಂದ ವಿಷಯ ಕಾದಂಬರಿಯಲ್ಲಿ ಪ್ರಸ್ತಾಪವಾಗಿದೆ. ಈ ಕಾನೂನಿಂದ ಅರ್ಚಕ ವೃತ್ತಿಯನ್ನೇ ಜೀವನಾಧಾರ ಮಾಡಿಕೊಂಡ ಕುಟುಂಬಗಳಿಗೆ ಪೆಟ್ಟು ಬಿದ್ದಿತು. ರಾಮಭಟ್ಟರು ಈ ಕಾನೂನಿನ ಪರಿಣಾಮ ಅರ್ಚಕರಾದ ತಮಗೆ ಮತ್ತು ದೇವಸ್ಥಾನದ ಪೂಜಾವಿಧಾನಗಳಿಗೆ ಎಂಥ ವ್ಯತಿರಿಕ್ತ ಪರಿಣಾಮಗಳನ್ನು ಉಂಟು ಮಾಡಿದೆ ಎಂಬುದನ್ನು ವಿವರಿಸುತ್ತಾದೆ. ಬಿ.ಕೆ.ರವೀಂದ್ರನಂಥ ಇಂಗ್ಲೀಷ ಕಲಿತವರಿಗೆ ಇದು ಅರ್ಥವಾಗುವುದಿಲ್ಲ ಎಂದು ತಿಳಿಸುತ್ತಾರೆ. ವಂಶಾನುಗತವಾಗಿ ಅರ್ಚಕ ವೃತ್ತಿಯನ್ನು ಮಾಡಿಕೊಂಡು ಬಂದ ಕುಟುಂಬಗಳು ದೇವರಾಜ ಅರಸು ಜಾರಿಗೆ ತಂದ ಕಾನೂನಿಂದ ಭೂಮಿಯನ್ನು ಕಳೆದುಕೊಂಡುವು. ಏಕೆಂದರೆ ರೈತರಿಗೆ ಉಳುಮೆ ಮಾಡಲು ಈ ಅರ್ಚಕರು ಭೂಮಿಯನ್ನು ರೈತರ ಸ್ವಾಧೀನಕ್ಕೆ ಒಪ್ಪಿಸಿ ಎಷ್ಟೋ ವರ್ಷಗಳಾಗಿದ್ದವು ಜಮೀನು ಅರ್ಚಕರ ಕುಟುಂಬದಿಂದ ತಪ್ಪಿಹೋದುದಕ್ಕೆ ರಾಮಭಟ್ಟರಿಗೆ ನೋವು, ಹತಾಶಗಳಿವೆ ಕ್ರಾಂತಿಯ ಹೆಸರಿನಲ್ಲಿ ಪರಂಪರಾಗತವಾಗಿ ಬಂದ ಮೌಲ್ಯವನ್ನು ಅರಸರಂಥ ರಾಜಕಾರಣಿಗಳು ಅಳಿಸಿ ಹಾಕಿದರು ಎನ್ನುವ ರೋಷ ಇದೆ.

'' ಈ ದೇವಸ್ಥಾನ ಕಟ್ಟಿಸಿದಾಗ ಇದ್ದ ಅರಸ ಇದಕ್ಕೆ ದತ್ತಿ ಜಮೀನು ಹಾಕಿದ ಅರ್ಚಕರಿಗೆ ಇಷ್ಟು, ಕಸ ಗುಡಿಸೋರಿಗೆ ಇಷ್ಟು, ದಿನಾ ವಾಲಗ ಊದೋರಿಗೆ ಇಷ್ಟು ಅಂತ, ಅದೆಷ್ಟು ನೂರು ವರ್ಷಗಳಿಂದ ಹೀಗೇಯೇ ನಡಿತಿತ್ತು ಆರಸ ಹೋಗಿ ಬೇರೆ ಅರಸ ಬಂದ ಅವನು ಹೋಗಿ ಇನ್ನೊಂದು ಅರಸನ ಮನೆತನ ಆಳಿತು, ಅದು ಹೋಗಿ ಇನ್ನೊಂದು, ಆಮೇಲೆ ತುರುಕರು ಆಳಿದರು, ಮತ್ತೆ ಅರಸರು ಬಂದರು ಯಾರೂ ದೇವರ ದತ್ತಿಯನ್ನು ಮುಟ್ಟುಕ್ಕೆ ಹೋಗಲಿಲ್ಲ. '' - ೧೨

'' ಒಟ್ಟಿನಲ್ಲಿ ಉಳುವವನೇ ಭೂಮಿಗೆ ಒಡೆಯ ಅನ್ನೂ ತತ್ವದಲ್ಲಿ ಶತಮಾನಗಳ ಹಿಂದೆ ಒಬ್ಬ ದೊರೆ ದೇವರ ಕೈಂಕರ್ಯಕ್ಕೆ ಮಾಡಿದ್ದ ವ್ಯವಸ್ಥೆ ಈ ಸರ್ಕಾರ ಕಿತ್ತು ಹಾಕಿ ಪುಣ್ಯ ಕಟ್ಟಿಕೊಂಡಿತು. '' - ೧೩ ಎಂದು ಹೇಳುವಲ್ಲಿ ಅವರ ಅಂತರಂಗದ ನೋವು ಅಭಿವ್ಯಕ್ತಗೊಳ್ಳುತ್ತದೆ.

ಸ್ವಾತಂತ್ರ್ಯನಂತರದ ಭಾರತದಲ್ಲಿ ಬ್ರಷ್ಟಾಚಾರ ಬೆಳೆಯುತ್ತಾ ಬಂದಿದೆ. ದೇವರು, ಧರ್ಮದ ಕಾರ್ಯಗಳಲ್ಲೂ ಅದಕ್ಕೆ ವಿನಾಯಿತಿ ದೊರೆತಿಲ್ಲ. ದೇವಸ್ಥಾನದ ಜಮೀನುಗಳನ್ನು ' ಉಳುವವರಿಗೆ ಜಮೀನು' ಅನ್ನುವ ಕಾನೂನಿನ ಪ್ರಕಾರ ತೆಗದುಕೊಂಡ ನಂತರ ಆರ್ಚಕರಿಗೆ, ದೇವಸ್ಥಾನದ ಪೂಜೆಗೆ ಸಂಬಳವನ್ನು ಗೊತ್ತು ಮಾಡಿದ್ದರು ಅದನ್ನು ತರುವುದಕ್ಕೆ ಲಂಚವನ್ನು ಕೊಡಬೇಕಾದ ಸ್ಥಿತಿ ಇದೆ.

'' ತಿಂಗಳಿಗೆ ಹದಿನೇಳುವರೆ ರೂಪಾಯಿ ಅದ ತರುಕ್ಕೆ ತಾಲ್ಲೂಕಾಫಿಸಿಗೆ ಬಸ್ ಛಾರ್ಜು ಹಾಕ್ಕಂಡು ಹೋಗಿ ಮುಜರಾಯಿ ಗುಮಾಸ್ತನಿಗೆ ಒಂದು, ಸರಾಫನಿಗೆ ಒಂದು ಒಟ್ಟಿನಲ್ಲಿ ಎರಡು ರೂಪಾಯಿ ಲಂಚಕೊಟ್ಟು ಬೆಳಗಿನಂದ ಸಂಜೆ ತನಕ ಕಾಯ್ಕಂಡಿದ್ದು ಕೈಗೆ ಉಳಿಯುವ ಹನ್ನೆರುಡೂವರೆ ರೂಪಾಯಿಯಲ್ಲಿ ದೇವರಿಗೆ ಒಡೆಯಲಿಕ್ಕೆ ಮೂರು ತೆಂಗಿನಕಾಯಿ ಬರಲ್ಲ ಇನ್ನು ಊದಗಡ್ಡಿ-ಕರ್ಪೂರದ ಖರ್ಚು ಅಂತೂ ತಿಂಗಳಿಗೆ ಆರು ರೂಪಾಯಿ ಕೊಡುತ್ತಾರಂತೆ '' ಎಂದು ತಮ್ಮ ಸಂಕಟ ತೋಡಿಕೊಳ್ಳುವ ಅರ್ಚಕ ರಾಮಭಟ್ಟ ಬದಲಾದ ಕಾಲ-ಧರ್ಮದ ಬಗ್ಗೆ ವಿವರಿಸುತ್ತಾರೆ. ಅರ್ಚಕರು ಮುಷ್ಕರ ಮಾಡುವ ಸ್ಥಿತಿಗೆ ಇಳಿದದ್ದು, ಕಸ ಗುಡಿಸೋರಿಗೆ, ಕಕ್ಕಸು ಬಾಚೋವರಿಗೆ ಕೊಡುವಷ್ಟಾದರೂ ತಮಗೆ ಕೊಡಬೇಕೆಂದು ಬೇಡಿಕೆ ಸಲ್ಲಿಸುವುದು. ಕಣ್ಣು ಮುಚ್ಚಿ ಕುಳಿತ ಸರ್ಕಾರ ಇದೆಲ್ಲಾ ಇತ್ತೀಚೆಗೆ ಉಂಟಾದ ಬದಲಾವಣೆ ಎಂದು ರವೀಂದ್ರನಿಗೆ ತಿಳಿಸುವುದು ದೇವಾಲಯದ ಸ್ಥಿತಿಗತಿಗಳನ್ನು ತೆರೆದಿಡುತ್ತಾರೆ.

ಊರಿನ ಪೋಲೀಸ್ ಪಾಟೀಲರಾದ ಚಿಕ್ಕನಂಜಪ್ಪನವರಿಗೆ ದೇವಸ್ಥಾನದ ವಿಗ್ರಹ ಪ್ರಮುಖವಾದುದೆಂದು ಅನಿಸುವುದಿಲ್ಲ. ಒಂದು ಕೋಳಿ ಕಳುವಾದರೂ ಇಡೀ ಕೇರಿಯನ್ನೇ ವಿಚಾರಿಸುವ ಚಿಕ್ಕ ನಂಜಪ್ಪ ಯಾವ ವಿಗ್ರಹ ? ಎಂದು ಪ್ರಶ್ನಿಸಿ ಅದೇನೂ ಅಂತಹ ಮಹತ್ವದ್ದಲ್ಲ ಎನ್ನುವ ಭಾವನೆ ವ್ಯಕ್ತಪಡಿಸುತ್ತಾನೆ.

ದೇವಾಲಯಗಳು, ಧರ್ಮಗಳು ಕೆಲವರ ಹಿತವನ್ನು ಮಾತ್ರ ಕಾಯುತ್ತವೆ ಎನ್ನುವ ನಂಬಿಕೆಯೂ ಇಂತಹ ಅಲಕ್ಷ್ಯಕ್ಕೆ ಕಾರಣವಾಗಿರಬಹುದೇ? ಎಂಬ ವಿಚಾರ ಮೂಡುತ್ತದೆ. ದೇವಾಲಯಗಳು ಭಾರತದ ಸಾಂಸ್ಕೃತಿಕ ಸಂಪತ್ತು, ಶತಮಾನಗಳಿಂದ ನೃತ್ಯ, ಶಿಕ್ಷಣ ಮುಂತಾದವುಗಳು ಅಭಿವೃದ್ಧಿ ಹೊಂದುವುದರಲ್ಲಿ ದೇವಾಲಯಗಳು ಮುಖ್ಯ ಪಾತ್ರ ಹೊಂದಿವೆ. ಶಿಲ್ಪ ಕಲೆಯ ಮುಖಾಂತರ ರಾಮಾಯಣ - ಮಹಾಭಾರತದಂತಹ ಕಾವ್ಯ ವಸ್ತುಗಳಿಗೆ ಅಭಿವ್ಯಕ್ತಿಯನ್ನು ನೀಡಿವೆ. ಅವು ಇತಿಹಾಸವನ್ನು ಬಿಂಬಿಸುವ ಕನ್ನಡಿಗಳು. ಆದ್ದರಿಂದ ದೇವಾಲಯಗಳನ್ನು, ವಿಗ್ರಹಗಳನ್ನು ರಕ್ಷಿಸಿಕೊಂಡು ಬರುವುದು ಭಾರತೀಯರ ಕರ್ತವ್ಯವಾಗಿದೆ ಎಂದು ರವೀಂದ್ರ ತಿಳಿಯುತ್ತಾನೆ. '' ದೇವಸ್ಥಾನಗಳು ಒಂದು ದೇಶದ ಹೆಮ್ಮೆಯ ಸಾಂಸ್ಕೃತಿಕ ಆಸ್ತಿ ಎಂದು ವಿವರಿಸಿ ಆಸ್ವನ್ ಆಣೆಕಟ್ಟನ್ನು ಕಟ್ಟಿದ ಮೇಲೆ ಮುಳುಗುತ್ತಿದ್ದ ಪುರಾತನ ಇಜಿಪ್ತ್ ದೇವಾಲಯವನ್ನು ಅಬು ಸಿಂಬಲ್‌ಗೆ ಸಾಗಿಸಿ ಪುನಃ ಮೊದಲಿನಂತೆ ಕಟ್ಟಿ ಉಳಿಸಿದ್ದಾರೆಂಬ '' ೧೪ ಉದಾಹರಣೆಗಳನ್ನು ಕೊಟ್ಟು ದೇವಾಲಯದ ರಕ್ಷಣೆ ಎಂದರೆ ಒಂದು ನಾಡಿನ ಸಂಸ್ಕೃತಿಯ ರಕ್ಷಣೆ ಎಂಬ ವಿಚಾರವನ್ನು ಗ್ರಾಮದ ವಿದ್ಯಾರ್ಥಿಗಳಿಗೆ ಮತ್ತು ವಯಸ್ಕರಿಗೆ ತಿಳಿಸುತ್ತಾನೆ. ಆದರೆ ಈ ವಿಚಾರವನ್ನು ಕೇಳಿದ ದಲಿತರಾದ ದೇವಪ್ಪ ಚಿಕ್ಕರಾಜ ಮತ್ತು ಮಾದಯ್ಯ ದೇವಾಲಯದ ರಕ್ಷಣೆಗೆ ಯಾವ ಆಸಕ್ತಿಯನ್ನೂ ತಾಳುವುದಿಲ್ಲ. ದೇವಾಲಯಗಳು, ಧರ್ಮಗಳು, ಮೇಲ್ವರ್ಗದವರಿಗೆ ಸಹಾಯ ಮಾಡುತ್ತವೆ, ದೇವಾಲಯ ನಶಿಸಿ ಹೋದರೂ ಚಿಂತೆಯಿಲ್ಲ. ಅಮೇರಿಕಾದೋರಿಗೆ ಹರಾಜು ಹಾಕಿ ಬಂದ ಹಣವನ್ನು ಹರಿಜನ ಕಲ್ಯಾಣ ನಿಧಿಗೆ ಹಾಕಿ ಎಂದು ಹೇಳುವ ಮಾತು ಗಮನಾರ್ಹವಾಗಿದೆ. ತಮ್ಮನ್ನು ದೂರವಿಟ್ಟು ಅವಮಾನ ಮಾಡಿದ ದೇವಾಲಯಗಳನ್ನು ರಕ್ಷಿಸಬೇಕೆಂಬ ಯಾವ ಬಯಕೆಯೂ ಇಲ್ಲಿ ದಲಿತರಿಂದ ವ್ಯಕ್ತವಾಗುವುದಿಲ್ಲ.

'' ಈ ಗುಡೀನ ನಿಮ್ ಜಾತಿಯೋರಿಗೆ ಮಾತ್ರ ಆಲ್ವಾ ಕಟ್ಟಿಕೊಂಡಿದ್ದು ಇದು ? ನಿಮ್ ಜಾತಿ

ಅಂದ್ರೆ ತಲೆ, ಸರ್ಕಾರ ನಡೆಸೋರು ಅದರ ತೋಳು, ಶೆಟ್ಟಿ-ಮಾರವಾಡಿಗಳು ತೊಡೆ, ಒಕ್ಕಲಿಗರು-ಪಕ್ಕಲಿಗರೆಲ್ಲಾ ಕಾಲು ಇನ್ನು ನಾವು ಏನೂ ಅಲ್ಲ ಅಂತ ಅಲ್ವಾ? ಹೆಣ್ಣು ದೇವರಾಗಲೀ, ಗಂಡು ದೇವರಾಗಲೀ ಒಂದೇ ತತ್ವ ಕಳೆದು ಹೋಯಿತು ಅಂದಿರಂತಲ್ಲಾ ಸರಸ್ವತಿ ವಿಗ್ರಹ, ನಮ್ಮ ಜಾತಿಗೆ ಅದರ ದರ್ಶನ ಯಾವತ್ತಾದರೂ ಮಾಡಿಸಿದ್ದೀರಾ?'' ೧೫. ನಾನು ಹೇಳಿದಂಗೆ ನಿಮ್ಮ ಪತ್ರಿಕೆಯಲ್ಲಿ ಒಂದು ಲೇಖನ ಬರೆದು ಹಾಕಿ ಎಂದು ತನ್ನ ಅಭಿಪ್ರಾಯಗಳನ್ನು ಮುಂದುವರೆಸುತ್ತಾನೆ.

''ಇಡೀ ನಿಮ್ಮ ಧರ್ಮ ನಮಗೆ ಸಾವಿರಾರು ವರ್ಷ ಅನ್ಯಾಯ ಮಾಡಿರುವುದಂತೂ ನಿಮಗೆ ಗೊತ್ತು. ಆ ಅನ್ಯಾಯಕ್ಕೆ ಒಂದು ರೂಪು ಕೊಡಬೇಕು ಅಂತಾ ಇಂತಾ ದೇವಸ್ಥಾನನ ದೇಶದ ಎಲ್ಲಾ ಕಡೇಲೂ ಕಟ್ಟಿಸಿದರು. ಈಗ ನಿಮ್ಮೋರಿಗೂ ಅದರಾಗೆ ಇಂಟರೆಸ್ಟ್ ಕಮ್ಮಿಯಾಗೈತೆ. ಅಯ್ಯೋ ಅಂತ ಅಳಾದು ಬಿಟ್ಟು ದೇವಸ್ಥಾನನ ಅಮೇರಿಕಾದೋರಿಗೆ ಹರಾಜ್ ಹಾಕಿ ಮಾರಿಬಿಡಿ.... ಬರುತ್ತಲ್ಲ ದುಡ್ಡ ಅದನ್ನೆಲ್ಲ ಹರಿಜ ಕಲ್ಯಾಣ ನಿಧಿಗೆ ಹಾಕಿ ಇದರಿಂದ ನಿಮ್ಮ ಪಾಪ ತೊಳಕೊಂಡ ಹಂಗಾಯ್ತದೆ.'' ೧೬

ಒಂದು ಜನಾಂಗಕ್ಕೆ ದೇವರು, ದೇವಸ್ಥಾನ, ಧರ್ಮ ಸಾಂಸ್ಕೃತಿಕವಾಗಿ ಮಹತ್ವದ ವಿಷಯಗಳು ಎನಿಸಿದರೆ, ಅದೇ ಮತ್ತೊಂದು ಜನಾಂಗಕ್ಕೆ ಅವು ತಮ್ಮ ಶೋಷಣೆಯ ನೆಲೆ ಎಂದು ಭಾವಿಸುವ ವಿಚಾರ ಇತ್ತೀಚೆಗೆ ದೇಶದಲ್ಲಿ ಮೂಡಿರುವುದನ್ನು ಕಾದಂಬರಿ ದಾಖಲಿಸುತ್ತದೆ.

ಅಣ್ಣಯ್ಯ ಹಾಲುಕೆರೆ ಸೌದ್ರೆಗೌಡ್ರರಿಂದ ದಾನವಾಗಿ ಪಡೆದ ನೂರ ಇಪ್ಪತ್ತು ಎಕರೆ ಭೂಮಿ ಮತ್ತು ಇಪ್ಪತ್ತೈದು ಸಾವಿರ ರೂಪಾಯಿ ನಗದು ತೆಗೆದುಕೊಂಡು ಪ್ರಾರಂಭಿಸಿದ ಶಾಲೆ ಉತ್ತಮ ಆದರ್ಶಗಳನ್ನು ಬಿತ್ತಿ ಬೆಳೆಯುವುದಕ್ಕಾಗಿಯೇ ಜನ್ಮ ತಳೆದದ್ದು. ಗಾಂಧೀಯವರ ಕಲ್ಪನೆಯನ್ನೇ ಆಧಾರವಾಗಿ ಇಟ್ಟುಕೊಂಡದ್ದು. ಆರ್ಥಿಕವಾಗಿ ಸ್ವತಂತ್ರವಾಗಿರಬೇಕು ಮತ್ತು ಸಹಾಯಕ್ಕಾಗಿ ಬೇರೆಯವರ ಬಳಿ ಕೈ ಚಾಚಬಾರದು ಎನ್ನುವ ಆದರ್ಶಗಳನ್ನು ಮೈಗೂಡಿಸಿಕೊಂಡು ಪ್ರಾರಂಭವಾದ ಶಾಲೆ. ಅರ್ಪಣಾಮನೋಭಾವದ ಶಿಕ್ಷಕರನ್ನು ಪಡೆದುಕೊಂಡ ಶಾಲೆಯಲ್ಲಿ ವಿದ್ಯಾರ್ಥಿಗಳಿಗೂ ಶಿಕ್ಷಕರಿಗೂ ಸಾಮೀಪ್ಯದ ಸಂಬಂಧ. ಸಸ್ಯಶಾಸ್ತ್ರದಲ್ಲಿ ಎಂ. ಎಸ್.ಸಿ. ಮಾಡಿರುವ ಶರಭಣ್ಣ, ಮೂವತ್ತು ವರ್ಷದ ಪ್ರಾಯದವರು. ಮೂವತ್ತೆರಡು ವರ್ಷದ ಸೋಮಶೇಖರಾಚಾರ್ ಬಿ. ಎಸ್.ಸಿ., ಬಿ. ಎಡ್ ಮಾಡಿದವರು. ಇಪ್ಪತ್ತೆರಡು ವರ್ಷದ ರಾಮಚಂದ್ರ ಬಿ. ಎ. ಮಾಡಿದವೆರು. ಆಧ್ಯಾತ್ಮದ ಕಡೆಗೆ ಒಲವು ಹೆಚ್ಚು. ಇಂಥ ಶಿಕ್ಷಕ ಸಮುದಾಯ ಭಾರತೀಯ ಸಂಸ್ಕೃತಿಯ ಉತ್ತಮ ಅಂಶಗಳನ್ನು ವಿದ್ಯಾರ್ಥಿಗಳಲ್ಲಿ ಮೂಡಿಸಬೇಕೆನ್ನುವ ಆಶಯವುಳ್ಳವರು. ಇವರ ಜೊತೆಗೆ ಇರುವ ಮತ್ತೊಬ್ಬ ವ್ಯಕ್ತಿ ಎಚ್. ಎಸ್. ಹೊನ್ನತ್ತಿ ಅಥವಾ ಹೇಮಂತ ಹೊನ್ನತ್ತಿ.

ಈ ಆದರ್ಶದ ಶಾಲೆಯನ್ನು ನಡೆಸುವ ಅಣ್ಣಯ್ಯ ಬಸವನಪುರಕ್ಕೆ ಮೂರು ಮೈಲಿ ಸಮೀಪವಿರುವ ಮೂಡಲಿಗೆ ಸೀಗೆಹಳ್ಳಿಯವರು.

ರವೀಂದ್ರ ಪ್ರಾಮಾಣಿಕ ಪತ್ರಕರ್ತನಾಗಿ ದೇಶದ ಸಂಸ್ಕೃತಿಯ ಬಗೆಗೆ ಅಪಾರ ಕಾಳಜಿಯನ್ನು ಹೊಂದಿದ ವ್ಯಕ್ತಿ. ಅವನ ಹೆಂಡತಿ ಕಾಂತಿ. ಆಡಂಬರವನ್ನು ಪ್ರೀತಿಸುವವಳು. ಮಾಂಸಾಹಾರ ತಪ್ಪೆಂದು ಅವಳು ಭಾವಿಸುವುದಿಲ್ಲ. ಮಗನೂ ಕೂಡಾ ತಾಯಿಯ ವಿಚಾರ ಸರಣಿಯನ್ನು ಒಪ್ಪುವವ. ಮತ್ತು ತಾನು

ಮಾಡುವ ಎಲ್ಲಾ ಕ್ರಿಯೆಗಳಿಗೆ ತಾಯಿಯ ಬೆಂಬಲವನ್ನು ಆರ್ಥಿಕ ಸಹಾಯವನ್ನು ಪಡೆದುಕೊಳ್ಳುವ ಜಾಣ.

ರಾಷ್ಟ್ರೀಯ ಕಾಂಗ್ರೆಸ್ ''ಕಾಂಗೈ'' ಆದದ್ದು ಇಂಡಿಕೇಟ್ ಸಿಂಡಿಕೇಟ್‌ಗಳ ಸೆಣಸಾಟದಲ್ಲಿ ಹಳೆಯ ತಲೆಮಾರಿನ ರಾಜಕಾರಣಿಗಳು ಮೂಲೆಗುಂಪಾದುದನ್ನು ಕಾದಂಬರಿ ದಾಖಲಿಸುತ್ತದೆ.

ಈ ಹಳೆ ತಲೆಮಾರಿನ ಜನ ಇದಾರೆ ನೋಡಿ ಸಿಂಡಿಕೇಟ್‌ನೋರು. ಅಂದರೆ ನಿಜಲಿಂಗಪ್ಪ, ಸಂಜೀವರೆಡ್ಡಿ, ಮೊರಾರರ್ಜಿ ದೇಸಾಯಿ, ಕಾಮರಾಜ್ ಈ ಜನಗಳು, ಬ್ಯಾರೆ ಸ್ಟೇಟಿನ ಮಾತು ಬ್ಯಾಡಿ ನಮ್ಮ ಸ್ಟೇಟಿನನೋರನ್ನೇ ತಗಂಡರೆ ನಮ್ಮ ನಿಜಲಿಂಗಪ್ಪನೋರು, ಕರ್ನಾಟಕದ ಧುರೀಣರು. ಏಕೀಕರಣಕ್ಕೆ ಹೊಡೆದಾಡಿದೋರು...... ನಮ್ಮ ಹಳೇ ತಲೆಮಾರಿನ ಜನ ಭಾಳಾ ಮತೀಯವಾದಿಗಳು ಅಂದರೆ ಕಮ್ಯುನಲ್. -೧೭ ಎಂದು ಹೇಳುವ ಎಂ. ಎಲ್. ಎ. ಜಯಪ್ಪಗೌಡ ಇಂದಿರಾಗಾಂಧಿ ಕಾಲದ ರಾಜಕೀಯ ಬಳುವಳಿ. ಅಪ್ಪಟ ರಾಷ್ಟ್ರೀಯ ನಾಯಕರ ಹೋರಾಟವನ್ನು ಕರ್ನಾಟಕ ಏಕೀಕರಣದ ರೂವಾರಿಗಳನ್ನು ತನ್ನದೇ ಆದ ದೃಷ್ಟಿಕೋನದಲ್ಲಿ ವಿಶ್ಲೇಷಿಸುತ್ತಾನೆ.

ಕಾಂಗ್ರೆಸ್ ಹೋಳಾದ ಸಂದರ್ಭದಲ್ಲಿ ಇಂದಿರಾಗಾಂಧಿಯನ್ನು ದೇಶದ ನಾಯಕಿಯೆಂದು ಪತ್ರಕರ್ತರು ಒಪ್ಪಿಕೊಂಡು ಅವಳ ವಿವಿಧ ಭಂಗಿಯ ಚಿತ್ರಗಳನ್ನು ಪತ್ರಿಕೆಯಲ್ಲಿ ಪ್ರಕಟಿಸುವುದು ಆಗಿನ ಹುರುಪಿನ ಕೆಲಸವೇ ಆಗಿತ್ತು.

''ದೇಶ ಕೀ ನೇತಾ, ಹಮಾರೀ ಮಾತಾ ನಮ್ಮೆಲ್ಲರ ಬೆಂಬಲ ನಿಮಗಿದೆ, ದುಷ್ಟರನ್ನು ಧ್ವಂಸ ಮಾಡಿದ ದುರ್ಗಾ ಮಾತೆಯಂತೆ ನೀನು ಬಡವರ ವಿರುದ್ಧ ಕುತಂತ್ರ ಮಾಡುತ್ತಿರುವ ಪಂಚರಾಕ್ಷಸರನ್ನು ಸದೆಬಡಿ, ನಿನ್ನೊಡನೆ ನಾವಿದ್ದೇವೆ.'' ೧೮ ಎಂದು ಆಶ್ವಾಸನೆ ಕೊಡುವ ಭಾರೀ ಜನರ ಗುಂಪುಗಳು ಹಣ ಕೊಟ್ಟು ಜಿಂದಾಬಾದ್ ಹೇಳಿಸುವ ರಾಜಕೀಯ ಇಂದಿರಾಗಾಂಧಿಯ ಕಾಲದಲ್ಲಿ ಪ್ರಾರಂಭವಾಯಿತು.

ಅನೂಪ ಆಧುನಿಕ ಸೌಲಭ್ಯಗಳನ್ನೆಲ್ಲಾ ಅನುಭವಿಸಬೇಕೆನ್ನುವ ಮನಸ್ಸುಳ್ಳ ಹುಡುಗ. ಕ್ಯಾಬರೆ ನೋಡಿ ಸಿಕ್ಕಿ ಹಾಕಿ ಕೊಳ್ಳುತ್ತಾನೆ, ಮಮ್ಮಿಯಿಂದ ವಾರಕ್ಕೊಂದು ಬಾರಿ ಚಿಕನ್ ತಿನ್ನಲು ಇಪ್ಪತ್ತು ರೂಪಾಯಿ ಪಡೆಯುವ ಅನೂಪ ತಂದೆ ಸ್ವಭಾವಕ್ಕೆ ಸಂಪೂರ್ಣ ವಿರುದ್ಧವಾಗಿರುವವನು. ಇಂಗ್ಲೀಷ್ ಮತ್ತು ಹಿಂದಿಯನ್ನು ಚೆನ್ನಾಗಿ ಮಾತನಾಡುವ ಅವನು ತಪ್ಪು ಮಾಡಿದರೂ ಅದನ್ನು ಒಪ್ಪದ ಸ್ವಭಾವದವನು. ಬದಲಾದ ತರುಣರ ಮನೋಭಾವವನ್ನು ಅನೂಪನಲ್ಲಿ ಗುರ್ತಿಸಬಹುದು.

''ನೀನು ಗಂಡನಿಗೆ ಕಾಣದ ಹಾಗೆ ಚಿಕನ್ ತಿನ್ನಕ್ಕೆ ಕೊಡ್ತಿದ್ದ ದುಡ್ಡಿನಲ್ಲಿ ಹೆಂಗಸರ ಬೆತ್ತಲೆ ಅಂಗಗಳನ್ನು ನೋಡಕ್ಕೆ ಹೋಗಿದ್ದಾನೆ ಅನ್ನೂದು ಪೋಲೀಸರೇ ಹೇಳಿದ್ದು ........ ಅದ್ಯಾವ ಆದರ್ಶ ಪತ್ನಿ, ಆದರ್ಶ ಮಾತೆ ಅವಳು ಅಂತ ಅವರಿಗೂ ಕುತೂಹಲ ಹುಟ್ಟಿರುತ್ತೆ, ಅವರು ಚೆನ್ನಾಗಿ ನೋಡ್ತಾರೆ ನಿನ್ನ '' ೧೯ ಎಂದು ಹೆಂಡತಿಯನ್ನು ಕರೆಯುವ ರವೀಂದ್ರನಿಗೆ ಮಗನ ಎಲ್ಲಾ ಸದ್ಗುಣಗಳ ಬೆಳವಣಿಗೆಗೆ ಇವಳದೇ ಪ್ರೋತ್ಸಾಹವೆನ್ನುವ ವ್ಯಂಗವನ್ನು ಇಲ್ಲಿ ಗುರ್ತಿಸಬಹುದು.

ಹೊನ್ನತ್ತಿ ಎಂ. ಟೆಕ್. , ಎಂ.ಬಿ. ಎ. ಮಾಡಿದರೂ ದಿಲ್ಲಿ ಟ್ರಸ್ಟ್ ಕ್ಲಬ್‌ಗೆ ಬೆನೀಫಿಟ್ ಕಛೇರಿ ನಡೆಸಿಕೊಟ್ಟ ರವಿಶಂಕರ್‌ರವರ 'ಭಾಗ್ಯಶ್ರೀ' ರಾಗದಿಂದ ಪ್ರಭಾವಿತರಾಗಿ ತಾನೊಬ್ಬ ಸಂಗೀತಗಾರನಾಗಬೇಕೆಂದು ನಿರ್ಧರಿಸಿದವರು. ದಲಾಲ್ ಎಂಬ ಗೆಳೆಯನು ಸಲಹೆಯ ಮೇರೆಗೆ ಏಕಾಂತ

ಸ್ಥಳ ಆರಿಸಿಕೊಂಡು ಹೋಗಿ ಬೆಟ್ಟಕ್ಕೆ ಬಂದು ನೆಲೆಸಿ ಸಂಗೀತದಲ್ಲಿ ಸಾಧನೆಗೆ ತೊಡಗುತ್ತಾರೆ. ಅಣ್ಣಯ್ಯನವರ ಸಹಾಯಕ್ಕೆ ಋಣ ತೀರಿಸಲು ವಿದ್ಯಾಶಾಲೆಯ ಮಕ್ಕಳಿಗೆ ಸಂಗೀತವನ್ನು ಹೇಳಿಕೊಡುತ್ತಾರೆ. ಇಂಥ ಆದರ್ಶದ ಹೊನ್ನತ್ತಿಗೂ ಮತ್ತು ರವೀಂದ್ರನ ಹೆಂಡತಿ ಕಾಂತಿಗೂ ಏರ್ಪಡುವ ಅನೈತಿಕ ಸಂಬಂಧ ಕಾದಂಬರಿಯಲ್ಲಿ ಗಮನಿಸುವ ವಿಷಯವಾಗಿದೆ. 'ಗಾಂಧಿ ಎಂದರೆ ಅಗೌರವವಾಗಿ ಮಾತನಾಡುವ ಕಾಂತಿ ಎಂದೂ ಸರಳತೆ, ಸತ್ಯ, ನೀತಿ ಇವುಗಳಿಗೆ ಬೆಲೆ ಕೊಟ್ಟವಳಲ್ಲ, ಆಡಂಬರ, ಶ್ರೀಮಂತಿಕೆ ಹೇಗಾದರೂ ದೊರೆಯುವ ಸುಖ ಇವುಗಳಿಗೆ ಮಾರುಹೋದವಳು. ಗಾಂಧಿಯೆಂದರೆ ಅವಳಿಗೆ ಅಸಡ್ಡೆ. ಮೊಪೆಡ್‌ಗೆ ಗಾಂಧಿ ಸೈಕಲ್ ಎನ್ನುತ್ತಿದ್ದಳು ; ಇಪ್ಪತ್ತೆಂಟರ ಆಟದಲ್ಲಿ ಯಾವ ನಂಬರ್ರೂ ಇಲ್ಲದ ಕರ್ಚ ಎಲೆಗಳೇ ಬಂದರೆ ಗಾಂಧಿ ಪಟ್ಟು ಎನ್ನುತ್ತಿದ್ದಳು. ರಿಕ್ತ, ದರಿದ್ರ ಅರ್ಥದಲ್ಲಿ ಮಾತ್ರ ಗಾಂಧಿ ಎಂಬ ಮಾತನ್ನು ಬಳಸುವವಳು. ಇವಳೊಬ್ಬಳೇ ಅಲ್ಲ, ಬಹಳ ಜನರ ತಮಾಷೆ ಭಾಷೆ ಆಗಿರುವುದರಿಂದ ಇವಳೂ ಕಲೀತಿದ್ದಾಳೆ.'' ೨೦ ಎಂಬ ರವೀಂದ್ರನ ಮಾತು ಸ್ವಾತಂತ್ರ್ಯಾನಂತರ ಗಾಂಧಿ ಕೆಲವರ ಕೈಯಲ್ಲಿ ಹೇಗೆ ಅಪಮೌಲ್ಯೀಕರಣಕ್ಕೆ ಒಳಗಾಗಿದ್ದಾನೆ ಎಂಬುದನ್ನು ಸೂಚಿಸುತ್ತದೆ.

ಕಾಂತಿಯ ಜೀವನ ವಿಧಾನ, ಜೀವನ ದೃಷ್ಟಿ ಗಾಂಧಿ ತತ್ವಗಳಿಗೆ ವಿರುದ್ಧವಾಗಿಯೇ ಇದ್ದಂತವುಗಳು. ಇದೇ ರೀತಿ ಪರಶುರಾಮೇಗೌಡನೂ ಕೂಡಾ ಅಣ್ಣಯ್ಯನಂತವನ ಆದರ್ಶವನ್ನು ಹಾಳುಮಾಡಲು ಎಂಥ ಪಿತೂರಿಯಾನ್ನಾದರೂ ಮಾಡಲು ಹೇಸದವನು. ಒಟ್ಟಾರೆ ಗಾಂಧೀ ವಿಚಾರ ಧಾರೆಗೆ ಗಾಂಧೀ ನಾಡಿನ ಪ್ರಜೆಗಳಿಂದಲೇ ಅಪಾಯ ಒದುಗುತ್ತಿರುವದು ತೋರುತ್ತದೆ. ಪರುಶುರಾಮೇಗೌಡನಂತವರು ತನ್ನ ಹಿರಿಯರು ವಿದ್ಯಾ ಶಾಲೆಗೆ ದಾನ ಕೊಟ್ಟ ಜಮೀನನ್ನು ಪುನಃ ಧಕ್ಕಿಸಿಕೊಳ್ಳಬೇಕೆಂದು ಹೊಂಚು ಹಾಕುವುದು. ಇದೇ ಕಾರಣಕ್ಕೆ ಜೋಗಿ ಬೆಟ್ಟದಲ್ಲಿರುವ ಹೊನ್ನತ್ತಿಯವರಿಗೂ ಪೂಜಾರಿ ಒಡೇರಯ್ಯನಿಗೆ ಹಿಂಸೆ ಕೊಡುವುದು ಇಂದಿನ ಆಧುನಿಕ ರಾಜಕಾರಣಿಗಳ, ಅಧಿಕಾರಿಗಳ ವಿಕೃತ ಮುಖವನ್ನು ತೆರೆದಿಡುತ್ತವೆ.

''ಯಾವ ನೆಲಕ್ಕೂ ಸೇರದ ಕೇಂದ್ರೀಯ ಶಾಲೆ, ಯಾವ ನೆಲಕ್ಕೂ ಸೇರದ ಇಂಗ್ಲೀಷ್ ಭಾಷೆ, ಇತರ ಭಾಷೆಗಳವರ ಮನಸ್ಸಿನ ಬೇರನ್ನು ತಟ್ಟದ ಹಿಂದಿ, ಎಲ್ಲೆಲ್ಲೂ ಬಳಕೆಯಲ್ಲಿರುವ ಕೋಕೋಕೋಲಾ, ಐಸ್‌ಕ್ರೀಂ, ಚಿಕನ್, ಕ್ಯಾಬರೆ ಇವುಗಳೊಳಗಿನಿಂದ ಯಾವ ಉತ್ತಮ ಜೀವನವಿಧಾನ ಮೊಳೆತು ಬೆಳೆಯಲು ಸಾಧ್ಯ ? '' ಎಂದು ಚಿಂತಿಸುವ ರವೀಂದ್ರನಿಗೆ ಮಗನನ್ನು ಅಣ್ಣಯ್ಯನವರ ಶಾಲೆಗೆ ಹಾಕಿದರೆ ಸರಿಹೋಗಬಹುದು ಎನ್ನುವ ಭಾವನೆ. ಕಾಂತಿ ವಿರೋಧಿಸಿದರೂ ಕನ್ನಡ ಮಾಧ್ಯಮದ ಶಾಲೆಗೆ ಅವನನ್ನು ಸೇರಿಸಿ ಸುಧಾರಿಸುವ ಆಸೆಯನ್ನು ರವೀಂದ್ರ ತಾಳುತ್ತಾನೆ. ಈ ಶಾಲೆಯಲ್ಲಿ ಅನೂಪ ಉತ್ತಮ ವಾಕ್‌ಪಟುವಾಗಿ ಬೆಳೆಯುತ್ತಾನೆ. ಉತ್ತಮ ಮಾನವಿಯತೆಯನ್ನು ರೂಢಿಸಬೇಕೆನ್ನುವ ಆದರ್ಶದಲ್ಲಿ ಹುಟ್ಟಿಕೊಂಡ ಅಣ್ಣಯ್ಯನವರ ಈ ಶಾಲೆಗೆ ಅನೂಪ ಬೇಗನೇ ಹೊಂದಿಕೊಳ್ಳುತ್ತಾನೆ.

ಅನೂಪ - ಕಾಂತಿ ಸ್ವಾತಂತ್ರ್ಯಾನಂತರ ಉಂಟಾದ ಬದಲಾದ ಜೀವನಶೈಲಿಗೆ ಹೊಂದಿಕೊಳ್ಳುತ್ತಾ ಸಾಗುತ್ತಾರೆ. ಪ್ರಾಮಾಣಿಕತೆ, ಆದರ್ಶ ಎಂಬ ಮೌಲ್ಯಗಳು ಅರ್ಥಹೀನವಾದವುಗಳೆಂಬಂತೆ ಅವರಿಗೆ ತೋರುತ್ತವೆ. ಇವರಿಬ್ಬರಿಗೂ ವಿರುದ್ಧವಾದ ತಾತ್ವಿಕತೆಯನ್ನು ರವೀಂದ್ರ ರೂಢಿಸಿಕೊಂಡಿದ್ದಾನೆ,

ರೂಢಿಸಿಕೊಂಡಿದ್ದಾನೆ ಎನ್ನುವುದಕ್ಕಿಂತ ಸಹಜವಾಗಿ ಅವನಲ್ಲೇ ಪ್ರಾಮಾಣಿಕತೆ, ಸತ್ಯ, ಆದರ್ಶ, ದೇಶೀ ಸಂಸ್ಕೃತಿಯ ಒಲವು ಅವನಲ್ಲಿ ಎದ್ದು ತೋರುತ್ತವೆ. ಹಣವೊಂದೇ ಪ್ರಾಧಾನ್ಯವಾದುದಲ್ಲ. ಎಂಬ ನಿಲುವನ್ನು ಸದಾ ಜಾಗೃತ ಸ್ಥಿತಿಯಲ್ಲಿರಿಸಿಕೊಳ್ಳಲು ಹೆಣಗುತ್ತಾನೆ. ಮಗ ಅನೂಪನನ್ನು ಅಣ್ಣಯ್ಯನವರ ವಿದ್ಯಾಶಾಲೆಗೆ ಕಳುಹಿಸಿ ಗಾಂಧಿಯವರ ಮೂಲ ಶಿಕ್ಷಣದ ಕಲ್ಪನೆಯನ್ನು ಸಾಕಾರಗೊಳಿಸುವ ಪ್ರಯತ್ನ ರವೀಂದ್ರನದು. ವಿದ್ಯೆ ಹಣ ಮಾಡುವ ಸಾಧನವಲ್ಲ. ವ್ಯಕ್ತಿತ್ವವನ್ನು ಅರಳಿಸುವ ಒಂದು ಸಾಧನವಾಗಬೇಕೆಂದು ನಂಬುವ ಅವನಿಗೆ ಆಡಂಬರ ಹಿಡಿಸದು. ಸ್ವಾತಂತ್ರ್ಯಾನಂತರದ ಆಡಳಿತದಲ್ಲಿ ಉಂಟಾದ ಹಾವಳಿ ವಿಪರೀತವಾಗಿದೆ.

# ಮತದಾನ

'ಮತದಾನ' ಎಂಬ ಕಾದಂಬರಿಯ ಹೆಸರೇ ಇದೊಂದು ರಾಜಕೀಯ ವಿಚಾರಗಳಿಗೆ ಸಂಬಂಧಪಟ್ಟ ಕಾದಂಬರಿ ಎಂದು ಸೂಚಿಸುತ್ತದೆ. ಭೈರಪ್ಪನವರು ಬರೆದ ಮೂರನೆಯ ಕಾದಂಬರಿ ಇದು '' ಅವರ ಉಳಿದ ಕಾದಂಬರಿಗಳಿಗಿಂತ ಇಲ್ಲಿ ಕಲ್ಪನಾಂಶ ಹಾಗೂ ತಾತ್ವಿಕಾಂಶಗಳನ್ನು ಕಡಿಮೆಗೊಳಿಸಿ ವಾಸ್ತವಿಕಾಂಶವನ್ನು ಹೆಚ್ಚು ದುಡಿಸಿಕೊಂಡ ಕಾರಣಕ್ಕಾಗಿಯೇ ಮತದಾನದಲ್ಲಿ ಬರುವ ಪಾತ್ರಗಳು ತೊಗುಲುಗೊಂಬೆಯಂತೆ ಶಬ್ದ ರಕ್ತ ಮಾಂಸಗಳಿಂದ ಕೂಡಿದ ಜೀವಂತ ವ್ಯಕ್ತಿಗಳಾಗಿವೆ. ಈ ಕಾರಣಕ್ಕಾಗಿಯೇ ಇವತ್ತಿನ ಸಮಕಾಲೀನ ಕೃತಿಗಳಲ್ಲಿ ಇದಕ್ಕೊಂದು ಮಹತ್ವ ಬಂದಿದೆ! '' ( ಸಹಸ್ಪಂದನ : ೩೦೪೧ ) ಎಂದು ಚೆನ್ನಣ್ಣ ವಾಲೀಕಾರ ಅಭಿಪ್ರಾಯ ಪಡುತ್ತಾರೆ.

ಗಾತ್ರದಲ್ಲಿಯೂ ಮತದಾನ ಚಿಕ್ಕದು. ೧೯೨ ಪುಟಗಳ ಗಾತ್ರದ ಈ ಕಾದಂಬರಿ ಭೈರಪ್ಪನವರ ಇನ್ನುಳಿದ ಕಾದಂಬರಿಗಳಿಗೆ ಹೋಲಿಸಿದರೆ ಚಿಕ್ಕದೆಂದು ತೋರುತ್ತದೆ. ೧೯೬೫ರಲ್ಲಿ ಮೊದಲ ಮುದ್ರಣವನ್ನು ಕಂಡ ಈ ಕಾದಂಬರಿ ಈವರೆಗೆ ಏಳು ಮುದ್ರಣಗಳನ್ನು ಕಂಡಿದೆ.

ಕಾದಂಬರಿಗೆ ಆಯ್ದುಕೊಂಡ ವಸ್ತು ಭಿನ್ನವಾದುದು. ಮುಖ್ಯವಾಗಿ ಇಂದಿನ ರಾಜಕೀಯ ಸಂಸ್ಕೃತಿಯ ವಿವಿಧ ಮುಖಗಳನ್ನು ಆಯಾಮಗಳನ್ನು ಈ ಕಾದಂಬರಿ ಓದುಗನಿಗೆ ಕಟ್ಟಿಕೊಡುತ್ತದೆ. ನಮ್ಮ ಸಮಾಜದ ಒಂದು ಮುಖದ ವಾಸ್ತವಿಕ ಚಿತ್ರಣ ಇಲ್ಲಿದೆ ಎಂದು ಓದುಗನಿಗೆ ನಿಶ್ಚಿತವಾಗಿ ಅನಿಸುತ್ತದೆ. ಸ್ವತಃ ಕಾದಂಬರಿಕಾರರೇ ಕಾದಂಬರಿಯ ವಸ್ತು ವಾಸ್ತವಿಕ ಚಿತ್ರಣವೇ ಆಗಿದೆ ಎಂಬುದನ್ನು ಕಾದಂಬರಿಯ ಮುನ್ನುಡಿಯಲ್ಲಿ ಈ ರೀತಿ ವಿವರಿಸುತ್ತಾರೆ '' ನಿಜವಾದ ವ್ಯಕ್ತಿ ಸಂಸ್ಥೆಗಳನ್ನು ಅಥವಾ ಘಟನೆಗಳನ್ನು ಅನುಸರಿಸಿ ಬರೆಯುವುದು ವಾಸ್ತವಿಕತೆ ಎಂಬ ಶಬ್ದದ ಅರ್ಥವಾದರೆ ಈ ಕಾದಂಬರಿಯು ಆ ಜಾತಿಗೆ ಸೇರಿದುದಲ್ಲ. ಇಂತಹ ಘಟನೆಗಳು ನಡೆಯುವುದು ಅಸಂಭವವೇನಲ್ಲ ಎಂಬ ಅರ್ಥದಲ್ಲಾದರೆ ಇದು ನಮ್ಮ ಸಮಾಜದ ಒಂದು ಮುಖದ ವಾಸ್ತವಿಕ ಚಿತ್ರಣವೇ.'' ('ಮತದಾನ', ಎಸ್. ಎಲ್. ಭೈರಪ್ಪ, ಪು-೨೮) ಎನ್ನುತ್ತಾರೆ ಅಂದರೆ ಕಾದಂಬರಿಯ ಚಿತ್ರಣ ಯಥಾವತ್ತಾದ ಸಂಗತಿಗಳ ವಿವರಣೆಯಂತೂ ಅಲ್ಲ ಕಾದಂಬರಿಕಾರನ ಅನುಭೂತಿಯೊಳಗೆ ಮೂಡಿ ಬಂದ, ರೂಪು ಪಡೆದ ವಾಸ್ತವದ ಚಿತ್ರಣ ಎಂದು ನಾವು ಭಾವಿಸಬಹುದು.

ದೇಶಕ್ಕೆ 'ಸ್ವರಾಜ್ಯ ಬಂದ ಸಂದರ್ಭದಲ್ಲಿ ನಡೆದ ಚುನಾವಣೆಯ ಸಂದರ್ಭವನ್ನು ಈ ಕಾದಂಬರಿ ಚಿತ್ರಿಸುತ್ತದೆ. ಗಾಂಧೀಜಿಯ ಆದರ್ಶವನ್ನೇ ಮೈಮನಗಳಲ್ಲಿ ತುಂಬಿಕೊಂಡ, ಆದರ್ಶ, ನಿಸ್ವಾರ್ಥ ವ್ಯಕ್ತಿ ಡಾ. ಶಿವಪ್ಪ ಈ ಕಾದಂಬರಿಯ ನಾಯಕ. ಬಡವರಿಗೆ ಪುಕ್ಕಟೆಯಾಗಿ ಚಿಕಿತ್ಸೆ ಮಾಡುವ ಮನೋಭಾವ

ಆತನದು ಹಳ್ಳಿಗಳ ಉದ್ಧಾರವೇ ದೇಶಗಳ ಉದ್ಧಾರವೆಂಬ ಗಾಂಧೀಜಿಯ ಮಾತನ್ನು ಅಕ್ಷರಶಃ ಪಾಲಿಸಲು ಸಿದ್ಧನಾಗಿ ನಿಂತವನು. ಸೇವೆ ಪ್ರಮಾಣಿಕತೆಗಳಿಂದ ಜನತೆಗೆ ಒಳಿತನ್ನುಂಟು ಮಾಡಲು ಮನಃಪೂರ್ವಕವಾಗಿ ತನ್ನ ವೃತ್ತಿಯಿಲಿ ತೊಡಗಿಕೊಂಡ ವ್ಯಕ್ತಿ ಶಿವಪ್ಪ. 'ರಂಗಾಪುರವೆಂಬ' ಊರು ಅವನ ಕರ್ಮಭೂಮಿ. 'ಜನತಾಶುಶ್ರೂಷಾಲಯ' ಎಂಬ ಹೆಸರು ಆತನ ಅರ್ಪಣಾ ಮನೋಭಾವಕ್ಕೆ ಸಂಕೇತದಂತಿದೆ. ಸರಳವಾದ ಆತನ ಬದುಕು, ಸೇವಾಮನೋಭಾವ ಔಷಧಿ ಖರ್ಚಿಗಷ್ಟೇ ಹಣವನ್ನು ತೆಗೆದುಕೊಳ್ಳುವ ಈ ವೈದ್ಯರ ಆದರ್ಶ ಓದುಗರನ್ನು ಸೆರೆಹಿಡಿಯುತ್ತದೆ. ಎಂ.ಬಿ.ಬಿ. ಎಸ್. ಓದಲು ಹೇರಳವಾಗಿ ಹಣ ಸುರಿಸಿ ವೃತ್ತಿಗೆ ಸೇರಿದ ನಂತರ ವೃತ್ತಿ ಪಾವಿತ್ರತೆಯನ್ನು ಮರೆತು ಹಣಗಳಿಕೆಯೊಂದೆ ಗುರಿ ಎಂದು ವರ್ತಿಸುವ ಇಂದಿನ ಬಹುಪಾಲು ವೈದ್ಯರಲ್ಲಿ ಡಾ॥ಶಿವಪ್ಪ ನಮಗೆ ತೀರಾ ಹಳಬನಂತೆ, ಗಾಂಧೀಯ ಪ್ರಭಾವದ ನೆರಳಿನಂತೆ ಕಂಡರೆ ಆಶ್ಚರ್ಯವೇನಿಲ್ಲ.

ಡಾಕ್ಟರ್ ವೃತ್ತಿ ಎಂದರೆ ಸಮಾಜದಲ್ಲಿ ತುಂಬಾ ಗೌರವದ ವೃತ್ತಿ. ರಾಜಕಾರಣಿಗಳು ಮುಂತಾದ ಶ್ರೀಮಂತ ಕುಳಗಳು ಡಾಕ್ಟರ ತಮ್ಮ ಅಳಿಯನಾದರೆ ತಮ್ಮ ಘನತೆ ಹೆಚ್ಚುತ್ತದೆ ಎಂದು ಭಾವಿಸಿದ ಕಾಲ. ಈಗ ಇದು ಮತ್ತಷ್ಟು ಅತಿರೇಖಕ್ಕೆ ಹೋಗಿದೆ. ವೈದ್ಯ ವೃತ್ತಿ ಎಂದರೆ ಹೆಚ್ಚು ಹಣ ತರುವ ವೃತ್ತಿ ತಮ್ಮ ಮಗಳು ಸುಖವಾಗಿ ಇರಬಹುದು ಎನ್ನುವ ಲೆಖ್ಖಾಚಾರ ರಾಜಕೀಯವನ್ನೇ ವೃತ್ತಿಯಾಗಿ ಮಾಡಿಕೊಂಡವರು ಡಾಕ್ಟರ್ ಶಿವಪ್ಪನಂಥವರ ಜನಪ್ರಿಯತೆಯನ್ನು ಬಳಸಿಕೊಳ್ಳಬಹುದೆಂಬ ದೂರದೃಷ್ಟಿ ಹೀಗಾಗಿ ಬಹುಪಾಲು ಶ್ರೀಮಂತರು ಡಾಕ್ಟರ್ ಮತ್ತು ಇಂಜನಿಯರ್‌ಗಳನ್ನು ಆಯ್ದುಕೊಳ್ಳಲು ಪ್ರಯತ್ನ ಸುವುದು ಸಾಮಾನ್ಯವಾಗಿದೆ.

ಗ್ರಾಮೀಣ ಭಾಗದ ಸಂಸ್ಕೃತಿಯನ್ನು ಜನರ ನಡವಳಿಕೆಯನ್ನು ಈ ಕಾದಂಬರಿಯಲ್ಲಿ ಲೇಖಕರು ಗುರುತಿಸುತ್ತಾರೆ. ಗ್ರಾಮದ ಜನತೆಗೆ ಶಿಷ್ಟಾಚಾರಗಳಿಗಿಂತ ಹೃದಯವಂತಿಕೆ ಮುಖ್ಯವೆನಿಸುತ್ತದೆ 'ನಮಸ್ಕಾರ' ಎಂದು ಹೇಳಿಕೊಂಡು ಬರುವ ಮಾತಿನ ಶಿಷ್ಟಚಾರ ಹಳ್ಳಿಯವರಲ್ಲಿ ಇಲ್ಲ - ೨ ಎಂಬ ವಿಷಯವನ್ನು ಶಿಂಧನ ಘಟ್ಟದ ಬೋಜಣ್ಣನವರು ಶಿವಪ್ಪನವರನ್ನು ಭೇಟಿಮಾಡಿ ಕನ್ಯೆಯ ಪ್ರಸ್ತಾಪ ಮಾಡುವ ಸಂದರ್ಭದಲ್ಲಿ ಲೇಖಕರು ತಿಳಿಸುತ್ತಾರೆ. ಗ್ರಾಮ ಪರಿಸರದಲ್ಲಿ 'ಶಿಷ್ಟಾಚಾರ' ಗಳಿಗಿಂತ ಆಪ್ತತೆ, ನೇರ ನುಡಿ, ಮಹತ್ವದ ಸಂಗತಿಗಳಾಗುತ್ತವೆ.

ಡಾ॥ಶಿವಪ್ಪ ತಾನು ಅರ್ಜಿಸಿಕೊಂಡು ಬಂದ ವೈದ್ಯ ಜ್ಞಾನವೆಲ್ಲ ಹಳ್ಳಿಗರಿಗೆ ಉಪಯೋಗವಾಗಬೇಕು. ತನ್ನ ಸೇವೆ ಹಳ್ಳಿಗೇ ಮೀಸಲು ಇದಕ್ಕೆ ಏನೇ ಅಡ್ಡಿಯಾದರೂ ಅದನ್ನು ತಿರಸ್ಕರಿಸಲು ತಾನು ಸಿದ್ಧ ಎಂಬುದನ್ನು ತನ್ನ ಮದುವೆಯ ಪ್ರಸ್ತಾಪ ಬಂದಾಗ ಪ್ರಕಟಿಸುತ್ತಾನೆ. ಸಂಬೇಗೌಡ ಬಿನ್‌ರಂಗೇಗೌಡ ಸಾದರವಳ್ಳಿ ಎಂಬ ಉದ್ದನೆಯ ಹೆಸರನ್ನು ಎಸ್. ಆರ್.ಸಾದರವಳ್ಳಿ ಎಂದು ಪರಿವರ್ತಿಸಿಕೊಂಡು ನಾಗರಿಕ ಜೀವನವನ್ನು ನಡೆಸಿಕೊಂಡು ಬಂದ ಇಂಥ ಶ್ರೀಮಂತ ಸಾದರವಳ್ಳಿಯವರ ಕನ್ಯೆಯ ಸಂಬಂಧವನ್ನು ಡಾ. ಶಿವಪ್ಪ ತಿರಸ್ಕರಿಸುತ್ತಾರೆ. ಹಿಂದೊಮ್ಮೆ ವಿಧಾನಸಭೆಯ ಸದಸ್ಯರಾಗಿದ್ದು ಈಗ 'ಜನತಾ ಸೇವಕ ಪಕ್ಷ' ಎಂಬ ಪಕ್ಷ ಕಟ್ಟಿಕೊಂಡು ಈಗ ವಿರೋಧ ಪಕ್ಷದಲ್ಲಿರುವ ಈ ಪ್ರತಿಷ್ಠಿತರ ಸಂಬಂಧ

ಡಾ. ಶಿವಪ್ಪನವರಿಗೆ ಬೇಡವಾಗುವುದು ತಾನು ಮದುವೆಯ ನಂತರ ಬೀಗರ ಇಚ್ಛೆಯಂತೆ ಪಟ್ಟಣದಲ್ಲಿದ್ದುಕೊಂಡು ಹಣಗಳಿಸಬೇಕಾಗುತ್ತದೆ ಎಂಬುದು ಮತ್ತು ಸಾದರವಳ್ಳಿಯವರ ಮಗಳು ಸುನಂದೆ ಕುರೂಪಿಯೇ ಆಗಿದ್ದಳು.

ಮದುವೆಯಾಗುವ ಗಂಡು ವರನೆನಿಸಿಕೊಂಡರೆ ಮದುವೆಯಾಗುವ ಹೆಣ್ಣು ವಧುವೆನಿಸಿಕೊಳ್ಳುತ್ತಾಳೆ. ಮದುವೆ ಪೂರ್ವದಲ್ಲಿ 'ಸ್ತ್ರೀ' ಯನ್ನು 'ಕನ್ಯೆ' ಎಂದು ಕರೆಯುವದು ವಾಡಿಕೆ. 'ಕನ್ಯೆ'ಯನ್ನು ಮದುವೆಯಾಗುವ ಗಂಡು ಮದುವೆಗೆ ಪೂರ್ವದಲ್ಲಿ ಅವಳನ್ನು ನೋಡುವ ಸಂಪ್ರದಾಯವಿದೆ. ವರನಾದವ ಕನ್ಯೆಯ ಮನೆಗೆ ಹೋಗಿ ಅವಳನ್ನು ನೋಡಿ ತನ್ನ ಮೆಚ್ಚುಗೆಯನ್ನು ಅಥವಾ ಮೆಚ್ಚುಗೆಯಾಗದ್ದನ್ನು ಸೂಚಿಸುವುದು ಕೆಲವು ಜನಾಂಗಗಳಲ್ಲಿ ರೂಢಿಯಾಗಿದೆ. ಕನ್ಯೆಯನ್ನು ಈ ಸಂದರ್ಭದಲ್ಲಿ ಸರ್ವಾಲಂಕಾರ ಭೂಷಿತೆಯಾಗಿ, ಆಕರ್ಷಕವಾಗಿ ಶೃಂಗರಿಸುತ್ತಾರೆ.

ಡಾ. ಶಿವಪ್ಪ ಶ್ರೀಮಂತರ ಸಂಬಂಧವನ್ನು ಒಪ್ಪದೆ ಮದುವೆಯನ್ನು ಮೂಂದಾಡುತ್ತಾನೆ. ಅವನಿಗೆ ಸಾದರವಳ್ಳಿಯವರೂ, ಶಿವಗೆರಿ ಕಂಟ್ರ್ಯಾಕ್ಟರ್ ರಾಮಲಿಂಗೇಗೌಡರು ಇಬ್ಬರೂ ಒಂದೇ. ಇಬ್ಬರೂ ತನ್ನಿಂದ ಬಯಸುವುದು ಅಳಿಯ ಪರದೇಶಕ್ಕೆ ಹೋಗಿ ಹೆಚ್ಚಿನ ಓದು ಓದಿ ಪಟ್ಟಣದಲ್ಲಿದ್ದು ವೃತ್ತಿಯನ್ನು ಮುಂದುವರಿಸಬೇಕು. ಕೈತುಂಬಾ ಹಣಗಳಿಸಿಬೇಕು. ಸೇವೆಗಿಂತ ಹಣಗಳಿಕೆ ಪ್ರಮುಖವಾದದು ಎಂದು ಇವರು ಭಾವಿಸುವುದು ತನ್ನ ಸೇವೆಗೆ ಅಡ್ಡಿಯಾಗುತ್ತದೆ ಎಂಬ ನಿರ್ಧಾರಕ್ಕೆ ಡಾ. ಶಿವಪ್ಪ ಬರುತ್ತಾರೆ. ರಾಮಲಿಂಗೆಗೌಡರ ಮಗಳು ರಂಗಲಕ್ಷ್ಮಿ ನೋಡಲು ಚೆನ್ನಾಗಿದ್ದರೂ ತನ್ನ ಮನೆತನಕ್ಕೆ ಹೊಂದುವುದಿಲ್ಲ ಎಂದು ನಂತರ ನಿರ್ಣಯಿಸುತ್ತಾನೆ.

ಸಾದರವಳ್ಳಿಯವರ ಮನೆತನ ನಾಗರವಳ್ಳಿಯವರ ಮನೆತನದ ರಾಜಕೀಯ ಬದುಕು. ಸ್ವಾತಂತ್ರ್ಯಾನಂತರದ ರಾಜಕೀಯ ಸ್ಥಿತಿಗತಿಗಳನ್ನು ಅನಾವರಣಗೊಳಿಸುತ್ತದೆ. ಮೊದಲಿನಿಂದಲೂ ಕಾಂಗ್ರೆಸ್ಸಿಗರಾಗಿದ್ದ ನಾಗರವಳ್ಳಿಯವರು ದೂರದೃಷ್ಟಿಯುಳ್ಳವರು ಕಂಟ್ರ್ಯಾಕ್ಟರ್ ರಾಮಲಿಂಗೇಗೌಡರ ಶಕ್ತಿಯನ್ನು ಅರ್ಥಮಾಡಿಕೊಂಡು ತಮ್ಮ ಗೆಲುವಿಗೆ ಬಳಸಿಕೊಂಡ ಮೇಧಾವಿ. ಇದೇ ದೂರದೃಷ್ಟಿ ಸಾದರವಳ್ಳಿಯವರಲ್ಲಿ ಆಸಂದರ್ಭದಲ್ಲಿ ಕಂಡು ಬರುವುದಿಲ್ಲ. ಕೇವಲ ದೊಡ್ಡಸ್ತಿಕೆ. ಅಹಂಭಾವ ಗೋಚರವಾಗುತ್ತದೆ. ರಾಜಕೀಯದಲ್ಲಿ ಕುಶಲತೆ, ತಂತ್ರಗಾರಿಕೆಯೇ ಜಯವನ್ನು ತಂದುಕೊಡುತ್ತದೆ ಎಂಬ ಅರಿವು ಸಾದರವಳ್ಳಿಯವರದು.

ಭಾರತೀಯ ಆಡಳಿತ ವ್ಯವಸ್ಥೆ ರಾಜ ಸಂಸ್ಕೃತಿಯಿಂದ ಪ್ರಜಾ ಸಂಸ್ಕೃತಿಗೆ ಬದಲಾವಣೆಗೊಂಡ ನಂತರದ ಸಂದರ್ಭವನ್ನು ಈ ಕಾದಂಬರಿ ಚಿತ್ರಿಸುತ್ತದೆ. ಭೈರಪ್ಪನವರು ಈ ಕಾದಂಬರಿಯಲ್ಲಿ ಸಮಕಾಲೀನ ರಾಜಕೀಯ ಬದುಕಿನ ವಿವಿಧ ಆಯಾಮಗಳನ್ನು ಹಲವು ಪಾತ್ರಗಳ ಮುಖಾಂತರ ಕಟ್ಟಿಕೊಡುತ್ತಾರೆ. ಈ ಕಾದಂಬರಿಯ ಕತೆಯು ಇಡಿಯಾಗಿ ಅಥವಾ ಇದರಲ್ಲಿ ಬರುವ ಘಟನೆಗಳು ಬಿಡಿ ಬಿಡಿಯಾಗಿ ಸಮಕಾಲೀನ ಹಿಂದೂಸ್ಥಾನದ ಯಾವ ಭಾಗದಲ್ಲಾದರೂ ನಡೆಯಬಹುದು ಎಂದು ಭೈರಪ್ಪನವರು ಕಾದಂಬರಿಯ ಮುನ್ನುಡಿಯಲ್ಲಿ ಸೂಚಿಸುತ್ತಾರೆ.

ಕಾದಂಬರಿಯ ಮುಖ್ಯ ವಸ್ತು ಸ್ವಾತಂತ್ರ್ಯಾನಂತರದ ಬದುಕಿನ ಚಿತ್ರಣ. ಪ್ರಜಾಪ್ರತಿನಿಧಿಗಳಾಗಿ ಆಯ್ಕೆಯಾಗುವಾಗ ಅನುಸರಿಸುವ ಮಾರ್ಗಗಳು, ವ್ಯಕ್ತಿಗಳನ್ನು ತಮ್ಮ ತಮ್ಮ ಲಾಭಕ್ಕೆ ಬಳಸಿಕೊಳ್ಳುವ ತಂತ್ರಗಳು ಶಾಸಕರಿಗೆ ಮಂತ್ರಿಗಳಿಗೆ ಕಂಟ್ರಾಕ್ಟರ್‌ಗಳು ಹೇಗೆ ಸಹಾಯ ನೀಡುತ್ತಾರೆ ಈ ಇಬ್ಬರ ಪರಸ್ಪರ ಮಿಲನ ಇಂದಿನ ರಾಜಕೀಯ ಜೀವನದಲ್ಲಿ ಹೇಗೆ ಕೆಲಸ ಮಾಡುತ್ತದೆ ಎಂಬುದರ ಚಿತ್ರಣ ಇಲ್ಲಿ ದೊರೆಯುತ್ತದೆ.

ರಾಜಕೀಯ ಮಾಡುವ ವ್ಯಕ್ತಿಗಳಿಗೆ ಸೇವೆಗಿಂತ ಹಣಗಳಿಕೆ ಮುಖ್ಯವಾದದು. ಹಣಪ್ರಧಾನ ವ್ಯವಸ್ಥೆ, ಆಡಳಿತ ಪ್ರಧಾನ ವ್ಯವಸ್ಥೆ ಒಂದಕ್ಕೊಂದು ಪೂರಕವಾದಂತವುಗಳು. ಜನಸೇವೆಯೇ ತನ್ನ ಗುರಿ ಎಂದು ಆದರ್ಶವನ್ನು ತಾಳಿ 'ಶಿವಪ್ಪ'ನಂಥವರನ್ನು ಇವರು ತಮ್ಮ ಗೆಲುವಿಗೆ ಒಂದು ಅಸ್ತ್ರವಾಗಿ ಬಳಸಿಕೊಳ್ಳುತ್ತಾರೆ.

ಡಾ. ಶಿವಪ್ಪ ಆದರ್ಶ ವಿದ್ಯಾರ್ಥಿಯಾಗಿದ್ದಾಗಿನಿಂದ ಹಳ್ಳಿಗರ ಸೇವೆ ಮಾಡಬೇಕೆಂದು ಬಯಸಿದ್ದ. ತನ್ನ ಸುತ್ತಮುತ್ತಣ ಹಳ್ಳಿಯ ಜನರ ಬಡತನದ ವಿವರವೆಲ್ಲ ಅವನಿಗೆ ಗೊತ್ತಿತ್ತು ಸರ್ವವಿಧದಲ್ಲಿಯು ಅವರ ಉನ್ನತಿಯಾಗಬೇಕು. ಆದರೆ ಅದನ್ನು ತಾನೊಬ್ಬನೆ ಮಾಡುವುದು ಸಾಧ್ಯವಿಲ್ಲ ತನಗೆ ಶಕ್ಯವಾದುದನ್ನು ಮಾಡಬೇಕು - ೩ ('ಮತದಾನ', ಎಸ್. ಎಲ್. ಭೈರಪ್ಪ, ಪು - ೨೮) ಇಂಥ ಆದರ್ಶ ರಾಜಕಾರಣಿಗಳಲ್ಲಿಯೂ ಇದ್ದಿದ್ದರೆ ಆಧುನಿಕ ಭಾರತದ ಸ್ಥಿತಿಗತಿಯೇ ಬೇರೆಯಾಗುತ್ತಿತ್ತೇನೋ.!

# ಅಡಿಟಿಪ್ಪಣಿ

೧. ಎಸ್. ಎಲ್ ಭೈರಪ್ಪ ಅವರ ಕೃತಿಗಳ ವಿಮರ್ಶೆ : ಸಂ - ಸುಮತಿಂದ್ರ ನಾಡಿಗ್ ಪು - ೨೪೩

೨. ಎಸ್. ಎಲ್ ಭೈರಪ್ಪ ಅವರ ಕೃತಿಗಳ ವಿಮರ್ಶೆ : ಸಂ - ಸುಮತಿಂದ್ರ ನಾಡಿಗ್, ಪು- ೨೫೬

೩. ತಂತು, ಎಸ್. ಎಲ್ ಭೈರಪ್ಪ , ಪು- ೩

೪. ತಂತು, ಎಸ್. ಎಲ್ ಭೈರಪ್ಪ , ಪು- ೬,೭

೫. ತಂತು, ಎಸ್. ಎಲ್ ಭೈರಪ್ಪ , ಪು- ೧೭

೬. ತಂತು, ಎಸ್. ಎಲ್ ಭೈರಪ್ಪ , ಪು- ೧೭

೭. ತಂತು, ಎಸ್. ಎಲ್ ಭೈರಪ್ಪ , ಪು- ೧೭

೮. ತಂತು, ಎಸ್. ಎಲ್ ಭೈರಪ್ಪ , ಪು- ೨೫

೯. ತಂತು, ಎಸ್. ಎಲ್ ಭೈರಪ್ಪ , ಪು- ೨೭

೧೦. ತಂತು, ಎಸ್. ಎಲ್ ಭೈರಪ್ಪ , ಪು- ೨೮

೧೧. ಎಸ್. ಎಲ್. ಭೈರಪ್ಪ ಅವರ ಕೃತಿಗಳ ವಿಮರ್ಶೆ : ಸುಮತಿಂದ್ರ ನಾಡಿಗ್, ಪು-೨೪೫

೧೨. ತಂತು, ಎಸ್. ಎಲ್ ಭೈರಪ್ಪ , ಪು- ೪೪

೧೩. ತಂತು, ಎಸ್. ಎಲ್ ಭೈರಪ್ಪ , ಪು- ೪೫

೧೪. ತಂತು, ಎಸ್. ಎಲ್ ಭೈರಪ್ಪ , ಪು- ೪೬

೧೫. ತಂತು, ಎಸ್. ಎಲ್ ಭೈರಪ್ಪ , ಪು- ೬೪

೧೬. ತಂತು, ಎಸ್. ಎಲ್ ಭೈರಪ್ಪ , ಪು- ೬೫

೧೭. ತಂತು, ಎಸ್. ಎಲ್ ಭೈರಪ್ಪ , ಪು- ೧೦೫

೧೮. ತಂತು, ಎಸ್. ಎಲ್ ಭೈರಪ್ಪ , ಪು- ೧೦೬

೧೯. ತಂತು, ಎಸ್. ಎಲ್ ಭೈರಪ್ಪ , ಪು- ೧೧೯

೨೦. ತಂತು, ಎಸ್. ಎಲ್ ಭೈರಪ್ಪ , ಪು- ೧೫೫

# ಅಧ್ಯಾಯ ೫

## ಮನಶಾಸ್ತ್ರೀಯ ವಿಚಾರಗಳನ್ನು ಬಿಂಬಿಸುವ ಕಾದಂಬರಿಗಳು.

೧. ಅಂಚು

೨. ಸಾಕ್ಷಿ

೩. ನೆಲೆ

೪. ಪರ್ವ

# ಅಂಚು

'ಅಂಚು' ಭೈರಪ್ಪನವರ ಹದಿನೇಳನೆಯ ಕಾದಂಬರಿ, ಮನುಷ್ಯನ ಮೂಲಭೂತ ಪ್ರವೃತ್ತಿಗಳ ಶೋಧವನ್ನು ಈ ಕಾದಂಬರಿಯಲ್ಲಿ ಗುರುತಿಸಬಹುದು. ಈ ಕಾದಂಬರಿಯ ನಾಯಕಿ 'ಅಮೃತಾ' ಕನ್ನಡ ಸಾಹಿತ್ಯದ ಉಪನ್ಯಾಸಕಿ ಒಂದು ಕಾಫಿ ಎಸ್ಟೇಟನ ಒಡತಿ, ಡಾಕ್ಟರೇಟ ಗಳಿಸಿರುವ ಚುರುಕು ಬುದ್ದಿಯ ಚುರುಕು ಕಣ್ಣುಗಳ ವಿದ್ಯಾವಂತೆ. ಅವಳ ಬದುಕಿನಲ್ಲಿ ಆಕಸ್ಮಿಕವೆಂಬಂತೆ ಸೋಮಶೇಖರ ಪ್ರವೇಶಿಸುತ್ತಾನೆ. ಅವನ ಜೊತೆಗಿನ ಸಂಬಂಧ ಅವಳಿಗೊಂದು ಆಸರೆಯಾಗಿ ನಿಲ್ಲುತ್ತದೆ. ಅವನು ಬೇರೆಯವರ ಮನಸ್ಸನ್ನು ಅರಿಯಬಲ್ಲ ಚತುರ. ಅಮೃತಳಾ ಜೊತೆ ಗಾಢ ಬಣ್ಣಕ್ಕಿಂತ ತಿಳಿಯಾದ ಬಣ್ಣ ಸೇರುತ್ತದೆ ಎಂದು ತಿಳಿದುಕೊಳ್ಳುತ್ತಾನೆ. ಮುಂದುವರೆದು ತಾನು ಜನರ ಮನೋಭಾವನೆಯನ್ನು ಅರ್ಥಮಾಡಿಕೊಂಡಿದ್ದೇನೆ ಎಂದು ತಿಳಿಸುತ್ತ ಈ ರೀತಿ ನುಡಿಯುತ್ತಾನೆ.

> ''ತುಂಬ ವಿದ್ಯಾವಂತ ಜನ ತಿಳಿಬಣ್ಣಗಳನ್ನು ಅಪೇಕ್ಷಿಸುತ್ತಾರೆ.
> ಸೂಕ್ಷ್ಮ ಸುಕುಮಾರ ವಾಸನೆಯನ್ನು ಇಷ್ಟಪಡುತ್ತಾರೆ ವಿದ್ಯೆ ಕಡಿಮೆ ಇರೋರಿಗೆ
> ಎಲ್ಲದರಲ್ಲೂ ಥಾಳ ಬೇಕು. ಬಣ್ಣ ವಾಸನೆ, ರುಚಿ ಎಲ್ಲದರಲ್ಲೂ
> ಏಕದಂ ನಾಲಿಗೆ ಮೂಗುಗಳನ್ನು ಪ್ರಚೋದಿಸುವಷ್ಟು ಹುಳಿ
> ಉಪ್ಪು ಖಾರ ಮಸಾಲೆಗಳು ಅವಿದ್ಯಾವಂತರ ಲಕ್ಷಣ'' ಹೀಗೆ ವಿವರಣೆ ನೀಡುತ್ತಾನೆ.

ಮೈಸೂರಿನ ತನ್ನ ಹಳೆಯ ಮನೆಯಲ್ಲಿ ವಾಸಿಸುತ್ತಿರುವ ಅಮೃತಾಳಿಗೆ ತನ್ನ ಮನೆ ರೀಪೆರಿ ಮಾಡಿಸಿಕೊಳ್ಳುವ ಸಂದರ್ಭದಲ್ಲಿ ಆರ್ಕಿಟೆಕ್ಟ್ ಹಾಗೂ ಕನ್ಸಲೆಂಟ್ ಸೋಮಶೇಖರನ ಪರಿಚಯವಾಗುತ್ತದೆ. ಅಮೃತಾ ಆರ್ಥಿಕವಾಗಿ ಕುಸಿದಿರುವ ಸ್ಥಿತಿಯಿಂದ 'ಅಂಚು' ಕಾದಂಬರಿ ಪ್ರಾರಂಭವಾಗುತ್ತದೆ. ಈ ಕಾದಂಬರಿಯಲ್ಲಿ 'ಅಮೃತಾ'ಳಂಥ ಒಬ್ಬ ಸ್ತ್ರೀ ಕೇಂದ್ರವಾಗಿದ್ದಾಳೆ. ತನ್ನ ಚಿಕ್ಕಮ್ಮ ಮಾಡಿದ ಮೋಸ ಕುತಂತ್ರಗಳಿಂದಾಗಿ ತೀವ್ರವಾದ ಮಾನಸಿಕ ಆಘಾತಗಳಿಗೆ ಒಳಗಾಗಿ ಗಂಡನನ್ನು ದೂರವಿಟ್ಟ ಮೈಸೂರಿನಲ್ಲಿ ಏಕಾಂಗಿಯಾಗಿ ಬದುಕುತ್ತಿರುವ ಅಮೃತಾ ವಿಲಕ್ಷಣ ಮನೋಸ್ಥಿತಿಯನ್ನು ಹೊಂದಿರುತ್ತಾಳೆ.

ಈ ಕಾದಂಬರಿಯ ಅಮೃತಾಳ ಸ್ಥಿತಿಯನ್ನು ಡಾ|| ಸಿ. ಎನ್. ರಾಮಚಂದ್ರನ್‌ರವರು ಈ ರೀತಿ ಗುರುತಿಸುತ್ತಾರೆ.

''ಡಾ|| ಅಮೃತಾಳ ಸ್ಥಿತಿಯನ್ನು ಸ್ಥೂಲವಾಗಿ ಪ್ಯಾರಾನಾಯಿಕ್ ಮೇನಿಕ್ ಡಿಪ್ರೆಶನ್ (Paranotc

manic Depression P.M.D.) ಎಂದು ಗುರುತಿಸಬಹುದು. ಇಂತಹ ಸ್ಥಿತಿಯಲ್ಲಿ ನರಳುವ ವ್ಯಕ್ತಿಗೆ ತನ್ನನ್ನು ಪ್ರೀತಿಸುವವರು ಯಾರು ಇಲ್ಲವೆಂದು ಮತ್ತು ತಾನು ಈ ಜಗತ್ತಿನಲ್ಲಿ ಏಕಾಂಗಿಯೆಂಬ ಭಾವನೆಯಿದ್ದು, ಆ ಭಾವನೆಯ ಒತ್ತಡದಲ್ಲಿ ಸಾವು ಅತ್ಯಂತ ಆಕರ್ಷಕವಾಗಿ ಕಾಣುತ್ತದೆ. ಆದ್ದರಿಂದ ತನ್ನನ್ನು ಸಾವಿನಿಂದ ಬದುಕಿನೆಡೆಗೆ ತರಲೆತ್ನಿಸುವ ಯಾರನ್ನು ಕುರಿತು ಆ ವ್ಯಕ್ತಿಗೆ ಅತ್ಯಂತ ಗಾಢವಾದ ಪ್ರೀತಿ ದ್ವೇಷಗಳೆರಡೂ ಸಮಾನವಾಗಿರುತ್ತವೆ. ಒಂದು ವಿಧದ ವಿಭಜಿತ ವ್ಯಕ್ತಿತ್ವವು ನಿರ್ಮಾಣವಾಗಿ ಅಂತಹ ವ್ಯಕ್ತಿಯು ತನ್ನನ್ನು ಪ್ರೀತಿಸುವವರನ್ನು ಹಾಗೂ ತನ್ನನ್ನು ಕೂಡ ದೈಹಿಕವಾಗಿ ಮಾನಸಿಕವಾಗಿ ಬಾರಿ ಬಾರಿ ತೀವ್ರ ಹಿಂಸೆಗೆ ಗುರಿಪಡಿಸುತ್ತಾನೆ. '' (ಎಸ್ ಎಲ್ ಭೈರಪ್ಪನವರ ಕೃತಿಗಳ ವಿಮರ್ಶೆ, ಸಂ- ಡಾ||ಸುಮತಿಂದ್ರ ನಾಡಿಗ್. ಪು - ೧೧೧,೧೧೨)

ಮೇಲಿನ ಎಲ್ಲ ಲಕ್ಷಣಗಳನ್ನು ಡಾ|| ಅಮೃತಾಳಲ್ಲಿ ಕಾದಂಬರಿಯ ಕೊನೆಯ ವರೆಗೂ ಕಾಣುತ್ತೇವೆ ಅವಳು ಸುಸಂಸ್ಕೃತ ಮಹಿಳೆ. ಅಧ್ಯಾಪಕಿಯಾಗಿ ಗೌರವಾದರಗಳನ್ನು ಸಂಪಾದಿಸಿದಂಥವಳು. ಸಹಜ ಸ್ಥಿತಿಯ ವ್ಯಕ್ತಿತ್ವ, ಶೂನ್ಯ ಸ್ಥಿತಿಯ ವ್ಯಕ್ತಿತ್ವದ ಸ್ಥಿತಿಯನ್ನು ಕಾದಂಬರಿಯಲ್ಲಿ ಗುರುತಿಸಬಹುದಾಗಿದೆ. ಸೋಮಶೇಖರನನ್ನು ಗಾಢವಾಗಿ ಪ್ರೀತಿಸುತ್ತಿದ್ದರು ಅವನನ್ನು ಒಮ್ಮಿಂದೊಮ್ಮೆಲೆ ರೇಗಿಸುತ್ತಾಳೆ. ಹಿಂಸಿಸುತ್ತಾಳೆ, ಕಪಾಳಕ್ಕೆ ಹೊಡೆಯುತ್ತಾಳೆ. ನಂತರ ಶೂನ್ಯ ಸ್ಥಿತಿಯಿಂದ ಬಿಡುಗಡೆಗೊಂಡಾಗ ತನ್ನ ಎಲ್ಲಾ ಕ್ರಿಯೆಗಳಿಗೆ ಪಶ್ಚಾತಾಪ ಪಟ್ಟು ಅವನಲ್ಲಿ ಕ್ಷಮೆಯಾಚಿಸುತ್ತಾಳೆ.

'ಅಂಚು' ಒಂದು ಮನೋ ವೈಜ್ಞಾನಿಕ ಕಾದಂಬರಿ ಅಮೃತಾಳ ನಡವಳಿಕೆಯನ್ನು ಗಮನಿಸಿದ ಸೋಮಶೇಖರನಿಗೆ '' ಈ ಹೆಂಗಸಿಗಿರುವುದು ಮುಂಗೋಪ, ಅತಿ ಕೋಪ ಮಾತ್ರವಲ್ಲ ಸೊಕ್ಕು ಎಂದು ಅವನ ಮನಸ್ಸು ಹೇಳಿತು. '' ( ಅಂಚು, ಪು-೨೩) ಆದರೆ ಜೀವನದಲ್ಲಿ ತನ್ನವರಿಂದಲೇ ಮೋಸಕ್ಕೆ ಒಳಗಾಗಿ ಅಪಾರ ಯಾತನೆಯನ್ನು ಮನಸ್ಸಿನಲ್ಲಿಟ್ಟುಕೊಂಡ ಅವಳಿಗೆ ಮಾನಿಸಿಕ ಹತೋಟಿಯೇ ತಪ್ಪಿಹೋಗಿತ್ತು. ಚಾಮುಂಡಿ ಬೆಟ್ಟದ ಎಡಪಾರ್ಶ್ವಕ್ಕೆ ಹೋಗಿ ಕುಳಿತಾಗ ಅವಳಿಗೆ ನಿಸರ್ಗ ಕಾಣಿಸುವುದು ಹೀಗೆ. '' ಇಡೀ ಪ್ರಪಂಚ ಗಿಡ ಮರ ನದಿ ಸಮುದ್ರ ಚಂದ್ರ ಸೂರ್ಯ ನಕ್ಷತ್ರ ಸಮೂಹಗಳ ವಿಶಾಲ ಆಕಾಶ ಎಲ್ಲವೂ ದುಃಖದ ಬೇಗೆಯಲ್ಲಿ ಕರುಗುತ್ತಿವೆ'' (ಅಂಚು, ಪು-೨೦) ಅನ್ನಿಸುತ್ತದೆ. ತಮ್ಮ ತಮ್ಮ ಅಂತರಂಗದ ಅನುಭವಗಳನ್ನು ಹಂಚಿಕೊಳ್ಳುವ ಸಂದರ್ಭದಲ್ಲಿ ಸೋಮಶೇಖರ ಮದರಾಸಿ ಗೃಹಿಣಿಯ ಜೊತೆ ಕಳೆದ ಸುಖದ ಕ್ಷಣಗಳನ್ನು ಹೇಳುತ್ತಾನೆ. ''ಜೀವನವೆಂದರೆ ಇಂತದೇ ಪ್ರಣಯ, ಉನ್ಮಾದಗಳ ಅಲೆಯ ಮೇಲೆ ತೇಲುವ ಪಯಣ ಅಂತಾ ನಾನು ಭಾವಿಸಿದ್ದೆ ಆ ಎರಡು ವರ್ಷ ಆಕೆ ನನಗೆ ಅಖಂಡ ದೈಹಿಕ ಭಾವುಕ ಸುಖ ಕೊಟ್ಟಳು.'' (ಅಂಚು, ಪು-೨೨) ಎಂದು ಹೇಳುತ್ತಾ ತಬಲಾ ರಿಯಾಜನ ತೋಳಿನಲ್ಲೂ ಅವಳಿರುವ ದೃಶ್ಯವನ್ನು ನೋಡಿದ ನಂತರ ಅವಳ ಸಂಬಂಧವನ್ನು ಕತ್ತರಿಸಿಕೊಂಡೆ, ಎಂದು ಹೇಳುತ್ತಾ ಹೋದಂತೆ ಅಮೃತಾ ಸೋಮಶೇಖರನ ಮೇಲೆ ತೀವ್ರ ಕೋಪ ತಾಳಿ ''ನಾನು ಹೊಕ್ತಿನಿ ನೀವು ಬಂದರೆ ಕರಕೊಂಡು ಹೋಗ್ತಿನಿ'' ಎನ್ನುತ್ತಾಳೆ. ಈ ಮಾತನ್ನು ಕೇಳಿ ಅವಳ ಜೊತೆ ಹೋಗಲಿಕ್ಕೆ ಬೇಸರವಾಗಿ ನಿಮ್ಮ ಪಾಡಿಗೆ

ನೀವು ಹೋಗಬಹುದು ಎಂದಾಗ ಕ್ಷಣವು ನಿಲ್ಲದೇ ಬೆಟ್ಟದ ಮೇಲೆ ಅವನನ್ನು ಒಬ್ಬಂಟಿಯಾಗಿ ಬಿಟ್ಟು ಕಾರನ್ನು ನಡೆಸಿಕೊಂಡು ಬಂದು ಬಿಡುತ್ತಾಳೆ. ಇಂತಹ ಘಟನೆಗಳು ಕಾದಂಬರಿಯಲ್ಲಿ ಹೇರಳವಾಗಿ ದೊರುಕುತ್ತವೆ. ತಾನು ಮಾಡಿದ ತಪ್ಪಿಗೆ ಪಶ್ಚಾತಾಪ ಪಡುತ್ತ ಸೋಮಶೇಖರನ ಜೊತೆಗೆ ಮತ್ತೆ ತನ್ನ ಪ್ರೀತಿಯ ಸಂಬಂಧವನ್ನು ಸ್ಥಾಪಿಸಿಕೊಳ್ಳುತ್ತ ಸಾಗುವ ಅಮೃತಾಳ ವಿಕ್ಷಿಪ್ತ ಮನಸ್ಸು, ಒಮ್ಮಿದೊಮ್ಮಂಗೆ ಸಹಜ ಸ್ಥಿತಿಯಂದ ಬಿಡುಗಡೆಗೊಂಡು ವಿಚಿತ್ರವಾಗಿ ವರ್ತಿಸುವದನ್ನು. ನೋಡಿದಾಗ ಸೋಮಶೇಖರನಿಗೆ ಇದೆಂಥ ರಾಕ್ಷಸ ಹೆಂಗಸು ಎನಿಸುತ್ತದೆ. ''ಶುದ್ಧ ಸ್ವಾರ್ಥದ ಹೆಣ್ಣು ಮೃಗ. ಒಂದು ತಟ್ಟೆಯಲ್ಲಿ ಊಟ ಮಾಡುತ್ತಿರುವಾಗ ತನ್ನ ಹೊಟ್ಟೆ ತುಂಬಿದ ತಕ್ಷಣ ಸಾಥಿಗೆ ಏನಾಗಿದೆ ಎಂಥಾಗಿದೆ ಎಂಬ ಸಹಾನುಪರತೆ ಇಲ್ಲದೆ ತಟ್ಟೆಯನ್ನು ಎತ್ತಿ ಮಣ್ಣಿನ ಮೇಲೆ ಎಸೆದು ಹೋಗುವ ಚಂಡಿ ಎಂಬ ಚಿತ್ರ'' ಅವನಲ್ಲಿ ಮೂಡುತ್ತದೆ. ಅವಳ ಮನಸ್ಸೆ ಅವನಿಗೆ ಅರ್ಥವಾಗುವುದಿಲ್ಲ ''ನೀನು ಗಂಡಸುಬೇಕಾದರೆ ಓಡಿ ನನನ್ನು ಒಪ್ಪಿಕೊಳ್ಳಲೇಬೇಕು'' ಎಂದು ಅಧಿಕಾರಯುತವಾಗಿ ಕೇಳುವ ಅವಳು ತನ್ನ ಮನಸ್ಸನ್ನು ದೇಹವನ್ನು ಒಪ್ಪಿಸಿ ಪ್ರೀತಿಯಿಂದ ಸಹಕರಿಸುತ್ತಲೇ ''ತೀರಲಿಲ್ಲವೇನ್ರಿ ನಿಮ್ಮ ಮೃಗ ತೃಷೆ'' ಎಂದು ಕಠೋರವಾಗಿ ಮಾತನಾಡುತ್ತಾಳೆ.

ಬೊಂಬಾಯಿಯ ಹೆಂಗಸಿನ ಜಾತಿಗೆ ಸೇರಿದವಳು ಎಂದು ತನ್ನನ್ನು ಸೋಮಶೇಖರ ಭಾವಿಸಬಹುದು ಎನ್ನುವ ಆತಂಕ ಅವಳದು ಸಾವು ಮತ್ತು ಕಾಮದ ಬಗ್ಗೆ ಕಾದಂಬರಿಯಲ್ಲಿ ವಿಶೇಷ ಒತ್ತು ಇರುವುದನ್ನು ಗುರುತಿಸಬಹುದು.

ಮಾನಸಿಕ ದೌರ್ಬಲ್ಯದಲ್ಲಿ ಆತ್ಮಹತ್ಯೆಗೆ ಅನೇಕ ಸಲ ಪ್ರಯತ್ನಿಸುತ್ತಾಳೆ. ವಿಲಕ್ಷಣವಾದ ಮನಸ್ಥಿತಿ ಅವಳದು. ಮನಸಿನ ದೌರ್ಬಲ್ಯ ಅವಳನ್ನು ಸಾವಿನ ಅಂಚಿನವರೆಗೆ ಒಯುತ್ತದೆ. '' ಹೋದರೆ ಹೋಗಲಿ ನನ್ನ ಜೀವನ ಯಾರನ್ನೂ ಅವಲಂಬಿಸಿಲ್ಲ. ಯಾರ ಮೇಲೂ ನಿಂತಿಲ್ಲ'' (ಅಂಚು, ಪು -೬೧) ಎಂದು ಭಾವಿಸುವ ಅವಳದು ಒಂಟಿತನದ ಲಹರಿಯಲ್ಲಿ ನಿಶಬ್ದವಾಗಿ ಕೂತಿರುವುದು ಅವಳ ಅಭ್ಯಾಸವಾಗಿರುತ್ತದೆ. ಕೈಲಿ ರಿವಾಲ್ವರ್ ಹಿಡಿದು ಅದರ ನಳಿಕೆಯನ್ನು ಕಿವಿಯ ಮೇಲ್ಭಾಗಕ್ಕೂ ಹೃದಯವಿರುವ ಎದೆಯ ಭಾಗಕ್ಕೂ ಅದುಮಿ ಹಿಡಿದುಕೊಂಡು ಸೋಫದ ಮೇಲೆ ಕೂತಿರುತ್ತಾಳೆ. ಸಾಯುವದಕ್ಕೆ ಸಿದ್ಧವಾಗಿ ಪತ್ರಗಳನ್ನು ಬರೆದಿಟ್ಟು. ಪುನಃ ಹರಿದು ಹಾಕಿ ಹೀಗೆ ಎಷ್ಟೋ ಸಲ ತನ್ನ ದುಃಖಕ್ಕೆ ಶಾಶ್ವತ ವಿದಾಯವೆಂದರೆ ಮರಣವೊಂದೆ ಎಂದು ನಿರ್ಧರಿಸಿ ಮರಣಿಸಲೂ ಆಗದೆ. ಆ ನಿರ್ಧಾರಗಳಿಂದ ಹಿಂದೆ ಸರಿಯುತ್ತಾಳೆ.

ತನಗಾದ ಅನ್ಯಾಯಗಳ ವಿರುದ್ಧ ಬಂಡೇಳುವ ಗುಣ ಅವಳಲ್ಲಿದ್ದರೂ ಅದನ್ನು ಸಾಧಿಸುವ ಏಕಾಗ್ರತೆ ಅವಳಲ್ಲಿ ಇಲ್ಲ. ಮಾತು ಕೃತಿಗಳಿಗೂ ಹೊಂದಾಣಿಕೆಯೇ ಇಲ್ಲದಿರುವುದು ಕಂಡು ಬರುತ್ತದೆ.

ಅಮೃತಾಳ ಮನಃಸ್ಥಿತಿಯ ಚಿತ್ರಣವನ್ನು ಕಾದಂಬರಿಕಾರರು ಆಕರ್ಷಕವಾಗಿಯೇ ಚಿತ್ರಿಸಿದ್ದಾರೆ. ವಿಲಕ್ಷಣ ಮನಸ್ಸಿನ ಈ ಪಾತ್ರ ಓದುಗರನ್ನು ತೀವ್ರ ಕುತೂಹಲದ ಪಾತಳಿಯ ಮೇಲೆ ನಿಲ್ಲಿಸುತ್ತದೆ. ಪ್ರೀತಿಯೇ ಕಾರ್ಯವಾಗಿ, ಪ್ರೀತಿಯೇ ಮೇಲುಗೈಯ್ಯಾಗಿ ಸಾವನ್ನ ಮೆಟ್ಟಿ ನಿಲ್ಲುವುದು ಈ ಕಾದಂಬರಿಯ ಮುಖ್ಯ

ವಿಷಯವಾಗಿದೆ ಈ ರೀತಿಯ ವ್ಯಕ್ತಿಗಳನ್ನು ವಾಸ್ತವ ಬದುಕಿನಲ್ಲಿಯೂ ನಾವು ಗುರುತಿಸಬಹುದಾಗಿದೆ. ಕೌಟುಂಬಿಕ ನೆಲೆಯಲ್ಲಿ ಆಗುವ ಅನ್ಯಾಯಗಳು ಸ್ತ್ರೀ ಸಮುದಾಯವನ್ನೇ ತೀವ್ರ ಆತಂಕಕ್ಕೆ ನಿರಾಶೆಗೆ ತಳ್ಳುತ್ತದೆ.

ಅಮೃತಾಳಿಗೆ ಮದುವೆಯಾದಾಗ ಇಪತ್ತು ವರ್ಷ, ಅವಳಿಗೆ ಹದಿನಾಲ್ಕು ವರ್ಷ ಇರುವಾಗ, ಅವಳ ಅಪ್ಪ ತೀರಿಕೊಳ್ಳುತ್ತಾರೆ. ಅವಳ ಚಿಕ್ಕಮ್ಮ ಜಯಲಕ್ಷ್ಮಿ ಜಾಣ ಹೆಂಗಸು. ಅಮೃತಾಳ ತಾಯಿ ತೀರಿಕೊಂಡಾಗಿನ ಸನ್ನಿವೇಶವನ್ನು, ತಂದೆ ತೀರಿಕೊಂಡಾಗಿನ ಸನ್ನಿವೇಶವನ್ನು ತನ್ನ ಕೃತ್ರಿಮ ಭಾವನೆಗಳನ್ನು ಪ್ರಕಟಿಸುವ ಮೂಲಕ ತನಗೆ ಹೇಗೆ ಬೇಕೋ ಹಾಗೆ ಅನುಕೂಲಕರವಾಗಿಯೇ ಉಪಯೋಗಿಸಿಕೊಳ್ಳುತ್ತಾಳೆ.

ತನ್ನ ಸ್ವಂತ ತಮ್ಮ ರಂಗನಾಥನನ್ನೇ ಅಮೃತಾಳಿಗೆ ಸರಿಯಾದ ಗಂಡು ಎಂದು ನಿರ್ಧರಿಸಿ ಮದುವೆ ಮಾಡಿಯೂ ಮುಗಿಸುತ್ತಾಳೆ. ಅಮೃತಾಳಿಗೆ ಅಭ್ಯಾಸವೆಂದರೆ ತುಂಬಾ ಇಷ್ಟ, ಬಿ. ಎ. ರಿಸಲ್ಟು ಬರುವ ಹೊತ್ತಿಗೆ ಬಸುರಿಯಾಗಿದ್ದರೂ ವಿದ್ಯಾಭ್ಯಾಸವನ್ನು ಮುಂದುವರೆಸುವ ನಿರ್ಧಾರವನ್ನೆ ಮಾಡುತ್ತಾಳೆ. ಎಂ. ಎ/ ಮಾಡಿಕೊಂಡು, ಪಿಎಚ್‌ಡಿಗೆ ರಜಿಸ್ಟ್ರೇಶನ್ ಮಾಡಿ ಕೇವಲ ಎರಡೇ ವರ್ಷಕ್ಕೆ ತನ್ನ ಥೀಸಿಸ್ ಒಪ್ಪಿಸಿ ಡಾಕ್ಟರೇಟ್ ಪಡೆದುಕೊಂಡವಳು. ಈ ಹಂತದವರೆಗೆ ತನ್ನ ಚಿಕ್ಕಮ್ಮ ಮಾಡುವ ಅನ್ಯಾಯ ಅವಳಿಗೆ ಅರ್ಥವಾಗುವುದಿಲ್ಲ ತನಗೆ ಚಿಕ್ಕಮ್ಮ ಬಿಟ್ಟರೆ ಬೇರೆ ಯಾರಿದ್ದಾರೆ ಎನ್ನುವ ಭಾವನೆ ಅವಳಲ್ಲಿ ಗಾಢ ನಂಬಿಕೆ. ಆದರೆ ಅವಳ ಗೆಳತಿ ಶ್ವೇತಾಳಿಂದ ಚಿಕ್ಕಮ್ಮ ಎಂಥ ಚತುರೆ, ಘಾಟಿ, ಮೋಸಾಗಾತಿ ಹೆಣ್ಣು ಎನ್ನುವ ಸುಳಿವು ದೊರೆಯುತ್ತದೆ. ತಂದೆ ತಾಯಿಯ ಮರಣ ಅಂಥ ಅಘಾತವನ್ನೇನೂ ಅವಳಲ್ಲಿ ತರುವುದಿಲ್ಲ ಆದರೆ ಚಿಕ್ಕಮ್ಮ ಮಾಡುವ ನಂಬಿಗೆ ದ್ರೋಹ ಅವಳ ಮಾನಸಿಕ ಸಾಂಗತ್ಯವನ್ನೇ ಹಾಳುಮಾಡುತ್ತದೆ. ಚಿಕ್ಕಮ್ಮ ಇಲ್ಲಿಯವರೆಗೆ ತನ್ನ ಅನಾಥ ಸ್ಥಿತಿಯನ್ನು ಉಪಯೋಗಿಸಿಕೊಂಡು ಮಾಡಿದ ಉಪಕಾರದ ಹಿಂದಿನ ಹುನ್ನಾರುಗಳನ್ನು ವಿಶ್ಲೇಷಿಸಲು ತೊಡುಗುತ್ತಾಳೆ. ''ತನಗೆ ಗಂಟು ಹಾಕಿದ ರಂಗನಾಥ ಅಕ್ಷರಶಃ ಮಂಕುಬುದ್ಧಿಯವನು ಎಂದು ಕ್ರಮೇಣ ಅವಳಿಗೆ ಗೋತ್ತಾಗುತ್ತದೆ ಚಿಕ್ಕಮ್ಮ ತನ್ನ ತವರು ಮನೆ ಬೆಳಸಲು ಮಾಡಿದ ಉಪಾಯವೆಂದು ಈ ಕಾರ್ಯವನ್ನು ಅರ್ಥಮಾಡಿಕೊಳ್ಳುತ್ತಾಳೆ. ಅರವತ್ತು ಎಕರೆಯ, ನಲವತ್ತು ಎಕರೆಯ ಎರಡು ಎಸ್ಟೇಟನ್ನು ಚಿಕ್ಕಮ್ಮ ಕೊಂಡ ವಿಷಯ ಕೇಳಿದ ನಂತರ ಅವಳನ್ನು ಸಂಶಯದಿಂದ ನೋಡಲು ತೊಡುಗುತ್ತಾಳೆ. ತನ್ನ ಚಿಕ್ಕಮ್ಮನ ಮಗಳು ಲೀಲಾಳ ಮದುವೆಯ ಸಂದರ್ಭದಲ್ಲಿ ಮಾತ್ರ ಸರಿಯಾಗಿ ವಿಚಾರಿಸಬೇಕು ಎನ್ನುವ ಎಚ್ಚರ ಹುಟ್ಟುತ್ತದೆ.'' ''ಲೀಲಾ ತನಗಿಂತ ಬರೀ ಎರಡು ವರ್ಷಕ್ಕೆ ಚಿಕ್ಕವಳು ಅವಳನ್ನು ಯಾಕೆ ತನ್ನ ತಮ್ಮ ರಂಗನಾಥನಿಗೆ ಕೊಡಬಾರದಾಗಿತ್ತು ? ಹಾಗೆ ಮಾಡಿದರೆ ಮಗಳು ಬಡವನ ಕೈ ಹಿಡಿಯಬೇಕಾಗುತ್ತಿತ್ತು ತಮ್ಮನಿಗೆ ನನ್ನ ಎಸ್ಟೇಟ್ ಆಸ್ತಿ ಸಿಕ್ಕುತ್ತಿರಲಿಲ್ಲ ಈ ಕೃತ್ರಿಮದ ಹೆಂಗಸು ನನ್ನನ್ನು ಒಳಗೇ ಚೂರಿಯಿಂದ ಇರಿದಿದ್ದಾಳೆ ಅಂತ ಅರ್ಥವಾಯಿತು.'' (ಅಂಚು, ಪು -೯೫) ಎನ್ನುವ ಅವಳು ಮೊದಲ ಬಾರಿ ಮಂಕಾಗಿ ಕೂತುಕೊಳ್ಳುತ್ತಾಳೆ. ತನಗೆ ಮಾಡಿದ ಮೋಸಕ್ಕೆ ನಂಬಿಕೆ ದ್ರೋಹಕ್ಕೆ ಗಂಡನಾದರೂ ತನ್ನ ಪರವಾಗಿ ನಿಂತು ಚಿಕ್ಕಮ್ಮನನ್ನು ಕೇಳುತ್ತಾನೆ ಎಂದರೆ ಅವನಿಗೆ ತನ್ನಕ್ಕ ಮಾಡಿದ್ದು ಮೋಸ ಎನಿಸುವುದೇ ಇಲ್ಲ ಆದರೆ ಇದೇ ವಿಷಯದ ಬಗ್ಗೆ ಅವಳು ಸೋಮಶೇಖರನನ್ನು ಅವನ ಅಭಿಪ್ರಾಯವನ್ನು ಹೇಳು ಎಂದರೆ ''ಬರಿ

ಮೋಸವಲ್ಲ ಅದ್ಭುತ ಕುತಂತ್ರ ಕುಟಿಲತನ'' ಎನ್ನುತ್ತಾನೆ.

ತನ್ನ ಗಂಡನೆನಿಸಿಕೊಂಡವನೂ ತನ್ನಕ್ಕನ ಪರವಾಗಿಯೇ ಮಾತನಾಡಲು ತೊಡಗಿದಾಗ ಅವಳಿಗೆ ಗಂಡನ ಮೇಲೆ ತೀವ್ರ ತಿರಸ್ಕಾರ ಹುಟ್ಟುತ್ತದೆ ತನ್ನಕ್ಕನ ಮಾತನ್ನು ಕೇಳಿಯೇ ಅವನು ಇನ್ನೊಂದು ಮಗುವಾಗಲಿ ಎಂದು ಕುಟುಂಬ ಯೋಜನೆಯ ಸಾಧನವನ್ನು ಬಳಸದೇ ಅಮೃತಾ ಎರಡನೇ ಬಾರಿ ಬಸುರಾಗುವಂತೆ ಮಾಡಿದ್ದು ಅವಳನ್ನು ರೇಗಿಸುತ್ತದೆ ''ನಿನ್ನ ಹೆಂಡತಿ ನಿನ್ನನ್ನು ಬಿಟ್ಟು ಬಿಡಬಹುದು ಇನ್ನೊಂದು ಸಲ ಬಸುರಿಯಾಗಿ ಇನ್ನೊಂದು ಮಗುವಾಗಿ ಬಿಡಲಿ ಎರಡು ಮಕ್ಕಳನ್ನು ಹೆತ್ತಮೇಲೆ ಗಂಡನನ್ನು ಬೀಡೋದು ಹೆಂಗಸಿಗೆ ಸಾಧ್ಯವಿಲ್ಲ ಎರಡೂ ಮಕ್ಕಳಿರೂ ತಾಯಿಯನ್ನು ಬೇರೆ ಯಾರೂ ಮೂಸೊದಿಲ್ಲ'' ಎಂಬ ಅವಳ ಅಕ್ಕನ ಮಾತೆ ತಾನು ಎರಡನೇ ಬಾರಿ ಬಸುರಿಯಾಗುವುದಕ್ಕೆ ಕಾರಣವೆಂದು ಸ್ಪಷ್ಟಪಡಿಸಿಕೊಂಡು ಅವಳು ಗಂಡನನ್ನು ದ್ರೋಹಿ ಎಂದೆ ಪರಿಗಣಿಸಿ ದೈಹಿಕ ಸಂಪರ್ಕವನ್ನು ಕಡಿದುಕೊಳ್ಳುತ್ತಾಳೆ.

ಎಸ್ಟೇಟ್ ಮೇಲೆ ಮಾಡಿದ ಸಾಲಕ್ಕೆ ಬಡ್ಡಿ ಕಟ್ಟಲೂ ಆಗಿಲ್ಲವೆಂದು ನೋಟೀಸು ಬಂದಾಗ ತೀವ್ರವಾದ ಮಾನಸಿಕ ಕುಸಿತಕ್ಕೆ ಒಳಗಾಗಿ ತನ್ನವರೇ ಮಾಡಿದ ಈ ಮೋಸವನ್ನು ಅನ್ಯಾಯವನ್ನು ಎದುರಿಸಿ ನಿಲ್ಲುವ ಛಲ ತೊಡುಗುತ್ತಾಳೆ.

ಸೋಮಶೇಖರನ ಸಂಬಂಧವನ್ನು ಸಮಾಜ ಅನೈತಿಕ ಸಂಬಂಧವೆಂದು ಗುರುತಿಸಿದರೂ ಅವಳಿಗೆ ಭಯವಿಲ್ಲ ಕಾರಣ ಅವನು ಪ್ರಾಮಾಣಿಕ ತನ್ನ ಸಹೋದ್ಯೋಗಿ ಜಲಜಾಳ ಬಾಯಿಂದ ಅವನನ್ನು ಹುಟ್ಟಿನಿಂದಲೇ ಪ್ರಾಮಾಣಿಕ ಅಂತ ಕೇಳಿದಾಗಲಂತೂ ಅವನ ಮೇಲೆ ಪ್ರೀತಿ ಉಕ್ಕಿ ಬರುತ್ತದೆ.

ತೀವ್ರವಾದ ಆನಂದವನ್ನು ಅನುಭವಿಸುವ ಮನಸ್ಸ ಒಂದು ಕಡೆ ಇದ್ದರೆ. ಮತ್ತೊಂದೆಡೆ ಅವಳಿಗೆ ಆತ್ಮ ವಿಶ್ವಾಸವೇ ಇಲ್ಲ. ಶೂನ್ಯ ಕವಿದಾಗ ತಾನು ಶವವೆಂದೇ ಅವಳು ಭಾವಿಸುತ್ತಾಳೆ. ತೀವ್ರ ಶೂನ್ಯ ಸ್ಥಿತಿಯಲ್ಲಿ ಕಣ್ಣು ತೆರೆದ ಬೊಂಬೆಯಂತೆ ಇವಳು ನಿಶ್ಚೇಷ್ಟಿತಳಾಗುತ್ತಾಳೆ ಈ ಎಲ್ಲ ವಿವರಗಳನ್ನು ನೋಡಿದಾಗ ಈ ಕಾದಂಬರಿ ವೈಜ್ಞಾನಿಕ ಸತ್ಯಕ್ಕೆ ನಿಷ್ಠವಾಗಿರುವುದು ಕಂಡು ಬರುತ್ತದೆ.ಪಾರಾನಾಯಿಕ್ ಮೇನಿಕ್ ಡಿಪ್ರೇಶನ್ ಮಾನಸಿಕ ಸ್ಥಿತಿಯ ಎಲ್ಲ ಲಕ್ಷಣಗಳನ್ನು ನಾವು ಅಮೃತಾಳಲ್ಲಿ ಕಾಣಬಹುದಾಗಿದೆ. ಸೋಮಶೇಖರನ ಪ್ರೀತಿಗೆ ಅವಳ ಹೃದಯ ಸದಾ ತುಡಿಯುತ್ತಿರುತ್ತದೆ ಆದರೆ ಅವನು ಬರುವುದು ತಡವಾದರೆ ಅವನನ್ನೇ ದ್ವೇಷಿಸಲು ತೊಡುಗುತ್ತಾಳೆ ತಾನು ಮಾಡುವ ಈ ಅನೈತಿಕ ಸಂಬಂಧ ತನ್ನ ಮಕ್ಕಳಿಗೆ ದೊಡ್ಡವರಾದ ಮೇಲೆ ತಿಳಿಯುತ್ತದೆ ತನ್ನ ಮಗನೆದುರಿಗೆ ತಾನು ತಲೆತಗ್ಗಿಸಬೇಕಾದ ಸ್ಥಿತಿ ನೆನೆದು ಮರಣವೇ ಇದೆಲ್ಲದರಿಂದ ಬಿಡುಗಡೆ ಎಂಬ ನಿರ್ಧಾರಕ್ಕೆ ಬರುತ್ತಾಳೆ.

ಆದರೆ ತನಗೊಂದು ನೆಲೆ ಸೋಮಶೇಖರನಿಂದ ಸಿಗಬಹುದು ಎಂಬ ವಿಶ್ವಾಸವೂ ಅವಳಿಗಿದೆ ಅವನ ಗಾಢ ಪ್ರೀತಿಯೆ ತನ್ನನ್ನು ಬದುಕಿಸುತ್ತದೆ ಎಂಬ ವಿಶ್ವಾಸ ಅವಳದು ಆದರೂ ತನ್ನ ಮತ್ತು ಸೋಮಶೇಖರನ ಸಂಬಂಧದ ಧಾರ್ಮಿಕ ಮತ್ತು ನೈತಿಕ ಪ್ರಜ್ಞೆ ಅವಳನ್ನು ಆಗಾಗ ಕಾಡುತ್ತದೆ.

ಸೋಮು ಉಡುವ ಪಂಚೆಯನ್ನು ಕೆಲಸದ ಮಾದೇವಮ್ಮನಿಗೆ ಒಗೆಯಲು ಅವಳು ಹಾಕುವುದಿಲ್ಲ ತಾನೇ ಒಗೆದು ಶೌಚಾಲಯದಲ್ಲಿ ಒಣಗ ಹಾಕುತ್ತಾಳೆ. ತಾನೇ ಇಸ್ತ್ರೀ ಮಾಡುತ್ತಾಳೆ ಇಲ್ಲಿ ಬಂದು ಉಡುವ

ಗಂಡಸು ಯಾರೆಂದು ಕೆಲಸದವಳಿಗೆ ಯಾಕೆ ಅನುಮಾನ ಉಹಾಪೋಹ ಎನ್ನುವ ಎಚ್ಚರವನ್ನು ವಹಿಸುತ್ತಾಳೆ ಕಾರಣ ಸಮಾಜ ತನ್ನನ್ನು ನೀತಿಗೆಟ್ಟವಳು ಎನ್ನಬಾರದು ಎಂಬ ಭಯವೂ ಅವಳನ್ನು ಕಾಡುತ್ತದೆ.

ಸೋಮಶೇಖರನ ಹೊಸ ಆಫೀಶಿನ ಗೃಹಪ್ರವೇಶದ ಸಂದರ್ಭದಲ್ಲಿ ತನ್ನ ಮತ್ತು ಸೋಮಶೇಖರನ ಸಂಬಂಧದ ಸ್ಥಾನದ ಬಗ್ಗೆ ಅವಳು ಚಿಂತಿತಳಾಗುತ್ತಾಳೆ. ಹೊಸ ಆಫೀಸನ್ನು ರೂಪಿಸುವಲ್ಲಿ ವಿಶೇಷ ಆಸಕ್ತಿ ವಹಿಸಿ, ತನ್ನೆಲ್ಲ ಬೌದ್ಧಿಕತೆಯನ್ನು ಆರ್ಥಿಕ ಸಹಾಯವನ್ನು ಮಾಡುದ ಅಮೃತಾಳಿಗೆ ಪೂಜೆಯ ಸಂದರ್ಭದಲ್ಲಿ 'ನಿಮ್ಮ ಯಜಮಾನರನ್ನು ಕರೀರಿ' ಎಂಬ ಮಾತು ಅವಳನ್ನು ಆ ಪರಿಸರದಿಂದಲೇ ಓಡಿ ಹೋಗುವಂತೆ ಮಾಡುತ್ತದೆ. ತನ್ನ 'ನೆಲೆ' ಎಲ್ಲಿಯೂ ಸ್ಥಾಪಿತವಾಗುವುದಿಲ್ಲ ತನಗೊಂದು ನೈತಿಕ ಸ್ಥಾನವಿಲ್ಲ ಎಂಬ ಚಿಂತೆ ಅವಳನ್ನು ಕಾಡುತ್ತದೆ. ಇಂಥ ಅನಾಥ ಪ್ರಜ್ಞೆಯಲ್ಲಿಯೇ ಸಾಯುವ ಆಸೆಯಿಂದ ಕನ್ನಂಬಾಡಿ ಕಟ್ಟೆಗೆ ಹೋಗುತ್ತಾಳೆ ಕಾವಲುಗಾರನ ಅಡ್ಡಿಯಿಂದ ಆತ್ಮಹತ್ಯೆಯ ಯತ್ನ ವಿಫಲವಾಗುತ್ತದೆ.

ಗರ್ಭಪಾತ ಮಾಡಿಸಿಕೊಂಡ ಸಂದರ್ಭದಲ್ಲಿಯೂ ನೈತಿಕತೆಯ ಕುಸಿತಕ್ಕೆ ಒಳಗಾಗುತ್ತಾಳೆ. ಕಳೆದುಕೊಂಡ ಮಗುವಿಗಾಗಿ ಹಂಬಲಿಸುತ್ತಾಳೆ.

ತನ್ನ ತಂದೆ ಚಿಕ್ಕಮ್ಮಳೊಂದಿಗೆ ಹೊಂದಿದ ಅನೈತಿಕ ಸಂಬಂಧ ತಿಳಿಯುತ್ತದೆ ಕೃಷ್ಣಮೂರ್ತಿ ತನ್ನ ಸ್ವಂತ ತಮ್ಮನೆಂಬುದೂ ಅವಳಿಗೆ ತಿಳಿದು ತನ್ನೆಲ್ಲ ಆಸ್ತಿಯನ್ನು ಬರೆದುಕೊಟ್ಟು ತನ್ನ ದುಡಿಮೆಯಿಂದ ಜೀವನ ನಿರ್ವಹಿಸುವ ತೀರ್ಮಾನವನ್ನು ತೆಗೆದುಕೊಳ್ಳುತ್ತಾಳೆ.

ಅಮೃತಾಳ ಪ್ರೀತಿಯ ಸೆಳೆತದಲ್ಲಿ ಸೋಮಶೇಖರ ಸಿಲುಕಿ ಕೊಂಡು ಅವಳಿಗೊಂದು 'ನೆಲೆ' ಯಾಗುವ ಸ್ಥಿತಿಯಲ್ಲಿ ಕಾದಂಬರಿ ಮುಕ್ತಾಯಗೊಳ್ಳುತ್ತದೆ. ಅಮೃತಾ ಮತ್ತು ಇತರ ಪಾತ್ರಗಳ ಭಾವನೆಗಳ ಕ್ರೋಢಿಕರಣವನ್ನು ಕಾದಂಬರಿಕಾರರು ಸಮರ್ಥವಾಗಿಯೇ ಮಾಡಿದ್ದಾರೆ.

ಕನ್ನಡ ಸಾಹಿತ್ಯದಲ್ಲಿ ಇದೇ ಮಾದರಿಯ ಅನೇಕ ಕೃತಿಗಳು ಬಂದಿವೆ. ತ್ರಿವೇಣಿಯವರ 'ಶರಪಂಜರ' ಈ ಹಿನ್ನೆಲೆಯಲ್ಲಿ ಗಮನಿಸಬೇಕಾದ ಕೃತಿಯಾಗಿದೆ. ವೀಣಾ ಯಲಬುರ್ಗಿಯವರ 'ಗಂಡಸರು' ಎಂಬ ಕಥೆ ಕೂಡಾ ಇದೇ ಮಾದರಿಯದು.

# ಸಾಕ್ಷಿ

ಸಾಕ್ಷಿ ಭೈರಪ್ಪನವರ ಎಲ್ಲ ಕಾದಂಬರಿಗಳಿಗಿಂತ ವಿಶಿಷ್ಟವಾಗಿದೆ. ಆಯ್ದುಕೊಂಡು ವಸ್ತು ಮತ್ತು ಬಳಸಿದ ತಂತ್ರ ವಿಭಿನ್ನ ಬಗೆಯ ಪರಿಣಾಮವನ್ನು ಓದುಗನಲ್ಲಿ ಉಂಟುಮಾಡುತ್ತವೆ.

''ಸಾಕ್ಷಿಯ ಅಧ್ಯಯನ ಕಾಲದಲ್ಲಿ ನನಗೆ ಮುಖ್ಯವಾಗಿ ಕಂಡದ್ದು ಇದು ಕಾಮಕ್ಕೆ ಸಂಬಂಧಿಸಿದಂತೆ ನೀತಿ ಅನೀತಿಗಳ ಸಾಮಾಜಿಕ ಪರಿಕಲ್ಪನೆಗಳನ್ನು ಶೋಧಿಸುವ ಕುತೂಹಲಪೂರ್ಣ ಕಾದಂಬರಿಯೆಂದು'' ೧ ವ್ಯಾಸರಾಯ ಬಲ್ಲಾಳುರು ಅಭಿಪ್ರಾಯ ಪಡುತ್ತಾರೆ.

ಕನ್ನಡ ಸಾಹಿತ್ಯದಲ್ಲಿ ಪುರುಷಾರ್ಥಗಳಲ್ಲಿ ಒಂದಾದ 'ಕಾಮ'ದ ನೆಲೆಯನ್ನು ಶೋಧಿಸುವ ಕೃತಿಗಳು ಬಂದಿವೆ. ಅನಕೃ, ತರಾಸು, ಯು ಆರ್ ಅನಂತಮೂರ್ತಿ ಮುಂತಾದ ಲೇಖಕರು ಕಾಮದ ಸ್ವರೂಪವನ್ನು ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ ನಿಸರ್ಗ ಸಹಜವಾದ 'ಕಾಮ' ವೈಯಕ್ತಿಕ ಬದುಕಿನಲ್ಲಿ, ಸಾಮಾಜಿಕ ಬದುಕಿನಲ್ಲಿ ತನ್ನದೇ ಆದ ಪ್ರಭಾವವನ್ನು ಬೀರುತ್ತದೆ, ''ಕಾಮವನ್ನು ನಿಗ್ರಹಿಸುವ ಉದಾತ್ತಿಕರೀಸುವ ಅಥವಾ ಒಂದು ರೀತಿಯ ನಿಗ್ರಹದ ಶಿಸ್ತಿಗೆ ಒಳಪಡಿಸುವುದು ಸಾಧ್ಯವೇ ಎಂಬ ವಿಚಾರಗಳೆಲ್ಲ ನಮ್ಮ ದಾರ್ಶನಿಕ ಚಿಂತನೆಯಲ್ಲಿ ಧೀರ್ಘಕಾಲದಿಂದ ಬಂದಿವೆ''೨ ಎಂಬ ವ್ಯಾಸರಾಯ ಬಲ್ಲಾಳರ ಮಾತುಗಳು ಒಪ್ಪುವಂತಹವು. ಏಕೆಂದರೆ ಧಾರ್ಮಿಕ ವಿಚಾರಗಳಲ್ಲಿ 'ಕಾಮ'ಕ್ಕೆ ಒಂದು ಪ್ರಮುಖ ಸ್ಥಾನವಿದೆ. ಆದರೆ ಇದು ಮನುಷ್ಯ ಸಹಜವಾದ ನೀತಿಯ ನೆಲೆಗೆ ಒಳಪಟ್ಟು ತೃಪ್ತಿಗೊಳ್ಳಬೇಕು. ಅದಕ್ಕೆ ನಿಬಂಧನೆಗಳಿವೆ. ಮೈಥುನ ಪ್ರಕೃತಿಯ ಒಂದು ಅವಸ್ಥೆ. ಮಾನವನ ಸಹಜವಾದ ಬಯಕೆಗಳಲ್ಲಿ ಅದು ಕೂಡ ಒಂದು. ಮನುಷ್ಯನ ಈ ಮೂಲಭೂತ ಆಶಕ್ತಿಯಾದ ಕಾಮದ ನೈತಿಕ ನೆಲೆಗಟ್ಟನ್ನು ಶೋಧಿಸುವುದು ಕಾದಂಬರಿಕಾರರ ಮುಖ್ಯ ಉದ್ದೇಶವೆಂಬಂತೆ ತೋರುತ್ತದೆ.

ಮನಶಾಸ್ತ್ರೀಯ ವಿಚಾರಗಳು ಈ ಕಾದಂಬರಿಯಲ್ಲಿ ಹೇರಳವಾಗಿ ದೊರೆಯುತ್ತವೆ. ಮನುಷ್ಯನ ಅಂತರಂಗದ ಅನೇಕ ವಿಷಯಗಳು ಇಲ್ಲಿ ಅನಾವರಣಗೊಳ್ಳುತ್ತವೆ.

ಯಮನ ಸಾನಿಧ್ಯದಲ್ಲಿ ಪರಮೇಶ್ವರಯ್ಯನ ಸೂಕ್ಷ್ಮ ಕಾಯದ ವಿಚಾರಣೆಯ ಸಂದರ್ಭದಿಂದ ಕಾದಂಬರಿ ಪ್ರಾರಂಭವಾಗುತ್ತದೆ. ಈ ಕಾದಂಬರಿಯ ಮುಖ್ಯಪಾತ್ರ ಮಂಜಯ್ಯನದು. ಮಂಜಯ್ಯ ಮಾಡಿದ ಕೊಲೆಯ ಕೇಸಿನಲ್ಲಿ ಸುಳ್ಳು ಸಾಕ್ಷಿ ಹೇಳಿದ ಪರಮೇಶ್ವರಯ್ಯ ಅದೇ ತಪ್ಪಿಗಾಗಿ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ ಸಮಾಜದಲ್ಲಿ ಗೌರವ ಸ್ಥಾನಹೊಂದಿದ ಪರಮೇಶ್ವರಯ್ಯ ತನ್ನ ಜೀವನದಲ್ಲಿ ಎಂದು ಸುಳ್ಳಾಡಿದವನಲ್ಲ,

ಆದರೆ ಮಂಜಯ್ಯ ಒಡ್ಡಿದ ಪ್ರಲೋಭಗಳಿಗಾಗಿ ಕೋರ್ಟಿನಲ್ಲಿ ಸುಳ್ಳು ಸಾಕ್ಷಿ ಹೇಳಲು ನಿರ್ಧರಿಸುತ್ತಾನೆ. ಸಾಕ್ಷಿ ಹೇಳುವ ಪೂರ್ವದಲ್ಲಿ ಮತ್ತು ನಂತರದಲ್ಲಿ ಪರಮೇಶ್ವರಯ್ಯನಲ್ಲಿ ಉಂಟಾಗುವ ಮಾನಸಿಕ ತಳಮಳವನ್ನು ಕಾದಂಬರಿಕಾರರು ಚೆನ್ನಾಗಿ ಚಿತ್ರಿಸಿದ್ದಾರೆ ಕಂಚಿಯನ್ನು ಕೊಂದದ್ದು ಜನಹಿತಕ್ಕಾಗಿ ಅವನು ಊರನ್ನು ಸೂರೆ ಹೊಡೆದರು ನೀವು ಕರೆದು 'ನೀನು ಮಾಡಿರೋದು ತಪ್ಪು, ಅಧರ್ಮ ಅಂತ ಬುದ್ದಿ ಹೇಳಲಿಲ್ಲ' ಎಂದು ಮಾವ ಪರಮೇಶ್ವರಯ್ಯನನ್ನೆ ಪ್ರಶ್ನಿಸಿ ನಾನು ಮಾಡಿದ್ದು ಧರ್ಮ ಕಾರ್ಯವೆಂದು ಸಮರ್ಥಿಸಿ ಕೊಳ್ಳುವ ಮಂಜಯ್ಯ ಪರಮೇಶ್ವರಯ್ಯನವರ ಮನಸ್ಸು ತೊಳಲಿ ಯಾವುದು ಧರ್ಮ ಕಾರ್ಯವೆಂದು ಚಿಂತಿಸುವಂತೆ ಮಾಡುತ್ತದೆ.

ಭಾರತೀಯ ಪುರಾಣದಲ್ಲಿರುವ ಸ್ವರ್ಗ ನರಕ ಯಮಧರ್ಮ ಚಿತ್ರಗುಪ್ತರ ಕಲ್ಪನೆಯನ್ನು ಕಾದಂಬರಿಯಲ್ಲಿ ಬಳಸಿಕೊಳ್ಳಲಾಗಿದೆ ಪರಮೇಶ್ವರಯ್ಯನ ಮೃತ್ಯುವಿನ ನಂತರದ ಚಿತ್ರಣದಲ್ಲಿ ಈ ಕಲ್ಪನೆಯನ್ನು ಪರಿಣಾಮಕಾರಿಯಾಗಿ ಉಪಯೋಗಿಸಿಕೊಳ್ಳಲಾಗಿದೆ. ಯಮನ ಸಾನ್ನಿಧ್ಯದಲ್ಲಿ ನಿಂತು ''ಪರಮೇಶ್ವರಯ್ಯ ಎಂಬ ವ್ಯಕ್ತಿಯ ಸೂಕ್ಷ್ಮ ಕಾಯ, ನಾನು ಆ ವ್ಯಕ್ತಿಯ ಮನಸ್ಸು ಆಲೋಚನೆ ನಡೆತೆಗಳು ಸ್ಮೃತಿಪಾತ್ರ ನಾನು, ಎಂಬ ಅರಿವು ಬಂತು'' ಎಂದು ಹೇಳುವ ಮಾತುಗಳೇ ಈ ಪಾತ್ರದ ಮನಸ್ಸಿನ ಸೂಕ್ಷ್ಮ ಎಳೆಗಳನ್ನು ಬಿಡಿಸಿ ತೋರಿಸುವುದಕ್ಕೆ ಮುನ್ನುಡಿ ರೂಪದಲ್ಲಿ ಬಂದಿವೆ.

ಸಾವಿತ್ರಿ ಮಂಜಯ್ಯನನ್ನೆ ಮದುವೆಯಾಗುತ್ತೇನೆಂದು ಛಲ ಹಿಡಿದಾಗ ಪರಮೇಶ್ವರಯ್ಯ ಅಘಾತಕ್ಕೆ ಒಳಗಾಗುತ್ತಾರೆ. ಸಾವಿತ್ರಿಯ ಮನಸ್ಸನ್ನು ಅದಾವ ಮಾಯೆಯಿಂದ ಈ ರೀತಿ ಪರಿವರ್ತಿಸಿದ ಎಂದು ಮಂಜಯ್ಯನ ಬಗ್ಗೆ ಆಶ್ಚರ್ಯ ಉಂಟಾಗುತ್ತದೆ. ವಯಸ್ಸಿನಲ್ಲಿ ತನಗಿಂತ ಹದಿನೇಳು ವರ್ಷ ದೊಡ್ಡವನಾಗಿ ಬೀದಿಯ ಗಂಡು ನಾಯಿಗಿಂತಲೂ ನೀತಿಹೀನನಾದ ಮಂಜಯ್ಯನಂಥವನನ್ನ ಮದುವೆಯಾಗುತ್ತೇನೆಂದಾಗ ಮಗಳನ್ನ ತೀವ್ರವಾಗಿ ಶಿಕ್ಷಿಸುತ್ತಾರೆ ಶಿವಾಲಯಕ್ಕೆ ಹೋಗಿ ಅತಿಥಿಗಳನ್ನು ಕರೆದುಕೊಂಡು ಬಂದು ಊಟ ಹಾಕುವುದರಲ್ಲಿ ಸಂತೃಪ್ತಿಯನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಾರೆ. ಅವಳ ಬಾಳನ್ನು ಮತ್ತೆ ಸರಿಪಡಿಸುವ ಪ್ರಲೋಭನೆಗೆ ಒಳಗಾಗಿ ಸುಳ್ಳು ಸಾಕ್ಷಿ ಹೇಳಿ ಹಿಂತಿರುಗಿ ಬಂದ ನಂತರ ಪರಮೇಶ್ವರಯ್ಯನ ಮಾನಸಿಕ ಸ್ಥಿತಿಯನ್ನು ಈ ರೀತಿ ಕಾದಂಬರಿಕಾರಾರು ಚಿತ್ರಿಸುತ್ತಾರೆ. ''ಕೋರ್ಟಿನ ಆವರಣದಿಂದ ಹೊರಗೆ ಬಂದು ಓಡ ತೊಡಗಿದೆ ನಾಯಿ ಅಟ್ಟಿಸಿಕೊಂಡು ಬಂದವರು ದಿಕ್ಕು ಕಾಣದೆ ಓಡುವವರಂತೆ ಒಂದೇ ಸಮನೆ ಓಡ ತೊಡಗಿದೆ. ಬೆವರು, ಏದುಸಿರು ಎದೆಯ ಮೇಲೆದ್ದು ಬರುವ ಬಡಿತಗಳ ಅರಿವು ಇಲ್ಲದೆ ಓಡಲು ಇನ್ನೂ ಸಾಧ್ಯವಿಲ್ಲವೆಂಬಷ್ಟು ಸುಸ್ತಾದಾಗ ಜೋರು ನಡಿಗೆಗೆ ಇಳಿದು ಅದು ಅಸಾಧ್ಯವಾದಾಗ ನಿಧಾನ ಹೆಜ್ಜೆಗೆ ತಿರುಗಿ ಪಾದ ಎದೆಗಳ ಚಲನೆಯು ಕಣ್ಣೆಹಾಕಿಕೊಂಡು ಮುಲುಕಿಬಿದ್ದಾಗ ಒಂದು ಮರದಡಿಯ ಹುಲ್ಲು ಹಾಸಿನ ಮೇಲೆ ಮಲಗಿ ಬಿಟ್ಟೆ ನಿದ್ದೆ ಬಂತು ಎಂಥ ನಿದ್ದೆ ಹೆಂಡತಿ ಸತ್ತಾಗಿನಿಂದ ಇದುವರೆಗೆ ಒಮ್ಮೆಯೂ ಬಾರದಿದ್ದ ಗಾಢ ನಿದ್ರೆ, ಧೀರ್ಘ ನಿದ್ರೆ ಕನಸಿನ ರೂಪವಾಗಿಯೂ ಹೊರ ದೃಶ್ಯಗಳು ಸುಳಿಯದ ಸಂಪೂರ್ಣ ನನ್ನೊಳಗೆ ನಾನಿರುವಂತೆ ಭಾಸವಾದ ಹಂಗು ತೊರೆದ ನಿದ್ದೆ.''

ಪರಮೇಶ್ವರಯ್ಯನ ನೈತಿಕ ಪ್ರಜ್ಞೆ ಕುಸಿದು ಹೋದ ನಂತರ ಜೀವ ಚಲನೆಯನ್ನೆ ಕಳೆದು ಕೊಳ್ಳುತ್ತಾನೆ ಮನೆಯಿಂದ ತೋಟಕ್ಕೆ ತೋಟದಿಂದ ಮನೆಗೆ ಹೋಗುವ ಅಭ್ಯಾಸದಲ್ಲಿ ಸುಳ್ಳು ಸಾಕ್ಷಿ ಹೇಳಿದ

ನಂತರ ಊರಿನ ಜನರಲ್ಲಿ ತನ್ನನ್ನು ನೋಡಿ ಸುಳ್ಳ ಪರಮೇಶ್ವರಯ್ಯ, ಸುಳ್ಳು ಸಾಕ್ಷಿಯ ಪರಮೇಶ್ವರಯ್ಯ ಎಂದುಕೊಳ್ಳುತ್ತಿರುವಂತೆ ಆನಿಸುತ್ತದೆ. ಅಂಜಿಕೆ ಆವರಿಸುತ್ತದೆ. ತಾನು ಅಂಜುತ್ತಿರುವುದು ಜನಾಭಿಪ್ರಾಯಕ್ಕೆ ಅಥವಾ ಅಂಥಸಾಕ್ಷಿಗೋ ಎಂದು ಪರೀಕ್ಷಿಸಿಕೊಳ್ಳುತ್ತಾನೆ ಪಾಪ ಪ್ರಜ್ಞೆ ಆವರಿಸಿ ನಿದ್ದೆ ಊಟ ಮಾಡಿದರೂ ದೇಹ ಸೊರಗತೊಡುಗುತ್ತದೆ. ದಿನದಿಂದ ದಿನಕ್ಕೆ ತೂಕ ಕಡಿಮೆಯಾಗುತ್ತದೆ. ವೈದ್ಯರಲ್ಲಿ ಹೋದರು ಏನೂ ಪ್ರಯೋಜನವಾಗುವುದಿಲ್ಲ ಕೊನೆಗೆ ಆತ್ಮಹತ್ಯೆಯ ನಿರ್ಧಾರ ಮಾಡಿಕೊಂಡ ಪರಮೇಶ್ವರಯ್ಯ ಹಗ್ಗ ತೆಗೆದುಕೊಂಡು ಹೋಗಿ ಮೊದಲ ಭಾರಿ ಆತ್ಮಹತ್ಯೆ ಮಾಡಿಕೊಳ್ಳಲು ಅಂಜಿ ಹಿಂತಿರುಗುತ್ತಾನೆ ನಂತರ ಮತ್ತೊಂದು ಬಾರಿ ಮುಂದಾಗಿ ಬದುಕಿನ ಅರ್ಥವನ್ನ ಕಳೆದುಕೊಂಡದ್ದರಿಂದ ಆತ್ಮಹತ್ಯೆ ಮಾಡಿಕೊಂಡಿದ್ದೇನೆ. ಇದಕ್ಕೆ ಬೇರೆ ಯಾರೂ ಜವಾಬ್ದಾರರಲ್ಲ ಪ್ರೇರಕರು ಅಲ್ಲ. (ಸಾಕ್ಷಿ, ಪು-೨೮) ಎಂದು ಕಾಗದದಲ್ಲಿ ಬರೆದು ಉಟ್ಟಿದ್ದ ಪಂಜೆಯ ಸೆರಗಿಗೆ ಕಟ್ಟಿಕೊಂಡು ನೇಣು ಹಾಕಿಕೊಳ್ಳುತ್ತಾನೆ.

ಈ ಪರಮೇಶ್ವರಯ್ಯನ ಪ್ರೇತವನ್ನು ಪರಸ್ಥಿತಿಯಲ್ಲಿಯೂ ಪೂರ್ವ ಲೋಕಕ್ಕೆ ಕಳುಹಿಸಿ ಎಲ್ಲರ ಮನಸ್ಸಿನ ಸ್ಥಿತಿಯನ್ನು ಅರಿಯುವ ಕಾರ್ಯಕ್ಕೆ ಯಮಧರ್ಮರಾಯನು ಕಳುಹಿಸುತ್ತಾನೆ.

''ಪ್ರೇತ ಸ್ಥಿತಿಯಲ್ಲಿಯೂ ನಿನ್ನನ್ನು ಮತ್ತೆ ನಿಮ್ಮ ಪೂರ್ವ ಲೋಕಕ್ಕೆ ಕಳುಹಿಸುತ್ತೇನೆ. ಅಲ್ಲಿ ಯಾರ ಮನಸ್ಸನ್ನು ಬೇಕಾದರೂ ನೀನು ಪ್ರವೇಶಿಸಬಹುದು ಏಕ ಕಾಲದಲ್ಲಿ ಹಲವಾರು ಮನಸ್ಸನ್ನು ಹೊಕ್ಕು ಕೂತು ನೂಕಬಹುದು. ಆದರೆ ಯಾರ ಮನಸ್ಸು ಭಾವನೆಗಳನ್ನು ಪ್ರಭಾವಿಸುವ ಪರಿವರ್ತಿಸುವ ಶಕ್ತಿ ನಿನಗಿರುವುದಿಲ್ಲ. ಅರಿಯುವದಷ್ಟೇ ಸಾಕ್ಷಿಯ ಶಕ್ತಿ.'' ಹೋಗು ಎಂದು ಈ ಪ್ರೇತವನ್ನು ಭೂಲೋಕಕ್ಕೆ ಅಟ್ಟುವ ಕಾರ್ಯ ನಡೆಯುತ್ತದೆ.

ಈ ಪ್ರೇತದ ಮೂಲಕ ಒಬ್ಬೊಬ್ಬರ ಮನಸ್ಸನ್ನು ಹೊಕ್ಕು ಪರಿಶೋಧಿಸುವ ಕಾರ್ಯ ಕಾದಂಬರಿಯಲ್ಲಿ ವಿಶೇಷತೆಯನ್ನು ಪಡೆದಿದೆ.

ಮಂಜಯ್ಯ ಕಚ್ಚೆ ಭದ್ರವಾಗಿ ಇಟ್ಟುಕೊಳ್ಳದವ. ಅದಕ್ಕಾಗಿ ಅವನಿಗೆ ಯಾವ ಲಜ್ಜೆಯೂ ಇಲ್ಲ ನೋಡಲು ಸುಂದರನಾಗಿರುವ ವ್ಯಕ್ತಿ '' ಅರ್ಜುನನ ಪಾತ್ರ ಹಾಕಲು ಹೇಳಿ ಮಾಡಿಸಿದಂಥ ಲಕ್ಷಣದ ಮುಖ ಮೈಕಟ್ಟುಗಳ ನೀಳ ಅಂದರೆ ತುಸು ಗುಂಗುರು ಕಟ್ಟಿದ ತಲೆಗೂದಲು ಯಾವ ಹುಡಿಗಿಯು ಅವನಿಂದ ಆಕರ್ಷಿತಳಾಗಬೇಕು'' ಇಂಥ ರೂಪದ ಜೊತೆಗೆ ಹೆಣ್ಣಿನ ದೌರ್ಬಲ್ಯವನ್ನ ಗುರುತಿಸುವ ವಿಶೇಷ ಪ್ರಜ್ಞೆಯೂ ಅವನಿಗುಂಟು. ಹೆಣ್ಣಿನ ಮನಸ್ಸಿನ ಆಳಕ್ಕೆ ಇಳಿದು ಅಲ್ಲಾಡಿಸಿ ವಶಪಡಿಸಿಕೊಳ್ಳುವ ಜಾಣ್ಮೆ ಅವನಲ್ಲಿದೆ. ಮುಖ್ಯವಾಗಿ 'ಕಾಮ'ದ ಬಗ್ಗೆ ಅವನನ್ನು ಯಾವ ನೈತಿಕತೆಯೂ ಕಾಡುವುದಿಲ್ಲ. 'ಮುಕ್ತ' ಕಾಮದ ಪ್ರತೀಕದಂತೆ ಅವನು ತೋರುತ್ತಾನೆ. ಕಾಮದ 'ನಿಗ್ರಹ' ಪಾತಿವ್ರತೆಯೆನ್ನುವ ಪದಗಳಿಗೆ ಅವನಲ್ಲಿ ಯಾವುದೇ ಮೌಲ್ಯ ಅಥವಾ ಅರ್ಥವಿಲ್ಲ ಪ್ರಕೃತಿಯ ಸಹಜ ಎಳೆತನದ ಮುಂದೆ ಮಾನವೀಯತೆಯ ಅಂಶಗಳಾಗಿ ಸಂಬಂಧಗಳ ಪಾತಿವ್ರತ್ಯಯಾಗಲಿ ಅವನಿಗೆ ತೋರುವುದಿಲ್ಲ ಒಟ್ಟಿನಲ್ಲಿ ತನ್ನ ದೈಹಿಕ ಬಯಕೆ ತೀರಿದರೆ ಆಯಿತು, ಇಂಥಹ ಸ್ವಭಾವದ ಜೊತೆಗೆ ಅವನನ್ನ 'ಭಯ' ಯಾವ ಸಂದರ್ಭದಲ್ಲಿಯೂ ಆವರಿಸಿರುವದಿಲ್ಲ ಎಲ್ಲರ ಮಾತನ್ನು ತನ್ನದೇ ಆದ ತಿಳುವಳಿಕೆಯ ಸ್ವರದಲ್ಲಿ ತನಗೆ ಒಗ್ಗುವ ರೀತಿಯಲ್ಲಿಯೇ ಅರ್ಥೈಸುವ ಅವನ ರೀತಿ ಬೆರಗು ಹುಟ್ಟಿಸುತ್ತದೆ.

ಕಂಚಿಯನ್ನು ಕೊಂದದ್ದು ಅಲ್ಲದೆ, ಸ್ವತ ಅವನ ಹೆಂಡತಿಯನ್ನೆ ತನ್ನ ಪರವಾಗಿ 'ಸಾಕ್ಷಿ' ಹೇಳುವದಕ್ಕೆ ಒಪ್ಪಿಸುವದು. ವಿಸ್ಮಯ ಉಂಟು ಮಾಡುತ್ತದೆ ನಿನ್ನ ಗಂಡನನ್ನು ನಾನು ಕೊಲ್ಲಲಿಲ್ಲ. ಅವನೆ ಮರದಿಂದ ಜಾರಿಬಿದ್ದು ಸತ್ತಿದ್ದಾನೆ. ಎಂದು ಕಂಚಿಯ ಹೆಂಡತಿ ಲಕ್ಕುವನ್ನು ಒಪ್ಪಿಸುತ್ತಾನೆ. ಮೊದಮೊದಲು ಮಂಜಯ್ಯನ ಬಗ್ಗೆ ಕೋಪ-ತಾಪ ಪ್ರಕಟಿಸಿದರು ಅವನ ಹಿಡಿತಗಳ ಮುಂದೆ ಸೋತು ಬಿಡುತ್ತಾಳೆ.

ಸ್ವತ ಲಕ್ಕುವೆ ಮಂಜಯ್ಯನ ವಶೀಕರಣಶಕ್ತಿಯನ್ನು ಈ ರೀತಿ ಪ್ರಕಟಿಸುತ್ತಾಳೆ, ''ತಾನು ಈ ವಯ್ಯನನ್ನು ಕೂಡಿರುವುದು ಈ ಎರಡನೇ ಧಪ, ಮೊದಲ ದಫೆ ಗ್ಯಾಪಿಸಿಕೊಂಡರೆ ಯವ್ವೇ ಎದೆ ಜಲ್ ಅಂತದೇ. ನನಗೆ ಗೊತ್ತಿದ್ದಂಗೆ ಈ ವಯ್ಯ ಮಂತ್ರ ಹಾಕಿ, ಹೆಂಗಸಂದರೆ ಸೋತು ಹೆಣ್ಣುನಾಯಿ ಮಾಡಿಬಿಡುತ್ತಾನೆ, ಕ್ವಾಟೆ ಬೀದೀನಾಗಿನ ಒಂದು ಸಲ ನಾನು ಕೇಳಿದ್ದಕ್ಕೆ ಅದೇನು ಕಂಡು ಆ ವಯ್ಯಂಗೆ ಗಂಟು ಬಿದ್ದಿದೆಯಮ್ಮ ಅಂತ, ಯಕ್ಕಾ ಒಂದು ದಫಾ ಆ ವಯ್ಯನನ್ನು ಕೂಡಿ ಬಿಟ್ಟರೆ ಸಾಕು ಮುಂದೆ ಏಳೇಳು ಜನ್ಮಕ್ಕೂ ಅವನ ಜೀತದ ಆಳಾಗಿ ಆದರೂ ಅವನ ತಾವವೇ ಇರಬೇಕು ಅನಿಸುತ್ತದೆ ಎಂದಿದ್ದಳು.'' ಇಂಥ ಮಂಜಯ್ಯ ತನ್ನಲ್ಲೆಯ ಇರಬೇಕು ಎಂದು ಆಶೆ ಪಡುವ ಲಕ್ಕು ಇವನ ಪರವಾಗಿ ಸಾಕ್ಷಿ ನುಡಿದು ಗಂಡನಿಗೆ ದ್ರೋಹ ಮಾಡುತ್ತಾಳೆ ಗಂಡನ ಕೊಲೆಯಾದ ಕೆಲವೇ ದಿನಗಳಲ್ಲಿ ಇವನ ಒತ್ತಡ ಆಕರ್ಷಣೆಯಲ್ಲಿ ಸಿಕ್ಕು ಇನ್ನು ಸೂತಕವಿದೆ ಎನ್ನುತ್ತಾ ಸಹಕರಿಸುತ್ತಾಳೆ. ಇಂಥ ಪ್ರಚಂಡತನ, ಭಂಡತನ ಮಂಜಯ್ಯನ ವಿಶೇಷ ಶಕ್ತಿ ನೀತಿಯ ಬೇರುಗಳನ್ನೆ ಶೋಧಿಸುವ ತನ್ನ ನಡವಳಿಕೆಯಿಂದ ಅವುಗಳನ್ನ ಅಲ್ಲಾಡಿಸುವ ಇವನು ಕಾದಂಬರಿಯುದ್ದಕ್ಕೂ ತನ್ನ ನಿಲುವುಗಳನ್ನ ಯಾವ ಯಗ್ಗಿಲ್ಲದೆ ಪ್ರತಿ ಪಾದಿಸುತ್ತ ಸಾಗುತ್ತಾನೆ. ಅವನಿಗೆ ಕಂಚಿಯ ಹೆಂಡತಿ ಲಕ್ಕವ್ವ ಅಷ್ಟೇ ! ಅವಳ ಮಗಳು ಅಷ್ಟೇ ! ಇಬ್ಬರೂ ಅವನ ಕಾಮವನ್ನು ತೀರಿಸುವ ಸಾಧನೆಗಳು. ಅವನಿಗೆ ಇಂಥ ಸಂದರ್ಭದಲ್ಲಿಯೂ ನೀತಿಯೆಂಬುದಿದೆ. ಸಮಾಜ ಅದನ್ನು ಅನುಸರಿಸಿ ಬಾಳುತ್ತದೆ ಎಂಬ ಪರಿಜ್ಞಾನ ಉಂಟಾಗುವುದಿಲ್ಲ. ಅವನಿಗೆ ಸತ್ಯ-ಅಸತ್ಯಗಳ ಸೂಕ್ಷ್ಮಗಳ ಅರಿವಿಲ್ಲ. ಇವನ ಹೆಂಡತಿ ಸಾವಿತ್ರಿಯನ್ನ ಇವನನ್ನ ಒಂದು ಮಾಡಬೇಕೆಂದು ಉಪದೇಶ ಮಾಡಲು ಹೊರಟ ಸಾವಿತ್ರಿಯ ಭಾವ ಸತ್ಯಪ್ಪನೆ ಮಂಜಯ್ಯನಿಂದ ಉಪದೇಶ ಪಡೆಯುವಂತಾಗುತ್ತದೆ. ''ಹೆಂಗಸು ಅಂದರೆ ಪಾತಿವ್ರತ್ಯದ ಅಪ್ಪಟ ಮುರುಕು ಅಂಥ ನಿಮ್ಮಂಥೊರು ತಿಳಿಕಂಥೀರ ಒಂದು ಅರ್ಥ ಮಾಡಕೊಳ್ಳಿ; ಹೆಂಗಸರಿಗೂ ನಮ್ಮ ಹಾಗೆ ಆಸೆ ಇರುತ್ತೆ ಚೆನ್ನಾದ ಯಾವ ಗಂಡಸನ್ನು ಕಂಡರೂ ಒಳಗಿನಿಂದ ಒಸರುತ್ತೆ ಎಷ್ಟೋ ಗಂಡಸರಿಗೆ ಇದು ಅರ್ಥವಾಗುವುದಿಲ್ಲ ನನಗೆ ಆಗುತ್ತೆ.'' (ಸಾಕ್ಷಿ ಪು-೬೧) ಎಂದು ತನ್ನಲ್ಲಿರುವ ವಿಶೇಷ ಶಕ್ತಿಯನ್ನು ತಿಳಿಸುತ್ತಾನೆ. ಇಂಥ ಇವನ ಸಾಹಸಗಳಿಂದ ಕಾಮದ ಶಕ್ತಿಯೇ ಸಾಮಾಜಿಕ ಬದುಕಿನಲ್ಲಿ ಪ್ರವಾಹದಂತೆ ಪ್ರವೇಶಿಸಿದ ಅನುಭವವಾಗುತ್ತದೆ.

ಮಂಜಯ್ಯನ ರೂಪಕ್ಕೆ ಸಾವಿತ್ರಿಯಂಥವಳು ಮರುಳಾಗಿ ಮದುವೆಯಾದರೆ ಅವನನ್ನೆ ಮದುವೆಯಾಗಬೇಕು ಎಂದು ನಿರ್ಧರಿಸಿದ ಅವಳಿಗೆ ನಂತರ ತನ್ನ ತಪ್ಪಿನ ಅರಿವಾಗುತ್ತದೆ. ನೀರಿನಲ್ಲಿ ಅವನು ಈಜುತ್ತ ಅವಳ ಬಟ್ಟೆ ಒಗೆಯುವ ಜಾಗಕ್ಕೆ ಬಂದು ನೋಡಿಯೂ ನೋಡದೆ ಮುಂದಕ್ಕೆ ಹೋಗುವುದು

ಸಾವಿತ್ರಿಯನ್ನ ಆಕರ್ಷಿಸುತ್ತದೆ. ಅಷ್ಟೇ ಅಲ್ಲ ಅವಳ ಮನೆಯ ಪಕ್ಕದ ಬೀದಿಯಲ್ಲಿ ರಂಗಮಣಿಯೆಂಬವಳು ''ಅವಳನ್ನು ನೋಡಲಿಕ್ಕೆ ಗಂಡು ಬಂದು ಒಪ್ಪಿಗೆ ಆಗಿ ಮದುವೆ ನಿಶ್ಚಯವಾಗುತ್ತ ಅಂತವಳು ಯಾವಯಾವೋದು ಗಂಡು ಬರುತ್ತೆ ನಮ್ಮೂರ ಮಂಜಯ್ಯನಂಥದ್ದು ಒಂದು ಬರಬಾರದೆ'' ಎಂದು ಮೂರು ನಾಲ್ಕು ಬಾರೀ ಎಂದದ್ದು. ಸಾವಿತ್ರಿ ಮಂಜಯ್ಯನನ್ನು ಮದುವೆಯಾಗಲು ಪ್ರೇರೇಪಿಸುತ್ತದೆ. ಆದರೆ ಮದುವೆಯಾದ ನಂತರ ಅವನು ಎಂಥ ಒರಟ, ಕ್ರೂರಿ ಎಂಬುದು ತಿಳಿಯುತ್ತದೆ. ಮಂಜಯ್ಯನನ್ನ ಹೊರತಾಗಿ ಅನೇಕ ಹೆಂಗಸಿನ ಸಹವಾಸ ಇಟ್ಟುಕೊಂಡಿದ್ದಾನೆ ಎಂಬ ವಿಷಯ ತಿಳಿಯುತ್ತದೆ. ಮನೆಯ ಆಳು ಕೆಂಪಮ್ಮನ ಮೂಲಕ ತೋಟದಲ್ಲಿ ನಡೆಯುವ ಕಾಮ ಕ್ರೀಡೆಯನ್ನು ತಿಳಿದುಕೊಂಡು ಬರಲು ತೋಟಕ್ಕೆ ಹೋದ ಅವಳಿಗೆ ಅಘಾತವಾಗುತ್ತದೆ. ಮಲ್ಲಿಯ ಜೊತೆ ನಡೆಯುವ ಸರಸ, ಕೊನೆಯಿಲ್ಲದ ಕಾಮ ಕೇಳಿ ಮನೆಯಲ್ಲಿ ಮಂಚದ ಮೇಲೆ ತನ್ನನ್ನು ಆಡಿಸುತ್ತಿದ್ದ ತದ್ವತ್ ಕೇಳಿ ಸಂಗತಿಯೇ ಅನಿಸುತ್ತದೆ. ಗುಡಿಸಲಿನಿಂದ ಮಲ್ಲಿಯ ಜೊತೆಗೆ ಹೊರಗೆ ಬಂದಾಗ ಎದುರಿಗಿದ್ದ ಹೆಂಡತಿಯನ್ನು ನೋಡಿ ಮಂಜಯ್ಯನಿಗೆ ಒಂದು ನಿಮಿಷ ಮಾತು ಕಟ್ಟಿದ ಹಾಗೆ ಆಗುತ್ತದೆ. ಆದರೆ ಅದು ಕೇವಲ ನಿಮಿಷ ಮಾತ್ರ ನಂತರ ಏನು ಆಗಿಯೇ ಇಲ್ಲವೆನ್ನುವ ರೀತಿಯಲ್ಲಿ ಮಲ್ಲಿಗೆ ಅವನು ''ಅದ್ಯಾಕ ಅಂಗ್ ನಿಂತಿದಿ ನಿನ್ನ ಪಾಡಿಗೆ ನೀನು ಹೋಗೆ ಎನ್ನುತ್ತಾನೆ.'' ತೋಟದಲ್ಲಿ ತಾನು ಬೇರೆ ಹೆಣ್ಣುಗಳೊಂದಿಗೆ ಮಲಗುವ ವಿಷಯವನ್ನು ಕೆಂಪಮ್ಮನೆ ಹೇಳಿರಬೇಕೆಂದು ಕರಾರು ವಾಕ್ಕಾಗಿ ನಿರ್ದರಿಸುವ ಅವನು ಅವಳ ಎರಡು ಕೆನ್ನೆಗೆ ಬಾರಿಸಿದ ಕ್ರೌರ್ಯ ಬರೀ ಕೋಪವಲ್ಲ ಪಶುಮಟ್ಟಿನ ಕ್ರೌರ್ಯವೆ ಎಂದು ಸಾವಿತ್ರಿಗೆ ಅನಿಸುತ್ತದೆ. ಆಗ ಅವಳಿಗೆ ಅನಿಸುವುದು 'ನಾನೊಬ್ಬ ಕ್ರೂರ ರಾಜನ ಬೇಟೆಯ ಪಶುವಾಗಿ ಸಿಕ್ಕಿ ಸೆರೆಯಲ್ಲಿರುವ ಅನುಭವವಾಯಿತು. ಇಂಥ ಕ್ರೌರ್ಯ ಇರುವವನಿಗೆ ಮಾತ್ರ ಕೊಲೆ ಮಾಡುವುದಕ್ಕೆ ಸಾಧ್ಯ' ಎನಿಸುತ್ತದೆ. ಸಾಮಾಜಿಕ ರಕ್ಷಣೆ ನೀಡುವ ವಿವಾಹದ ಚೌಕಟ್ಟಿನ ಬಗ್ಗೆ ಅವನಿಗೆ ಯಾವ ಗೌರವವು ಕಂಡು ಬರುವುದಿಲ್ಲ. ಅನೀತಿ ಮತ್ತು ಸುಳ್ಳಿನ ಮೇಲೆಯೇ ಬದುಕನ್ನು ಕಟ್ಟಿಕೊಳ್ಳುವ ಮಂಜಯ್ಯನಿಗೆ ಯಾವ ಕ್ರಿಯೆಯೂ ಪಾಪವಾಗಿ ಕಾಣುವುದಿಲ್ಲ. ನೈತಿಕ ನೆಲೆಯ ಮೇಲೆ ನಿಂತ ವ್ಯಕ್ತಿಗಿಂತ ಸಾವಿರಪಾಲು ಧೈರ್ಯ ಅವನಲ್ಲಿ ಕಂಡುಬರುತ್ತದೆ. ಅದಕ್ಕೆ ರಾಮಕೃಷ್ಣ ಹೋಗಿ '' ಮಂಜಯ್ಯ ನಿಜ ಸಂಗತಿ ಏನೂ ಅಂಥ ನನಗೆ ಗೊತ್ತಿದೆ. ನಿನ್ನ ತೋಟದ ಗುಡಿಸಲಲ್ಲಿ ಹೊರಟ ಸಿದ್ಧಮ್ಮನ ಮಗಳು ಮಲ್ಲಿ, ಆಚೆ ಕೆರಿನಾಗೆ ಅವಳ ತಂಗಿ ಇನ್ನೂ ಎಷ್ಟೇ ಜನ ಹೆಂಗಸರನ್ನ ನೀನು ಕೂಡ್ತಿರೋದೋ ನಿಜವಲ್ಲವೇ ಹೇಳು.'' ಅಂದದ್ದಕ್ಕೆ ಅದು ಸುಳ್ಳು ಅಂಥ ನಾನು ಗ್ರಾಮ ದೇವತೆ ಎದುರಿಗೆ ಕಂಪು ಕಣಗಲೆ ಹೂವಿನಹಾರ ಹಾಕ್ಕಂಡು ಪ್ರಮಾಣ ಮಾಡ್ತಿನಿ, ನಿಜ ಅಂಥ ನೀನು ಅದೇ ಕೆಂಪು ಕಣಗಲೆ ಹಾರಹಾಕ್ಕೊಂಟು ಪ್ರಮಾಣ ಮಾಡ್ತಿಯಾ ?'' ಎಂದು ಪ್ರಶ್ನಿಸುವ ಬಂಢತನ ಅವನಿಗೆ ಸಹಜ ಗುಣವಾಗಿದೆ. ತನ್ನ ಸಂಸಾರ ಹಾಳಾಯಿತು. ಹೆಂಡತಿಯನ್ನು ಕರೆಸಿಕೊಳ್ಳಬೇಕು ಎನ್ನುವ ಭಾವನೆ ಅವನಲ್ಲಿ ಇಲ್ಲ. ದೇಹ ತೃಷೆ ತಿರಿಸಿಕೊಳ್ಳುವುದಕ್ಕೆ ಒಂದು ಹೆಣ್ಣು ಸಿಕ್ಕರೆ ಸಾಕು ಎನ್ನುವ ಉಪೇಕ್ಷೆ. ತಾನು ಹೀಗೆ ಮಾಡುವುದರಿಂದ ತನ್ನ ಗೌರವಕ್ಕಾಗಲಿ, ತನ್ನ ಮಾವ ಪರಮೇಶ್ವರಯ್ಯನ ಗೌರವಕ್ಕಾಗಲಿ ಕುಂದುಂಟಾಗಬಹುದೆನ್ನುವ ಸಾಮಾಜಿಕ ಚಿಂತನೆ ಅವನಲ್ಲಿ ಕಾಣುವುದಿಲ್ಲ. ತನಗೆ ನೀತಿ ಬೋಧಿಸಲು ಬಂದ ಸತ್ಯಪ್ಪನನ್ನೆ ಅನೀತಿಯ ಮಾರ್ಗಕ್ಕೆ ಎಳೆಯುವ ಅವನ ಬದುಕಿನ ಬಗ್ಗೆ ತನ್ನದೇ ದೃಷ್ಟಿಕೋನ ಹೊಂದಿರುತ್ತಾನೆ. ' ಮುಪ್ಪು ಬಂದು ಆಸಕ್ತಿ ಉಡುಗಿದ ಮೇಲೆ

ಪ್ರಮಾಣ ಪೂರ್ವಕವಾಗಿಯೂ ಬ್ರಹ್ಮಚರ್ಯವೇ ಅಲ್ಲ ಸನ್ಯಾಸವನ್ನೇ ಸ್ವಿಕರಿಸುತ್ತೇನೆ' ಎಂದು ಹೇಳು ಮಾತಿನಲ್ಲಿ ಅವನ ಬದಲಾಗದ ಮನೋಭಾವನೆ ಇದೆ.

ಯಾಯತಿಯಂಥ ಅರಸು ಕೂಡಾ ತನ್ನ ಭೋಗಕ್ಕೊಂದು ವಿರಾಮಕೊಡುವ ಬದಲಾವಣೆಯನ್ನು ಗೀರೀಶ ಕಾರ್ನಡವರು ತಮ್ಮ ಯಾಯತಿ ನಾಟಕದಲ್ಲಿ ಚಿತ್ರಿಕರಿಸುತ್ತಾರೆ. ಆದರೆ ಸಾಕ್ಷಿ ಕಾದಂಬರಿಯ ಮಂಜಯ್ಯನಲ್ಲಿ ಯಾವ ಪರಿವರ್ತನೆಯೂ ಇಲ್ಲ. ಲಕ್ಕುವಿನ ಮಗಳನ್ನು ಮೋಸ ಮಾಡುವ ಸಂದರ್ಭದಲ್ಲಿ ಅವಳಿಗೆ ಅವನು ಹೇಳುವುದು 'ನಿನ್ನನ್ನು ಮದುವೆ ಮಾಡಿಕೊಳ್ಳತೀನಿ' ಎಂದು ಅದೇ ಅವಳ ತಾಯಿಗೂ ಇದೇ ಮಾತನ್ನು ಹೇಳಿ ಬಂಗಾರದ ಸರ ಹಾಕಿ ಇದನ್ನು 'ತಾಳಿ' ಎಂದು ತಿಳಿದುಕೋ ಎನ್ನುತ್ತಾನೆ. ಅವನಿರುವುದೇ ಮೋಸ ಮಾಡುವುದಕ್ಕೆ. ಅನೀತಿಯನ್ನು ಬಿತ್ತುವುದಕ್ಕೆ ಎಲ್ಲಿದ್ದರೂ ಅಲ್ಲೋಲ್ಲ ಕಲ್ಲೋಲ ಮಾಡುವ ಅವನ ನಡತೆ ವಿಚಿತ್ರವಾಗಿದೆ. ವಿವಾಹ ಬಾಹಿರವಾದ ಕಾಮವನ್ನು ತಿರಸ್ಕರಿಸಬೇಕು ಎನ್ನುವುದು ಅನೀತಿ ಈ ನೀತಿಯ ಪರಿವರ್ತನೆಯನ್ನು ದಾಟಿದಾಗ ತಾನು ಸಾಮಾಜಿಕ ಅನ್ಯಾಯ ಮಾಡುತ್ತಿದ್ದೇನೆ ಎನ್ನುವ ತೀಕ್ಷ್ಣವಾದ ಮಾನಸಿಕ ಅಘಾತ ಉಂಟಾಗುತ್ತದೆ. ಇಂಥ ಭಾವನೆ ಸತ್ಯಪ್ಪನಲ್ಲಿಯೂ ಒಂದು ಬಾರಿ ಬಂದು ಹೋಗುತ್ತದೆ.

ಕಾಮದ ನಿಗ್ರಹವನ್ನ ನಾವು ಕಾದಂಬರಿಯ ಹಲವು ಪಥಗಳಲ್ಲಿ ಗುರುತಿಸಬಹುದಾಗಿದೆ. ಕಾಮ ನಿಗ್ರಹ ಸಮಾಜಿಕವಾಗಿ ಒಪ್ಪಿಕೊಂಡ ಒಂದು ಮೌಲ್ಯ. ಇದೆ ನೆಲೆಯ ಮೇಲೆ ಬ್ರಹ್ಮಚರ್ಯ, ಗ್ರಹಸ್ಥ, ವಾನಪ್ರಸ್ಥ, ಸನ್ಯಾಸ ಆಶ್ರಮಗಳ ತಾತ್ವಿಕ ನಿಲುವು ಇದೆ. ಇಂಥ ನೀತಿಯ ಚೌಕಟ್ಟನ್ನು ಕಾಮ ಮೀರಿದಾಗ ಅದು ವ್ಯಕ್ತಿಯಲ್ಲಿ ಅಪರಾಧ ಪ್ರಜ್ಞೆಯನ್ನು ಉಂಟುಮಾಡುತ್ತದೆ. ಪರಮೇಶ್ವರಯ್ಯನ ಪತ್ನಿಯ ಆತ್ಮಹತ್ಯೆಯಲ್ಲಿ ಈ ಸಂಗತಿಯನ್ನು ಗುರುತಿಸಬಹುದು.

ಮಂಜಯ್ಯನ ಹೆಂಡತಿ ಸಾವಿತ್ರಿ ಪ್ರದರ್ಶಿಸುವ ಸಂಯಮ ಶಕ್ತಿ ಅಘಾದವಾದದು. ಎಲ್ಲಿಯೂ ಅವಳು ಅನೈತಿಕ ಸಂಬಂಧಕ್ಕೆ ಒಳಾಗಾಗುವ ಮನೋಭಾವವನ್ನು ತೋರುವುದಿಲ್ಲ. ಮಂಜಯ್ಯನೇ ರೇಪ ಮಾಡುವ ಮೂಲಕ ತನ್ನ ದಾಹ ತೀರಿಸಿಕೊಳ್ಳುತ್ತಾನೆ. ಆದರೆ ಸಾವಿತ್ರಿಗೆ ಮಂಜಯ್ಯ ಹೀಗೆ ಕೂಡಿದ್ದರಿಂದ ಯಾವುದಾದರೂ ಕಾಯಿಲೆ ಬಂದರೆ ಏನು ಗತಿಯೆಂದು ಔಷಧಿ ತೆಗೆದುಕೊಳ್ಳುತ್ತಾಳೆ ಗರ್ಭ ನಿಂತಿದೆ ಎಂದು ತಿಳಿದಾಗ ' ಈ ಗಂಡನ ಜ್ಞಾಪಕ ಬರುವ ಮಗು ಬೇಡ ಅಂಥ ತೀರ್ಮಾನಿಸಿ ಗರ್ಭವನ್ನ ಟರ್ಮಿನೇಟ ಮಾಡಲು ಹೇಳುತ್ತಾಳೆ' ಇಂಥ ಗಂಡ ಅವನೆಂತ ಗಂಡಸು ? ಎಂದು ಪ್ರಶ್ನಿಸುವ ಡಾ. ಹಶೀಮರವರು ಕೇಳುವ ಪ್ರಶ್ನೆ ಅವನಿಗೆ ಬರ್ತನೆ ಮಾಡಿಸಿಕೊಂಡಂತೆ ಎನಿಸುತ್ತದೆ.

ತನ್ನ ಮಗಳ ಜೊತೆಗೂ ಸಂಬಂಧ ಬೆಳಿಸಿದ್ದು ಲಕ್ಕುವಿಗೆ ತಿಳಿದಾಗ, ಮಂಜಯ್ಯನಿಗೊಂದು-ಗತಿಕಾಣುಸುವ ನಿರ್ಧಾರಕ್ಕೆ ಅವಳು ಬರುತ್ತಾಳೆ. ಆಗಾಗ ಅವಳಲ್ಲಿ ಉಂಟಾದ ಕ್ರೋಧದಿಂದ ಕಾಮದ ಸಂಕೇತವಾದ ಶಿಶ್ನವನ್ನೆ ಕೊಯ್ದು ಪೋಲಿಸ್ ಸ್ಟೇಷನ್ನಿಗೆ ಬಂದು ತಾನು ಮಾಡಿದ ಕಾರ್ಯವನ್ನು ವಿವರಿಸುತ್ತಾಳೆ. ಇಲ್ಲಿಗೆ ಮಂಜಯ್ಯನ ಕಾಮ ಪ್ರವಾಹದ ಮುಕ್ತಾಯವಾಗುತ್ತದೆ. ಆದರೆ ಅವನ ತೋಟವೇ ಕಾಮದ ಉದ್ದೀಪನಕ್ಕೆ ಒಂದು ನೆಲೆಯಾಗುತ್ತದೆ.

ಕಾದಂಬರಿಯುದ್ದಕ್ಕು ಮಂಜಯ್ಯನ ಪಾತ್ರಕ್ಕೆ ಅತಿ ಎನಿಸುವಷ್ಟು ಮಹತ್ವವನ್ನು ನೀಡಲಾಗಿದೆ

ತನ್ನ ಸಂಸಾರದ ಬಗ್ಗೆಯೂ ಅವನಿಗೊಂದು ಕಲ್ಪನೆ ಇರದೆ ಇರುವುದು. ತನಗೆ ಮಕ್ಕಳಾಗಬೇಕು. ಎನ್ನುವ ಸಹಜ ಆಶೆಯು ಇರದೆ ಇರುವದನ್ನು ನೋಡಿದಾಗ ಮಂಜಯ್ಯನ ಪಾತ್ರ ಸಹಜವಾದ ಮಾನವೀಯ ಗುಣಗಳಾದ ಕರುಣೆ, ಪ್ರೀತಿ ಸ್ಪರ್ಶವೂ ಇರದ ಅಸ್ವಾಭಾವಿಕ ಪಾತ್ರವೆನಿಸುತ್ತದೆ. ಕಾಮದ ಯಥೇಚ್ಚ ವಿಜೃಂಭಣೆಯನ್ನು ಕಾದಂ.ಬರಿಯುದ್ಧಕ್ಕೂ ನೋಡುತ್ತೇವೆ ಪ್ರಕೃತಿಯನ್ನು ಗೆಲ್ಲುವುದು ಮಾರ್ಪಡಿಸುವುದು ಅದಕ್ಕೊಂದು ಮಾನವ ಸ್ಪರ್ಷವನ್ನ ನೀಡುವುದು ನಿರ್ಭಂಧ ಹೇರಿ ನಮ್ಮ ಬದುಕಿಗೆ ಸಂತೋಷ ತರುವ ಹಾಗೆ ಮಾಡಿಕೊಳ್ಳುವ ವಿಧಾನವನ್ನೆ ಸಂಸಕೃತಿಯೆಂದೂ ಕರೆಯುವದಾದರೆ ಈ ಮಂಜಯ್ಯ ಇಂಥ ಸಂಸ್ಕೃತಿಯಿಂದ ಬಹುದೂರ ಇದ್ದಾನೆ. ಮನುಷ್ಯ ಸಂಬಂಧಗಳ ಭಾವನೆಗಳನ್ನು ಅರಿಯದ ಈ ವ್ಯಕ್ತಿಗೆ ಅವನ ಕುಟುಂಬದ ಯಾವ ಪಾತ್ರಗಳನ್ನು ಕಾದಂಬರಿಕಾರರು ಇಲ್ಲಿ ಪ್ರಸ್ತಾಪಿಸಿದೆ ಇರುವುದು. ವಿಚಿತ್ರವಾಗಿದೆ. ಅವನ ತಂದೆ ತಾಯಿ, ಅಣ್ಣ, ತಮ್ಮ ಅಕ್ಕ, ತಂಗಿ ಈ ಪಾತ್ರಗಳು ಕುರಿತು ಕಿಂಚಿತ್ತು ಕಾದಂಬರಿಯಲ್ಲಿ ಪ್ರಸ್ತಾಪವಿರದೇ ಹೋಗಿರುವುದು ದೊಡ್ಡ ಲೋಪವಾಗಿದೆ.

ಈ ಕಾದಂಬರಿಯನ್ನು ತರುಣರು ಓದಿದರೆ ಬಹುಶಃ ಮಂಜಯ್ಯನ ವಿಕಾರ ಅವರಿಗೂ ತಗುಲಬಹುದು ಎನ್ನುವ ಅನುಮಾನ ಕಾಡುವಷ್ಟು ಮಂಜಯ್ಯನ ಪಾತ್ರಕ್ಕೆ ಕಾಮದ ಪ್ರಭಾವವನ್ನು ವಿಶೇಷ ಆಸಕ್ತಿಯಿಂದ ಚಿತ್ರಿಸಲಾಗಿದೆ, ಕಾಮದ ಅನುಭೋಗದ ದೃಶ್ಯಗಳಂತೂ ಜೀವಂತ ಚಿತ್ರಗಳನ್ನು ಕಟ್ಟಿಕೊಡುತ್ತವೆ.

ಪರಮೇಶ್ವರಯ್ಯನ ಹೆಂಡತಿ ಮಂಜಯ್ಯನಿಗೆ ಮನಸೋಲುವುದು ಪರಮೇಶ್ವರಯ್ಯನ ಮಗಳು ಸಾವಿತ್ರಿ ಮಂಜಯ್ಯನನನ್ನು ಮದುವೆಯಾಗುವುದು ನೀತಿಯ ನೆಲೆಯನ್ನು ಅಲ್ಲಾಡಿಸುವ ಸಂಗತಿಗಳಾಗಿವೆ.

ಸರೋಜಾಕ್ಷಿ ತನಗೆ ಒಲಿಯದೇ ಹೋದಾಗ ಮಂಜಯ್ಯನಿಗೆ ಸೋಲಿನ ಅನುಭವ ಉಂಟಾಗುತ್ತದೆ ತನ್ನ ಕಾಮದ ಶಕ್ತಿ ಹ್ರಾಸವಾದದಾ ತಾನೇ ತನ್ನ ಶಿಶ್ನವನ್ನು ಕೊಯ್ದುಕೊಳ್ಳುವ ಅವನ ನಿರ್ಧಾರ ಸಹಜವಾದ ಮನೋಧರ್ಮದ ನಿರ್ಧಾರವೆನಿಸುವುದಿಲ್ಲ.

# ನೆಲೆ

ಆಧುನಿಕತೆ ಸಾಮಾಜಿಕ ಮತ್ತು ಕೌಟುಂಬಿಕ ಬದುಕಿನಲ್ಲಿ ಹಲವಾರು ಬದಲಾವಣೆಗಳನ್ನು ತಂದಿದೆ. ಆಧುನಿಕ ವಿಚಾರ ಧಾರೆಯ ಫಲವಾಗಿ ಮಹಿಳೆ ಇಂದು ಎಲ್ಲಾ ಕ್ಷೇತ್ರಗಳಲ್ಲಿಯೂ ದುಡಿಯುವಂತಾಗಿದೆ ಅಡುಗೆ ಮನೆಗೆ ಮಾತ್ರ ಸೀಮಿತವಾದ ಅವಳ ಬದುಕು ವಿವಿಧ ನೆಲೆಗಳಲ್ಲಿ ಹೊಸತನವನ್ನು ಪಡೆದಿದೆ. ಪತಿ, ಪತ್ನಿಯರಿಬ್ಬರೂ ಇಂದು ಹಲವಾರು ಕ್ಷೇತ್ರಗಳಲ್ಲಿ ಭಿನ್ನ ಭಿನ್ನ ಉದ್ಯೋಗಗಳಲ್ಲಿ ತೊಡಗಿಸಿ ಕೊಂಡಿದ್ದಾರೆ. ಗಂಡನ ದುಡಿಮೆಯನ್ನೆ ನೆಚ್ಚಿಕೊಂಡು ಅವನ ಇಷ್ಟಗಳಿಗನುಸಾರವಾಗಿ, ಅವನ ಸುಖವನ್ನೆ ತನ್ನ ಸುಖವೆಂದು ಮೌನವಾಗಿದ್ದ ಮಹಿಳೆಗೆ ಇಂದು ಆರ್ಥಿಕ ಸವಲತ್ತುಗಳು ಉದ್ಯೋಗಗಳಿಂದ ದೊರೆಯುವಂಥಾಗಿದೆ. ಮಹಿಳೆಯರು ಸಮಾನತೆಗಾಗಿ ಹೋರಾಡುತ್ತಿದ್ದಾರೆ. ಸಂಪ್ರದಾಯ ಸಮಾಜ ಬದಲಾಗಿ ಆಧುನಿಕತೆಗೆ ತನ್ನನ್ನು ಒಡ್ಡಿಕೊಳ್ಳುತ್ತಿದೆ. ಸ್ತ್ರೀಯರು ಶಿಕ್ಷಣ ಪಡೆಯುವಲ್ಲಿ ತೀವ್ರವಾದ ಪೈಪೋಟಿಯನ್ನು ತೋರುತ್ತಿದ್ದಾರೆ. ಬ್ಯಾಂಕಿಂಗ್ ಕ್ಷೇತ್ರದಲ್ಲಿ, ಶಿಕ್ಷಣ ಕ್ಷೇತ್ರದಲ್ಲಿ, ರಾಜಕೀಯ ಕ್ಷೇತ್ರದಲ್ಲಿ ಇನ್ನು ಹಲವಾರು ಕ್ಷೇತ್ರಗಳಲ್ಲಿ ಇಂದು ಭಾರತೀಯ ಸಮಾಜದಲ್ಲಿ ಮಹಿಳೆ ತನ್ನನ್ನು ತೊಡಗಿಸಿಕೊಂಡಿದ್ದಾಳೆ.

'ನೆಲೆ' ಕಾದಂಬರಿ ಕುಮಾರ ಮತ್ತು ಮಾಲತಿಯರ ಆಧುನಿಕ ಬದುಕಿನ ತೀವ್ರ ಗಡಿಬಿಡಿಯ ದೈನಂದಿನ ಚಟುವಟಿಕೆಯೊಂದಿಗೆ ಕಾದಂಬರಿ ಪ್ರಾರಂಭವಾಗುತ್ತದೆ. ಮಾಲತಿ ಸಂಪ್ರದಾಯಸ್ಥ ಮಹಿಳೆ ಅಲ್ಲ. ಬ್ಯಾಂಕಿನಲ್ಲಿ ಮ್ಯಾನೇಜರ್ ಹುದ್ದೆ ನಿರ್ವಹಿಸುವಂಥವಳು. ಕುಮಾರ ಕೂಡಾ ಫ್ಯಾಕ್ಟರಿಯಲ್ಲಿ ಉದ್ಯೋಗ ಹೊಂದಿರುವಾತ.

ಕಾಳಪ್ಪ ಮತ್ತು ಜವರಾಯಿ ಇಬ್ಬರೂ ಆತ್ಮೀಯ ಸ್ನೇಹಿತರು. ಜವರಾಯ ಮಗ ಕುಮಾರ್ ತಂದೆಗೆ 'ನನ್ನನ್ನು ಹುಟ್ಸಿ ಅಂತ ನಾನು ನಿಮ್ಮನ್ನ ಕೇಳಿರಲಿಲ್ಲ, ಹುಟ್ಸಿದ್ದು ನಿಮ್ಮ ಮೊದಲ ತಪ್ಪು' ಎಂದು ಕೇಳಿದ ಮಾತನ್ನೆ ಹಿಡಿದು ಕಾಳಪ್ಪ ''ನೀನು ನನ್ನನ್ನು ಹುಟ್ಟಿಸಿದ್ದು, ಹೆತ್ತದ್ದು ತಪ್ಪು ಅಂತ ಬರೀ ಅಂದರೆ ತಪ್ಪು ಸಾಧಿಸಿ ತೋರಿಸಿದ ಹಾಗಾಗುಲ್ಲ. ಇಕೋ ನೋಡು, ನೀನು ಸೃಷ್ಟಿಸಿದ ನನ್ನ ಮೇಲೆ ನನಗೆ ಇಷ್ಟವಿಲ್ಲ. ಆದ್ದರಿಂದ ಆತ್ಮಹತ್ಯೆ ಮಾಡ್ಕತೀನಿ ಅಂತ ಭಾವ ರಹಿತನಾಗಿ ಜೀವ ಕಳೆದುಕೊಂಡರೆ ಮಾತ್ರ ಹುಟ್ಟಿಸಿದ, ಹೆತ್ತ ಕೆಲಸವನ್ನು ತಪ್ಪಂತ ಸಾಧಿಸಿದ ಹಾಗಾಗುತ್ತೆ'' (ನೆಲೆ, ಪು -೧೭) ಎಂದು ಪ್ರಶ್ನಿಸಿ ಕುಮಾರನಿಗೆ ಬೆವರು ತರಿಸುತ್ತಾರೆ. ಜನ್ಮ ಕೊಟ್ಟ ತಂದೆಯ ಬಗ್ಗೆಯೇ ಇಂಥ ಮಾತಾಡುವ ಮಗನ ಮೂರ್ಖತನವನ್ನು ಅವನಿಗೆ ಮನಗಾಣಿಸುತ್ತಾನೆ.

ತಂದೆಗೆ ತಪ್ಪದೇ ಒಂದನೆ ತಾರೀಖಿನಿಂದ ನೂರು ರುಪಾಯಿ ಕಳಿಸುತ್ತೇನೆಂದು ಆರ್ಥಿಕ ಸಹಾಯದ ಮಾತನಾಡುತ್ತಾನೆ.

ಸಾಮಾನ್ಯವಾಗಿ ನಮ್ಮ ದೇಶದಲ್ಲಿ ವಿದ್ಯಾಭ್ಯಾಸ ಮಾಡುವುದು ಉದ್ಯೋಕ್ಕಾಗಿ ಎಂಬ ಭಾವನೆ ಈಗಲೂ ಸಹಿತ ಇದೆ. ಮನೆಯಲ್ಲಿ ಒಬ್ಬನಿಗೆ ಯಾವುದಾದರೊಂದು ನೌಕರಿ ದೊರೆತರೆ ಅವನ ಸಂಬಳದಿಂದ ಕುಟುಂಬ ಹೇಗಾದರೂ ಬದುಕಬಹುದು ಎನ್ನುವ ಆರ್ಥಿಕ ಲೆಖ್ಖಾಚಾರವೂ ಇದರಲ್ಲಿ ಇದೆ. ಕುಮಾರ್ ಇದೇ ದೃಷ್ಟಿಯಿಂದ ಹಣ ಕಳಿಸಿದರೆ ತನ್ನ ಋಣ ಮುಗಿಯುತ್ತದೆ ಎನ್ನುವ ಅರ್ಥದಲ್ಲಿ ಮಾತನಾಡುತ್ತಾನೆ. ಅದಕ್ಕೆ ಕಾಳಪ್ಪನವರು ಪಶ್ಚಿಮ ದೇಶದಲ್ಲಿ ಮಕ್ಕಳು ತಂದೆತಾಯಿಗಳಿಗೆ ಏನೂ ಕಳಿಸೊಲ್ಲ. 'ನಮ್ಮ ದೇಶದಲ್ಲಿ ಕೂಡಾ ಆರ್ಥಿಕ ವ್ಯವಸ್ಥೆ ಸರಿಯಾಗಿ ಬೆಳೆದ ಮೇಲೆ ಮಕ್ಕಳಿಗೆ ಹೊಣೆ ಇರುಲ್ಲ' ಎಂದು ಎರಡೂ ಸಮಾಜದ ಚಿತ್ರಣವನ್ನು ನೀಡುತ್ತಾರೆ.

ಬದುಕಿನ 'ನೆಲೆಯ'ಯ ವಿವಿಧ ಸ್ವರೂಪಗಳನ್ನು ಕಾದಂಬರಿ ಚಿತ್ರಿಸುತ್ತಾ ಸಾಗುತ್ತದೆ. ತನ್ನದೇ ಆದ ಸಂಸಾರಕ್ಕೆ ಅಂಟಿಕೊಳ್ಳುವ ಕುಮಾರ, ಛಾಪಾಕಾಗದ ಮಾರುತ್ತ ಜೀವನವನ್ನು ನಿರ್ವಹಿಸುವ ಅವನ ತಂದೆ ಜವರಾಯಪ್ಪ. ಗಂಡನನ್ನು ಅರ್ಥ ಮಾಡಿಕೊಳ್ಳದೇ ಸಾಂಸಾರಿಕ ಸಂಬಂಧವನ್ನೆ ಅರ್ಥಹೀನಗೊಳಿಸುವ ಜವರಾಯಪ್ಪನ ಹೆಂಡತಿ ಸುಬ್ಬಲಕ್ಷ್ಮಿ, ಜವರಾಯಪ್ಪನವರ ಇಳಿ ವಯಸ್ಸಿನಲ್ಲಿ ಸಂಬಂಧ ಸ್ಥಾಪಿಸಿಕೊಳ್ಳುವ ನರ್ಸ್ ಪಾರ್ವತಮ್ಮ. ಮದುವೆ ಮಾಡಿಕೊಳ್ಳದೇ ಏಕಾಂಗಿಯಾಗಿ ಉಳಿದ ಕಾಳಪ್ಪ, ಖಗೋಳ ವಿಜ್ಞಾನದಲ್ಲಿ ಆಸಕ್ತಿ ತಾಳುವುದು ಮುಂತಾದ ವಿವರಗಳೊಂದಿಗೆ ಕಾದಂಬರಿ ಬೆಳವಣಿಗೆಯನ್ನು ಪಡೆದುಕೊಳ್ಳುತ್ತದೆ.

ಜವರಾಯಪ್ಪ ನರ್ಸ್ ಪಾರ್ವತಮ್ಮನ ಜೊತೆ ಸಂಬಂಧ ಸ್ಥಾಪಿಸಿಕೊಂಡಾಗ ಹೆಂಡತಿ ಸುಬ್ಬಲಕ್ಷ್ಮಿ ತೀವ್ರ ಕೋಪವನ್ನು ತೋರಿಸುತ್ತಾಳೆ. ತನಗೆ ಗೊತ್ತಿದ್ದ ಎಲ್ಲ ಹೊಲಸು ಬೈಗುಳಗಳನ್ನು ಪಾರ್ವತಮ್ಮನಿಗೆ ಅಸಭ್ಯವಾಗಿ ಬೈಯುತ್ತಾಳೆ. ಗಂಡ ತನ್ನವನಾಗಿರಬೇಕೆಂದು ಬಯಸುವುದು ಸ್ತ್ರೀ ಸಹಜ ಗುಣ. ಬೇರೊಬ್ಬಳೊಂದಿಗೆ ಲೈಂಗಿಕ ಸಂಬಂಧ ಹೊಂದಿದ ಗಂಡ ತನಗೆ ತನ್ನ ಕುಟುಂಬಕ್ಕೆ ಎಂಥ ಭದ್ರತೆ ಕೊಡಬಹುದು ಎನ್ನುವ ತಳಮಳ ಪ್ರಾರಂಭವಾಗುತ್ತದೆ. ಮಧ್ಯಮ ವರ್ಗದ ಕುಟುಂಬಗಳಲ್ಲಿ ಈ ಸಮಸ್ಯೆ ಇದ್ದೇ ಇದೆ. ಪತಿಯನ್ನು ಅರ್ಥಮಾಡಿಕೊಳ್ಳದ ಪತ್ನಿ, ಪತ್ನಿಯನ್ನು ಅರ್ಥಮಾಡಿಕೊಳ್ಳದ ಪತಿ. ಒಬ್ಬರೊಬ್ಬರಿಗೆ ಅರ್ಥವಾಗದೇ ಬೆಳೆಯುತ 'ಸಾಂಸ್ಕೃತಿಕ' ಅಸಮತೋಲನ ಹೀಗೆ ಇಂಥ ಸಂಬಂಧ ಸ್ಥಾಪನೆಯಾಗಲು ಕಾರಣವಾಗುತ್ತವೆ. ಗುಂಡಪ್ಪನವರು ಹೆಂಡತಿಯನ್ನು ದಬಾಯಿಸಿ ಮತ್ತೊಬ್ಬಳನ್ನು ಇಟ್ಟುಕೊಳ್ಳುವುದು ಸಮಾಜದಲ್ಲಿ ದೊರಕುವ ಸಂಗತಿಗಳೇ ಆಗಿವೆ.

ಜವರಾಯಪ್ಪನಿಗೆ ತನ್ನ ಹೆಂಡತಿ ಸಾಧಾರಣ ಸ್ವಭಾವದ ಹೆಣ್ಣು ಎನಿಸುತ್ತದೆ. ಘನತೆಯಿಂದ ಅವಳು ನಡೆದುಕೊಳ್ಳದಿರುವ ಕಾರಣದಿಂದ ಅವಳ ಬಗ್ಗೆ ತಿರಸ್ಕಾರ ಹುಟ್ಟುತ್ತದೆ. ಅವಳ ಸಂಬಂಧದಿಂದ ವಿಮುಖನಾಗುತ್ತಾನೆ. ಪಾರ್ವತಿ ಘನತೆಯುಳ್ಳ ಹೆಂಗಸೆಂದು ಅನಿಸುತ್ತದೆ ತುಂಬಾ ಸುಸಂಸ್ಕೃತ ಸ್ವಭಾವವೆಂದೂ ಅವಳೊಂದಿಗೆ ಸಂಬಂಧವನ್ನು ಜವರಾಯಪ್ಪ ಬೆಳೆಸುತ್ತಾನೆ.

ಜವರಾಯಪ್ಪನದೂ ಕಾಳಪ್ಪನದೂ ಗಾಢ ಪ್ರೀತಿಯುಳ್ಳ ವಿಶ್ವಾಸವುಳ್ಳ ಸ್ನೇಹ, ವಿದ್ಯಾರ್ಥಿ

ಜೀವನದಿಂದ ಹಿಡಿದು ಕೊನೆಯವರೆಗೆ ಅದ ಸ್ನೇಹ ವನ್ನು ಅವರಿಬ್ಬರೂ ಉಳಿಸಿಕೊಂಡು ಬರುತ್ತಾರೆ. ಒಬ್ಬರ ನೆನಪು ಮತ್ತೊಬ್ಬರಲ್ಲಿ ಕಲಕುವುದು ಸಾಮಾನ್ಯವೆನ್ನಿಸುವ ಆಪ್ತತೆ ಅವರಲ್ಲಿ ಸದಾ ಇದೆ. ಇಬ್ಬರು ಆ ಜನ್ಮದ ಬ್ರಹ್ಮಚರ್ಯದ ವಚನವನ್ನು ಮಾಡುತ್ತಾರೆ. ಆದರೆ ಜವರಾಯಿ ಬ್ರಹ್ಮಚರ್ಯೆ ತೊರೆದು ನಾಲ್ಕು ಮಕ್ಕಳನ್ನು ಹೆತ್ತು ಬೆಳೆಸುತ್ತಾನೆ. ಕಾಳಪ್ಪ ಮಾತ್ರ ಮದುವೆಯಾಗುವುದಿಲ್ಲ ಆದರೆ ಬ್ರಹ್ಮಚರ್ಯೆಯ ನಿಷ್ಠೆಯೂ ಉಳಿಯುವುದಿಲ್ಲ.

ಸಂಸಾರದ ಬಗ್ಗೆ ನಿರ್ಲಿಪ್ತತೆ ಉಂಟಾಗಿ ತನ್ನ ಕುಟುಂಬದಿಂದ ದೂರವಾಗಿ ಹೊಟೇಲಿನಲ್ಲಿಯೇ ವಾಸವಾಗುವುದು. ತನ್ನ ಮಕ್ಕಳು ಚೆನ್ನಾಗಿ ಬೆಳೆಯಬೇಕೆಂದು ಏನೆಲ್ಲ ಆಸೆಯಿಟ್ಟುಕೊಂಡು ಜವರಾಯಿಯ ಮನೋನಿರ್ಧಾರ ವಿಚಿತ್ರವೆಂಬಂತೆ ಬದಲಾಗುವುದು ಕಾದಂಬರಿಯಲ್ಲಿ ಕಂಡುಬರುತ್ತದೆ. ತನ್ನ ಮಗ ದೊಡ್ಡ ಕವಿಯಾಗಬೇಕು ಆಗುತ್ತಾನೆ ಎನ್ನುವ ಆಶಭಾವನೆಯಿಂದ ಕನ್ನಡದ ಖ್ಯಾತ ಕವಿ 'ಕುಮಾರವ್ಯಾಸ'ನ ಹೆಸರನ್ನು ತನ್ನ ಮಗನಿಗಿಡುವುದು ನಂತರ ಈ ಆಸೆಗಳು ಈಡೇರದೇ ಹತಾಶನಾಗಿ ತಾನು ತನ್ನ ಕುಟುಂಬದ ಜೊತೆ ಬದುಕುವುದು ಅರ್ಥಹೀನವೆಂಬ ಭಾವನೆಯನ್ನು ತಾಳುವುದು. ಜವರಾಯನ ಮನೋಭಾವದಲ್ಲಿ ಉಂಟಾದ ಬದಲಾವಣೆ. ಹೆಣ್ಣುಮಕ್ಕಳು ಸಹಿತ ತಮ್ಮ ಗಂಡನನ್ನು ತಾವೇ ಹುಡುಕಿಕ್ಕೊಬೇಕು ತಮ್ಮ ಅನ್ನವನ್ನು ತಾವೇ ದುಡಿದುಕೊಳ್ಳಬೇಕು ಎಂದು ನಿರ್ಧರಿಸಿ ಕಾಳಪ್ಪನಿಗೆ ಪತ್ರ ಬರೆಯುತ್ತಾನೆ. (ನೆಲೆ, ಪು-೧೮)

ಕಾಳಪ್ಪ ಆರ್ಥಿಕವಾಗಿ ತುಂಬಾ ಸುಸ್ಥಿತಿಯಲ್ಲಿರುವ ವ್ಯಕ್ತಿ. ಮದುವೆಯಾಗದಿದ್ದರೂ ಮೈಥುನ ಕ್ರಿಯೆಗೇನೂ ಕೊರತೆಯಾಗದಂತೆ ಅನುಭವಿಸುವ ರೂಢಿ. ಕಾಳಪ್ಪ ಪ್ರವಾಸಿ ವ್ಯಾಪಾರ ಪ್ರತಿನಿಧಿಯಾಗಿ ಸಮಾಜದ ವಿವಿಧ ಬಗೆಯ ಅನುಭವಗಳನ್ನು ಪಡೆದು ಕೊಂಡಿದ್ದಾನೆ. ಅವನನ್ನು ಕಾಡುವುದು 'ಕಾಮ'ದ ವಿವಿಧ ಸ್ವರೂಪ. ಗಂಡಸು ದೇಹ ಸುಖಕ್ಕೆ ಮಾತ್ರ ಮದುವೆಯಾಗುತ್ತಾರೆಯೇ? ಎಂಬ ಪ್ರಶ್ನೆ ಕಾಡುತ್ತದೆ. ಮದುವೆಯಾಗದೆ ಉಳಿಯುವ ಗಂಡಸರ ಬಗ್ಗೆ ಹೇಗೆ ಅಪನಂಬಿಕೆ ಕಾಡುತ್ತದೆ ಎಂಬುದನ್ನು ಚಂದ್ರಶೇಖರಯ್ಯನವರ ಮನೆಯಲ್ಲಿ ಊಟಮಾಡುವ ಪ್ರಸಂಗದಲ್ಲಿ ವಿವರಿಸಲಾಗಿದೆ. " ತಿಂಗಳಿಗೆ ಇನ್ನೂರು ರೂಪಾಯಿ ಕೊಟ್ಟು ಚಂದ್ರಶೇಖರಯ್ಯನ ಮನೆಯಲ್ಲಿಯೇ ಅತಿಥಿ ಊಟ ಮಾಡಲು ಪ್ರಾರಂಭಿಸಿದ ಮೇಲೆ ಅವರ ತಾಯಿ ತುಂಬಾ ಚೆನ್ನಾಗಿ ಕಾಳಪ್ಪನನ್ನು ನೋಡಿಕೊಳ್ಳುತ್ತಾರೆ. ಅವನ ಹೆಂಡತಿ ಕೂಡಾ ಕಾಳಪ್ಪ ಊಟಕ್ಕೆ ಹೋದ ಕೂಡಲೆ ತಡ ಮಾಡದೇ ತಟ್ಟೆಹಾಕಿ ಬಡಿಸುತ್ತಿದ್ದಳು. ಆದರೆ ಚಂದ್ರಶೇಖರಯ್ಯ ಕಾಳಪ್ಪನ ಹೋಟಲ್ ರೂಮಿಗೆ ಬಂದು..."ದಯವಿಟ್ಟು ಬೇಜಾರು ಮಾಡ್ಕಬ್ಯಾಡಿ ನಮ್ಮನೇಲಿ ಆಡಿಗಿ ಮಾಡೊಕೆ ಸ್ವಲ್ಪ ತೊಂದರೆ ಇದೆ." ಎಂದಾಗ ಕಾಳಪ್ಪನಿಗೆ ತೊಂದರೆಯಿರುವುದು ಅಡುಗೆ ಮಾಡುವುದರ ಬಗ್ಗೆ ಅಲ್ಲ, ತೊಂದರೆ ಅವನ ಮನಸ್ಸಿಗಾಗಿದೆ. ಅವನ ಹೆಂಡತಿ ಅಡುಗೆ ಬಡಿಸೋಕೆ ಇಂಟ್ರಸ್ಟ್ ತೋರಿಸುತ್ತಿದ್ದರಿಂದಲೇ ಅವನಿಗೆ ಸಹಿಸಿಲ್ಲ. ಅನುಮಾನ ಹುಟ್ಟಿರಬಹುದು, ಏನೇನೋ ಕಲ್ಪಿಸಿ ಕೊಂಡಿರಬಹುದು. ಇವನು ಹೇಳಿ, ಕೇಳಿ ಅವಿವಾಹಿತ ಅಂಥ ಹೆದರಿರಬಹುದು." (ನೆಲೆ, ಪು-೭೯) ಎಂದು ಭಾವಿಸುತ್ತಾನೆ.

ತನ್ನ ಮನಸ್ಸನ್ನೇ ವಿಶ್ಲೇಷಣೆಗೆ ಒಳಪಡಿಸಿಕೊಳ್ಳುವ ಕಾಳಪ್ಪ ತಾನು ಕ್ರಯಕೊಟ್ಟು ಅಗತ್ಯಬಿದ್ದಾಗ

ಕಾಮವನ್ನು ಪೂರೈಸಿಕೊಳ್ಳುತ್ತಿದ್ದರು. ಮತ್ತು ಕ್ರಿಯವಿಲ್ಲದ ಸಂದರ್ಭದಲ್ಲಿ ಕಾಮವನ್ನೇ ನಿರಾಕರಿಸುವ ಸ್ಥಿತಿಯನ್ನು ನೆನೆದು ಅವನಿಗೆ ಆಶ್ಚರ್ಯವಾಗುತ್ತದೆ. ತನ್ನಂಥ ಮದುವೆ ಬಯಸದೇ ಕಲ್ಕತ್ತಯ ಕ್ಲಬ್ಬಿನ ಶ್ರೀಮಂತ ಸದಸ್ಯರು ಖುಷಿಗಾಗಿ ಮೈಥುನಕ್ಕೆ ಒಪ್ಪಿಗೆ ನೀಡುವ ಇಂಗಿತ ವ್ಯಕ್ತಪಡಿಸಿದರೂ ನಿರಾಕರಿಸುತ್ತಾನೆ. ಹೈದ್ರಾಬಾದಿನ ಇರಾನ ಬುಡಕಟ್ಟಿನ ಹುಡಿಗಿಗೆ ಲೆಖ್ಖಚುಕ್ತ ಮಾಡುವಲ್ಲಿ ತಾರಾತುರಿ ತೋರುತ್ತಾನೆ. ಯಾವುದೋ ಒಂದು ದಿನ ಕೊಟ್ಟರಾಯಿತು ಎಂದು ಅವಳ ಕ್ರಿಯದ ಬಗ್ಗೆ ನಿರಾಕರಣೆ ಮಾಡಿದರೂ ಯಾವುದರಲ್ಲೂ ಬಾಕು ಉಳಿಸಬಾರದು. ಮೈಥುನದ ಕಾಯಕದಲ್ಲಂತೂ ಕೊಡದೇ ಕೂಡದು ಎನ್ನುವ ಮನೋಭಾವ. ತನ್ನಲ್ಲಿಯೇ ಬೆಳೆದ ಈ ಮನೋಭಾವದ ಬಗ್ಗೆ ಆಶ್ಚರ್ಯವೆನಿಸುತ್ತದೆ. ''ಯಾರದರೂ ಮನೋರೋಗ ತಜ್ಞ ವಿಶ್ಲೇಷಿಸಬೇಕಾದ ವ್ಯಕ್ತಿಯೇ ನಾನು ಈ ವಿಷಯದಲ್ಲಿ ?'' (ನೆಲೆ, ಪು-೭೯)

ಮದುವೆಯಾದ ಗಂಡಸಿಗಿಂತ ತನ್ನ ಕ್ರಿಯವೇ ಹೆಚ್ಚು ಸ್ವತಂತ್ರವಾದದು ಎಂಬ ಮನೋಭಾವನೆ ತಾಳುತ್ತಾನೆ. ಗಂಡಸಿನ ಬಂಜೆತನದ ಮಾನಸಿಕ ತಳಮಳವನ್ನು ವಿವಿಧ ಒಳ ನೋಟಗಳಿಂದ ಚಿತ್ರಿಸಲಾಗಿದೆ.

''ನಕ್ಷತ್ರ ಲೋಕಗಳು ಸೂಚಿಸುವ ವಿಶ್ವದ ಅಘಾದತೆಯೊಂದಿಗೆ ಹುಟ್ಟಿ ಬರುವ ಬಂಜೆತನ ಗಂಡನ್ನು ಸದಾ ಆವಸಿರುವ ಮೃತ್ಯು ಪ್ರಜ್ಞೆ ಈ ಬಂಜಿತನವನ್ನು ದೂರವಾಗಿಸಲೆಂಬಂತೆ ಹೆಣ್ಣು ಬಯಸುವ, ಹೊತ್ತುಕೊಳ್ಳುವ ಮಾತೃತ್ವದ ಆಶೆ ಇವುಗಳ ಆಳ ವಿಸ್ತಾರವನ್ನು ಶೋಧಿಸುವ ಪ್ರಯತ್ನ 'ನೆಲೆ' ಕಾದಂಬರಿಯಲ್ಲಿದೆ. ಜೀವನದ ನಿಗೂಢವೆನಿಸಿರುವ ರೀತಿಗಳನ್ನು, ಕೌಟುಂಬಿಕವೆನಿಸುವ ಕಲ್ಪನೆಗಳ ಇತಿಮಿತಿಗಳನ್ನು ವೈಚಾರಿಕ ನೆಲೆಯಲ್ಲಿ ವಿವೆಚಿಸಿರುವ 'ನೆಲೆ' ಪ್ರೌಢ ಕೃತಿಯಾಗಿದೆ'' ಎಂಬ ವ್ಯಾಸರಾಯ ಬಲ್ಲಾಳರ ಅಭಿಪ್ರಾಯ ನೆಲೆ ಕಾದಂಬರಿಯ ಉದ್ದೇಶ, ಆಶಯಗಳನ್ನು ಪ್ರತಿಬಿಂಬಿಸುತ್ತದೆ.

ಜವರಾಯಿಯ ಸಾವಿನ ನಂತರ ಬದುಕಿನ ವಿವಿಧ ಅರ್ಥಗಳ ಶೋಧ ಕಾದಂಬರಿಯಲ್ಲಿದೆ.

# ಪರ್ವ

'ಪರ್ವ' ವಸ್ತುವಿನ ಆಯ್ಕೆ ಮತ್ತು ತಂತ್ರದ ದೃಷ್ಟಿಯಿಂದ ವಿಭಿನ್ನವಾದ ಕೃತಿಯಾಗಿದೆ. ೧೨-೧೦-೭೫ ರಿಂದ ೨೭-೧೨-೭೯ರ ಒಂದು ವರ್ಷ ಎರಡು ತಿಂಗಳ ಅವಧಿಯಲ್ಲಿ ಈ ಕಾದಂಬರಿ ರಚಿತವಾಗಿದೆ ಎಂದು ಕಾದಂಬರಿಕಾರರು ತಿಳಿಸುತ್ತಾರೆ. ೫೯೬ ಪುಟಗಳ ಬೃಹತ ಕೃತಿ (೧೯೯೫ರ ನಾಲ್ಕನೆಯ ಮುದ್ರಣ) ವ್ಯಾಸ ಭಾರತದ ೧೦-೧೧ ಪರ್ವಗಳ ಕಥೆಯನ್ನು ಸೊಗಸಾದ ಹೊಸಗನ್ನಡದಲ್ಲಿ ನಿರೂಪಿಸಲಾಗಿದೆ.

'ಪರ್ವ' ಬರೆದ ಸಂದರ್ಭದ ಸಂಗತಿಗಳನ್ನು ಲೇಖಕರು ತಮ್ಮ ನಾನೇಕೆ ಬರೆಯುತ್ತೇನೆ ಕೃತಿಯಲ್ಲಿ ವಿವರವಾಗಿ ವಿವರಿಸಿದ್ದಾರೆ. ''ಗಡವಾಲ್ ಭಾಗದ ಹಿಮಾಲಯದಲ್ಲಿ ಸಂಚರಿಸುತ್ತಿದ್ದಾಗ ಬಹುಪತೀ ಪದ್ಧತಿಯುಳ್ಳ ಒಂದು ಕಿರು ಹಳ್ಳಿಯಲ್ಲಿ ರಾತ್ರಿ ತಂಗುವ ಪ್ರಸಂಗ ಬಂತು. ಮನೆಗೆ ಸೊಸೆಯಾಗಿ ಬಂದವಳು ಅಣ್ಣತಮ್ಮಂದಿರಿಗೆಲ್ಲ ಸಮನಾಗಿ ಹೆಂಡತಿಯಾಗುತ್ತಾಳೆ.. ಎಷ್ಟು ಜನ ಗಂಡಂದಿರಿದ್ದರೂ ಎಲ್ಲರಿಗೂ ಸಮಾನವಾಗಿ ಹೆಂಡತಿ. ಮದುವೆಯಾಗುವುದು ಮಾತ್ರ ಹಿರಿಯನ ಹೆಸರಿಗೆ ಬಳಕೆಯ ಹಕ್ಕು, ಆಚರಣೆಗಳಲ್ಲಿ ಸೋದರರಿಗೆಲ್ಲ ಸಮಾನ ಅಧಿಕಾರ. ಈ ಬಗೆಗ ಮಾನವ ಸಂಸ್ಕೃತಿಜ್ಞರ ಪುಸ್ತಕಗಳನ್ನು ಓದಿದ್ದೆ. ಆದರೆ ಖುದ್ದು ಕಂಡಾಗ ಕುತೂಹಲ, ಉದ್ವಿಗ್ನತೆ, ಸಂಭ್ರಮ ಈ ಕುಟುಂಬ ವ್ಯವಸ್ಥೆಯ ಒಳಗನ್ನು ಭಾವನೆಗಳ ವ್ಯತ್ಯಾಸವನ್ನು ವಿಚಾರಿಸುತ್ತ ಅಲ್ಲೆ ನಿಂತೆ ಸಮಾರು ಎರಡು ತಾಲೂಕಿನಷ್ಟು ವಿಸ್ತಾರದಲ್ಲಿ ಹರಡಿರುವ ಹಳ್ಳಿಗಳಲ್ಲಿ ಈ ಪದ್ಧತಿಯಿದೆ. ದ್ರೌಪದಿಯ ಕಾಲದಿಂದ ಈ ಪರಂಪರೆ ಬಂತೆಂದು ಹೇಳುತ್ತಾರೆ.'' (ನಾನೇಕೆ ಬರೆಯುತ್ತೇನೆ, ಪು-೨೦)

ಮಹಾಭಾರತದ ಸಂಸ್ಕೃತಿಗೆ ದಕ್ಷಿಣ ಭಾರತಿಯರಿಗಿಂತ ಉತ್ತರ ಭಾರತೀಯರು ಹೆಚ್ಚು ಸಮೀಪದವರು ಎನ್ನುವ ತಿಳುವಳಿಕೆಯಿಂದ ಈ ಕೃತಿಗೆ ಹಿನ್ನೆಲೆಯಾಗಿ ಹಲವಾರು ವಿವರಗಳನ್ನು ಸಂಗ್ರಹಿಸಿದ್ದಾರೆ. ಗೋರಖಪುರದ ಅಪರಿಷ್ಕೃತ ಪುಟಗಳನ್ನು ಮತ್ತು ಮೂಲ ವ್ಯಾಸ ಭಾರತವನ್ನು ಆಮೂಲಾಗ್ರವಾಗಿ, ಕೃತಿಕಾರರು ಅಭ್ಯಸಿಸಿದ್ದಾರೆ. ಪುರಾಣ ಪುಣ್ಯಕಥೆಗಳಿಂದ ತುಂಬಿರುವ ಅಪರಿಷ್ಕೃತ ಪಾಠವನ್ನು ಓದಿದಾಗ ಅದೊಂದು ಐತಿಹಾಸಿಕ ದಾಖಲೆ ಎಂದು ಅವರಿಗೆ ಅನಿಸಿದೆ. ವ್ಯಾಸ ಕಥೆಯ ಶುದ್ಧ ಸಾಹಿತ್ಯಿಕ ರೂಪಕ್ಕಿಂತ ಅಪರಿಷ್ಕೃತ ರೂಪವೇ ಉಪಯುಕ್ತವೆನಿಸಿದೆ.

''ಭಾರತ ಕತೆಯ ವಿವರಗಳ ಐತಿಹಾಸಿಕ ಸಾಹಿತ್ಯಕ್ಕಿಂತ ಅವುಗಳ ಸಾಮಾಜಿಕ, ಆರ್ಥಿಕ, ರಾಜಕೀಯ ಸತ್ಯವು ಹೆಚ್ಚು ಮಹತ್ವದ್ದೆನಿಸಿದೆ. ಆ ದೃಷ್ಟಿಯಿಂದ ಮಾತ್ರ ಅಧ್ಯಯನ ಮಾಡತೊಡಗಿದೆ. ಹಲವು ವಿದ್ವಾಂಸರು

ಅಭಿಪ್ರಾಯ ಪಡುವಂತೆ ಕ್ರಿ.ಶ. ಪೂರ್ವ ಹನ್ನೆರಡನೆ ಶತಮಾನವನ್ನು ಭಾರತದ ಕತೆಯ ಘಟನೆಯ ಕಾಲವೆಂದು ಅಷ್ಟರಲ್ಲಿ ನಾನು ಒಪ್ಪಿಕೊಂಡಿದ್ದೆ. ಇಂಥ ಶತಮಾನವೆಂಬ ಕಾಲಿಕ ಲೆಕ್ಕಕ್ಕಿಂತ ಹೆಚ್ಚಾಗಿ ಸಾಮಾಜಿಕ, ಆರ್ಥಿಕ, ರಾಜಕೀಯ ಜೀವನದ ಒಂದು ನಿರ್ಧಿಷ್ಟ ಅವಧಿಯಲ್ಲಿ ಕಥೆ ಘಟಿಸಿದೆ. ವೈದಿಕ ಸಂಸ್ಕೃತಿಯ ಬೆಳವಣಿಗೆಯ ಒಂದು ಖಚಿತ ಘಟ್ಟವನ್ನು ಅದು ಸೂಚಿಸುತ್ತದೆ. ಯಜ್ಞಯಾಗಾದಿಗಳು ವಿವರವಿವರವಾಗಿ ಬೆಳೆದು ಮುಗಿದ ಕಾಲ ಅದು. ಚಿಂತನಯೇ ಪ್ರಧಾನವಾದ ಉಪನಿಷತ್ತುಗಳ ಆರಂಭ ಕಾಲವೂ ಅದೇ ಇರಬಹುದು. ವ್ಯಾಸವೆಂಬುವವರು ಹಲವರಿದ್ದರೂ ವೇದವನ್ನು ವಿಂಗಡಿಸಿದ ಬ್ರಹ್ಮಸೂತ್ರಗಳನ್ನು ರಚಿಸಿದ ಹಾಗೂ ಭಾರತವನ್ನು ಬರೆದ ವ್ಯಾಸ ಒಬ್ಬನೇ ಎಂದು ಪರಂಪರೆ ಹೇಳುತ್ತದೆ. ಒಟ್ಟಿನಲ್ಲಿ ಆ ಪರಂಪರೆಯು ಸೂಚಿಸುವ ಸಂಸ್ಕೃತಿ ಅಧ್ಯಯನವೂ ನನಗೆ ಮುಖ್ಯ ಸಂಗತಿಯಾಯಿತು.'' (ನಾನೇಕೆ ಬರೆಯುತ್ತೇನೆ, ಪು -೨೩) ಈ ಎಲ್ಲ ವಿವರಗಳನ್ನು ನೋಡಿದಾಗ ಪರ್ವ ರಚನೆಯ ಹಿಂದೆ ಭೈರಪ್ಪನವರ ವಿಶಿಷ್ಟ ಶ್ರಮವಿದೆ. ಮಹಾಭಾರತದ ಕಥೆಗೆ ಸಂಬಂಧವಿರುವ ಸ್ಥಳಗಳನ್ನು ಸ್ವತಃ ಸಂದರ್ಶಿಸಿ ಈ ಕತೆಯ ಐತಿಹಾಸಿಕ ಸತ್ಯಗಳನ್ನು ತಿಳಿದುಕೊಳ್ಳುವ ಪ್ರಯತ್ನ ಮಾಡಿರುವುದು ತಿಳಿಯುತ್ತದೆ.

ಕನ್ನಡದ ಕುಮಾರವ್ಯಾಸ ಭಾರತ, ಪಂಪಭಾರತಗಳನ್ನು ಅವರು ಅಭ್ಯಸಿಸಿ 'ಪರ್ವ' ಕಾದಂಬರಿ ರಚನೆಗೊಳ್ಳಲು ಎಲ್ಲಾ ಬಗೆಯ ಸಿದ್ಧತೆಗಳನ್ನು ಮಾಡಿಕೊಂಡಿರುವುದು ಮಹತ್ವದ್ದಾಗಿದೆ.

ಮದ್ರರ ರಾಜ ಶಲ್ಯ ಮತ್ತು ಅವನ ಮೊಮ್ಮಗಳ ಮಧ್ಯೆ ನಡೆಯುವ ಸಂಭಾಷಣೆಯೊಂದಿಗೆ ಕಾದಂಬರಿ ಪ್ರಾರಂಭವಾಗುತ್ತದೆ. ಮದ್ರ ದೇಶದವರ ರತಿ ಸ್ವಾತಂತ್ರ್ಯ ಕನ್ಯಾ ಶುಲ್ಕವನ್ನು ಪಡೆದುಕೊಳ್ಳುತ್ತಿದ್ದ ರೀತಿ ಎಲ್ಲವೂ ಚರ್ಚೆಯಾಗುತ್ತವೆ. ಭೀಷ್ಮ ಕನ್ಯಾ ಶುಲ್ಕವನ್ನು ಕೊಟ್ಟು ಹೋದ ಸಂದರ್ಭವನ್ನು ಶಲ್ಯ ಜ್ಞಾಪಿಸಿಕೊಳ್ಳುತ್ತಾನೆ. '' ಕನ್ಯೆಯ ಲಕ್ಷಣಕ್ಕೆ ತಕ್ಕಂತೆ ಶುಲ್ಕದ ಮೊತ್ತ ನಿಶ್ಚಯವಾಗಬೇಕೊ? ೨೦ ಗಾಡಿಗಳ ಭರ್ತಿ ತಂದೀದೀನಿ, ತಾಂಬ್ರದ ಪಾತ್ರೆಗಳು, ಹತ್ತಿ, ರೇಷ್ಮೆ, ಉಣ್ಣೆಯ ವಸ್ತುಗಳು, ಒಂದು ತಟ್ಟೆಯ ತುಂಬ ನಿಷ್ಕ, ಕುರುಗಳ ನಿಷ್ಕ ಅಂದರೆ ಗೊತ್ತಿದೆಯ ಶುದ್ಧ ಸುವರ್ಣ. ನಿಮ್ಮ ಪಶ್ಚಿಮ ನಾಡುಗಳ ರೀತಿಯದಲ್ಲ'' (ಪರ್ವ, ಪು -೨) ಎಂದು ಹೇಳಿ ಮಾದ್ರಿಯ ಸಂಬಂಧವನ್ನು ಮಾಡಿಕೊಂಡು ಹೋದ ಭೀಷ್ಮ ಮತ್ತೆ ಇತ್ತ ಸುಳಿದಿಲ್ಲ ಎನ್ನುವ ಅಸಮಾಧಾನ ಶಲ್ಯನಿಗೆ ಕನ್ಯಾ ಶುಲ್ಕ ಮದ್ರದಲ್ಲಿ ಸಾಮಾನ್ಯವಾದ ಪದ್ಧತಿಯಾಗಿರುವುದು ತಿಳಿಯುತ್ತದೆ. ಆದರೆ ಪೂರ್ವ ದೇಶದವರು ದಕ್ಷಿಣ ಕಡೆಯವರು ಸ್ವಯಂವರ ಏರ್ಪಡಿಸಿ ಗೆದ್ದ ಗಂಡಿಗೆ ಹೆಣ್ಣಿನವರೇ ಗಾಡಿ ಗಾಡಿ ಉಡುಗೊರೆ ತುಂಬಿ ಮದುವೆ ಮಾಡಿ ಕೊಡುವ ಪದ್ಧತಿ ಇರುವುದನ್ನು ಶಲ್ಯನ ಮೊಮ್ಮಗಳಾದ ಹಿರಣ್ಮವತಿ ನೆನಪಿಸಿಕೊಳ್ಳುತ್ತಾಳೆ.

ಪೌರಾಣಿಕತೆಯ ಸ್ಪರ್ಶವನ್ನು 'ಪರ್ವ' ಕಳೆದುಕೊಂಡದ್ದು ವಿಶೇಷವಾಗಿದೆ. ನೈಜ, ವೈಜ್ಞಾನಿಕ ಸತ್ಯಗಳ ಆಧಾರದ ಮೇಲೆಯೇ ಹಲವಾರು ಘಟನೆಗಳು ಸಂಗತಿಗಳು ರೂಪು ಪಡೆಯುತ್ತವೆ.

''ಪಾಂಡುವಿನ ಹೆಂಡತಿಯರು ಯಾರ ಯಾರನ್ನೋ ಕರಕೊಂಡು ಬಸರಾಗಿ ಅವರು ಹುಟ್ಟಿದರು ಆದ್ದರಿಂದ ಅವರು ಕೌರವರೇ ಅಲ್ಲ ಮೊದಲು ಅವರಿಗೆ ಖಾಂಡವ ಪ್ರಸ್ಥ ಕೊಟ್ಟದ್ದೆ ತಪ್ಪು. ಆ ತಪ್ಪನ್ನು ನಾನೂ ಜೂಜಿನ ಮೂಲಕ ಸರಿ ಮಾಡಿದೀನಿ'' ಎಂದು ಪಾಂಡವರ ಜನನದ ಬಗೆಗೆ ಮಾತನಾಡುವ ದುರ್ಯೋದನನ ಮಾತು ಶಲ್ಯನಿಗೆ ಅಧರ್ಮದ ಮಾತಾಗಿ ಕಂಡು ಬರುತ್ತದೆ. ಧರ್ಮದಲ್ಲಿ ಶ್ರದ್ಧೆ

ಇಲ್ಲದವರು, ಮೋಸಗಾರರು ಹೀಗೆ ಮಾತನಾಡುತ್ತಾರೆಂಬುದು ಅವನ ವಾದ 'ಪಾಂಡವರ ಜನನವಾದದ್ದು ಶಾಸ್ತ್ರ ಸಮ್ಮತ ನಿಯೋಗದಿಂದ' ಎಂದು ಶಲ್ಯ ವಾದಿಸುತ್ತಾನೆ.

ಕುರು, ಪಾಂಚಾಲ, ಕಾಶಿ, ಮೊದಲಾಗಿ ಪೂರ್ವ ದೇಶಗಳಲ್ಲಿ ವಿರಾಟ, ಮತ್ಸ್ಯ, ಚೇದಿ, ವಿದರ್ಭಾದಿ ದಕ್ಷಿಣ ದೇಶದಲ್ಲಿ ಕಾನೀನ ಪದ್ಧತಿಯ ಬಗ್ಗೆ ಹೀನಾಯ ಭಾವನೆ ಬೆಳದಿರುವದನ್ನು ಶಲ್ಯನ ಮಗ ರುಕ್ಮರಥ ಗಮನಿಸುತ್ತಾನೆ. ತಾನು ಮದುವೆಯಾದಾಗ ಕಾನೀನ ಪುತ್ರರ ಜೊತೆಗೆ ಮದುವೆಯಾದ ಸಂದರ್ಭವನ್ನು ಅವನ ಹೆಂಡತಿ ನೆನಪಿಸುತ್ತಾಳೆ.

ಅಂದಿನ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಕೌಟುಂಬಿಕ ವಿಷಯಗಳನ್ನು ಕಾದಂಬರಿ ಕಟ್ಟಿಕೊಡುತ್ತದೆ.

ಮಾಂಸಾಹಾರ ಸಾಮಾನ್ಯವಾಗಿರುವಂತೆ ತೋರುತ್ತದೆ. ಅದರಲ್ಲೂ ಹೋರಿಯ ಮಾಂಸದ ಊಟ ವಿಶಿಷ್ಟ. ರುಕ್ಮರಥನ ಮನೆಗೆ ಹೋಮದತ್ತ ಮತ್ತು ಸುಶರ್ಮರು ಊಟ ಮಾಡುವ ಸಂದರ್ಭಗಳಲ್ಲಿ ಇದನ್ನು ಗಮನಿಸ ಬಹುದು.

''ನೀನು ಬರುವ ಹೊತ್ತಿಗಾಗಲೆ ಅಡುಗೆಯಾಗಿತ್ತು ನಿನ್ನ ಗೌರವಕ್ಕೆಂದು ಆ ರಾತ್ರಿಗೆ ದೊಡ್ಡ ಹೋರಿಯನ್ನೇ ಕಡಿದು ಮಾಡುತ್ತಾರೆ.''

'ಸುಶರ್ಮ ಆಡಿನ ಮಾಂಸದ ಚೂರನ್ನು ಕೈಲಿ ಹಿಡಿದು ಚೀಪುತ್ತಿರುವಾಗ.' (ಪರ್ವ, ಪು-೧೨)

ಈ ಮೇಲಿನ ಮಾತುಗಳು ಆರ್ಯರು ಅಂದಿನ ಕಾಲದಲ್ಲಿ ಮಾಂಸ ಭಕ್ಷಣ ಮಾಡುತ್ತಿದ್ದರೆಂಬುದನ್ನು ಸೂಚಿಸುತ್ತದೆ. ಮತ್ತು ವಿಶೇಷವಾಗಿ ರತಿ ಸ್ವಾತಂತ್ರ್ಯವಿತ್ತು ಎಂಬುದನ್ನು ಕಾದಂಬರಿಯ ಅನೇಕ ಘಟನೆಗಳು ಸೂಚಿಸುತ್ತವೆ. ಪರ್ವದ ರಚನೆಯಲ್ಲಿ ಅನುಸರಿಸಲಾದ ತಂತ್ರ ಭಿನ್ನವಾಗಿದೆ. ಪಾತ್ರಗಳೇ ಕಥನವನ್ನು ನಿರ್ವಹಿಸುವ ರೀತಿಯನ್ನು ಈ ಕಾದಂಬರಿಯಲ್ಲಿ ಗುರುತಿಸಬಹುದು. ನಡೆದು ಹೋದ ಘಟನೆಗಳನ್ನು ಪಾತ್ರಗಳು ಪುನರ್ ಸ್ಮರಣೆ ಮಾಡುವ ಮೂಲಕ ಕಥೆ ವರ್ತಮಾನದಿಂದ ಬೂತಕ್ಕೆ, ಬೂತದಿಂದ ವರ್ತಮಾನಕ್ಕೆ ಸರಿದು ಸಾಗುತ್ತದೆ.

ಕುಂತಿ ಹಿಂದಿನ ಘಟನೆಗಳನ್ನು ನೆನಪಿಸಿಕೊಳ್ಳುವ ಮೂಲಕ ಮಹಾಭಾರತದ ಹಿಂದಿನ ಕತೆಯೂ ಬಿಚ್ಚಿಕೊಳ್ಳುತ್ತದೆ. ಪಾಂಡುವಿನ ಜೊತೆ ನಡೆದ ವೈಭವದ ಮದುವೆ, ಕಳೆದ ರಸಹೀನ ರಾತ್ರಿಗಳು ಮುಂತಾದ ಸಂಗತಿಗಳು ಬೂತಕ್ಕೆ ಸರಿಯುವ ಅವಳ ನೆನಪಿನ ಮೂಲಕ ಮೂಡಿಬರುತ್ತದೆ. ಪಾಂಡುರಾಜನ ಷಂಡತನದಿಂದ ರತಿಸುಖವನ್ನೇ ಹೊಂದದ ನಿರಂತರ ಬವಣೆ. ತನ್ನ ಷಂಡತನದ ಸತ್ಯವನ್ನು ಹೊರಗೆಡವದ ಪಾಂಡುರಾಜ ಮುಂತಾದ ವಿವರಗಳು ಕುಂತಿಯ ನೆನಪುಗಳ ಮೂಲಕವೇ ರೂಪವನ್ನು ಪಡೆದುಕೊಳ್ಳುತ್ತವೆ.

''ಮದುವೆಯಾದ ಹೊಸತರಲ್ಲಿ ಎಲ್ಲರೂ ಗಂಡನ ಸುಖ ಪಟ್ಟರೆ ನನಗೆ ಗಂಡನ ಹಿಂಸೆ, ಸುಮ್ಮನಾದರೂ ಬಿಡುತ್ತಿರಲಿಲ್ಲ ಮಹರಾಯ ಮೇಲೆ ಬೀಳುವುದು ಪೌರುಷ ತೋರಿಸುವುದು, ಲೇ ಕುಂತಿ ಹೀಗೆ ಬಾ ಲೇ ಕುಂತಿ ಹಾಗೆ ಬಾ ನೋಡು ಹೀಗೆ ಮಾಡು, ಹಾಗೆ ಮಾಡು, ಏನೇನೋ ವಿಕೃತ ಕರ್ಮಗಳಿಗೆ ನನ್ನನ್ನು ಹಚ್ಚಿ ತಾನೂ ಮುಲುಕಿ ಮುಲುಕಿ ಏರಲಾರದೆ ಹೋರಿಯಂತೆ ಸೋತು ತನಗೆ ತಾನೇ ಅವಮಾನಿತನಾಗಿ ಕೊನೆಗೆ ವಿನಾಕಾರಣ ನನ್ನ ಮೇಲೆ ಸಿಟ್ಟಾಗಿ ನೀನು ನನಗೆ ತಕ್ಕ ಹೆಂಡತಿಯಲ್ಲವೆಂದು

ಬೈದು ತಪ್ಪನ್ನೆಲ್ಲ ನನ್ನ ಮೇಲೆ ಹಾಕಿ. ಈ ಮಧ್ಯೆ ಅವನ ಚೇಷ್ಟೆಗಳಿಂದ ಉದ್ರಿಕ್ತಳಾದ ನಾನು ಶಮನವಿಲ್ಲದೆ ಬೇಯಲೋ ಅವನ ದೋಷಾರೋಪಣೆಯಿಂದ ಸುಟ್ಟು ಹೋಗಲೋ!'' (ಪರ್ವ, ಪು-೨೨)

ಪಾಂಡುವಿಗೆ ತನಗೆ ಪೌರುಷ ಶಕ್ತಿಯಿಲ್ಲ ಎಂದು ಹೇಳಿಕೊಳ್ಳಲು ಹಿಂಜರಿಕೆ ಪಾಂಡುವಿಗೆ ಕುಂತಿಯೇ ತಕ್ಕವಳಲ್ಲ ಎಂಬ ನಿರ್ಧಾರ ಭಿಷ್ಮನದು ಯಾವುದನ್ನು ತಿಳಿಯದೇ ಮಾದ್ರಿಯನ್ನು ತರುವ ಕಾರ್ಯವನ್ನು ಅವನು ಮಾಡುತ್ತಾನೆ. ಆದರೆ ಇಬ್ಬರೂ ಅಕ್ಕತಂಗಿಯರು ಬೇಗನೆ ಪಾಂಡುವಿನ ಪುರುಷ ಶಕ್ತಿಯ ಬಗ್ಗೆ ಒಂದು ನಿರ್ಧಾರಕ್ಕೆ ಬರುತ್ತಾರೆ. ನಂತರ ಹಿಮಾಲಯಕ್ಕೆ ತೆರಳಿ ತಪಸ್ಸಿನಲ್ಲಿ ತೊಡಗಿದಾಗ ಕುಂತಿಗೆ ದಾಂಪತ್ಯದ ಅನುಭವ ಉಂಟಾಗುತ್ತದೆ. ಹಿಂದಿನ ಎಲ್ಲ ನೆನಪುಗಳು ಮರುಕಳಿಸುತ್ತವೆ. ತಂದೆಯ ಮನೆಯಲ್ಲಿ ದುರ್ವಾಸರಿಂದ ಗರ್ಭಧರಿಸಿದ ಸಂಗತಿ, ಕಾನೀನ ಪುತ್ರನನ್ನು ಪಡೆದದ್ದು ಅವಳಿಗೆ ನೆನಪಾಗುತ್ತದೆ.

ವಂಶವನ್ನು ಮುಂದೆ ಸಾಗಿಸುವ ಭಾರ ಹೊತ್ತ ಪಾಂಡುವಿನ ಮನಸ್ಥಿತಿಯನ್ನು ಕಾದಂಬರಿಕಾರರು ಉತ್ತಮವಾಗಿ ಚಿತ್ರಿಸಿದ್ದಾರೆ. ತನಗಿರುವ ಷಂಡತನವನ್ನು ಹೇಳಿಕೊಳ್ಳಲಾರದ ಅಸಹಾಯಕತೆಯನ್ನು ಕುಂತಿಯ ಮೇಲೆ ತೋರುವ ಕೋಪದ ಮೂಲಕ ಪ್ರಕಟಿಸುತ್ತಾನೆ. ತನಗೆ ಪೌರುಷವಿದೆ ಎಂಬ ಹುಸಿ ಸತ್ಯವನ್ನು ತೋರುವ ಸಲುವಾಗಿ ದಿಗ್ವಿಜಯಕ್ಕೆ ಹೋಗುತ್ತಾನೆ. ಆದರೆ ಇವು ಯಾವವು ಹೆಣ್ಣನ್ನು ತೃಪ್ತಿಪಡಿಸಲಾರವು. ಕ್ಷೇತ್ರದಲ್ಲಿ ಬೀಜ ಮೊಳಕೆಯೊಡೆಯುವಂತೆ ಮಾಡಲಾರವು ಎಂಬ ಸತ್ಯ ತಿಳಿದ ನಂತರ ಕುಂತಿ ಮಾದ್ರಿಯನ್ನು ಕರೆದುಕೊಂಡು ಹಿಮಾಲಯಕ್ಕೆ ಪ್ರಯಾಣ ಮಾಡುತ್ತಾನೆ. ನಿಯೋಗಕ್ಕೆ ಕುಂತಿಯನ್ನು ಒಪ್ಪಿಸುವಾಗ ಅವನ ಮಾನಸಿಕ ತಳಮಳ ಓದುಗರಿಗೆ ಅರ್ಥವಾಗುತ್ತದೆ. ನಿಯೋಗ ಪದ್ಧತಿಯನ್ನು ಅನುಸರಿಸುವಾಗಲೂ ಕುಂತಿ ಸಹಜವಾಗಿ ಪ್ರಕೃತಿ ಧರ್ಮಕ್ಕೆ ಒಳಗಾಗುತ್ತಾಳೆ. ಗರ್ಭಕೂತ ಸೂಚನೆಯಿದ್ದರೂ ಅದನ್ನು ಮುಚ್ಚಿಟ್ಟು ಸುಖಿಸುವ ಆಸೆಗೆ ಮನಸ್ಸು ಮಾಡುತ್ತಾಳೆ.

ಕಾದಂಬರಿಕಾರರ 'ಪರ್ವ'ದ ಸ್ತ್ರೀ ಪಾತ್ರಗಳ ಮನಸ್ಸನ್ನು ಸಹಜವೆಂಬಂತೆ ಚಿತ್ರಿಸುತ್ತಾರೆ. ಅವರ ಆಶೆಗಳು, ಬಯಕೆಗಳು, ದೌರ್ಬಲ್ಯಗಳು ಎಲ್ಲವೂ ಶಕ್ತವಾದ ಮೂರ್ತರೂಪವನ್ನು ಪಡೆದುಕೊಳ್ಳುತ್ತವೆ.

ದ್ರೌಪದಿ ಐವರು ಗಂಡೊಂದಿರೊಂದಿಗೆ ಒಂದಾಗುತ್ತಿದ್ದರೂ ಅವಳ ಮನಸ್ಸು ಬಯಸುತ್ತಿದ್ದುದು ಅರ್ಜುನನನ್ನು.

''ಪ್ರತಿ ರಾತ್ರಿಯೂ ಬಯಸುತ್ತಿದ್ದುದು ಅರ್ಜುನನ್ನು ಉಳಿದವರಲ್ಲೆಲ್ಲ ನಾನು ಹುಡುಕುತ್ತಿದ್ದುದು ಅವನನ್ನು. ಪಾಂಡವರ ನಾಲ್ವರೂ ಅವನ ಮೂಲಕ ಮಾತ್ರವೇ ನನ್ನ ಅರಿವನ್ನು ಮುಟ್ಟುತ್ತಿದ್ದರು. ಇರುವನ್ನು ತಟ್ಟುತ್ತಿದ್ದರು. ಅವನ ಸರದಿಯ ರಾತ್ರಿಗಾಗಿ ಕಾಯುವುದೇ ಜೀವನ ಪರಮ ಗುರಿಯೇನೋ ಎಂಬಂತೆ ಉರುಳುತ್ತಿತ್ತಲ್ಲ ಐದು ಅರೆಕಾಲುಗಳ ಚಕ್ರ'' (ಪರ್ವ, ಪು-೧೨೦)

ದ್ರೌಪದಿಯು ತಾನು ಐವರಿಗೂ ಹೆಂಡತಿಯಾಗಿ ಬಂದನಂತರದ ಸ್ಥಿತಿಯನ್ನು ಪುನರ್‌ಸ್ಮರಣೆ ಮಾಡಿಕೊಳ್ಳುತ್ತಾಳೆ. ಸುಭದ್ರೆಯನ್ನು ಅರ್ಜುನ ಕರೆದುಕೊಂಡು ಬಂದಾಗ ಅವಳು ಅವನೊಬ್ಬನಿಗೆ ಹೆಂಡತಿಯಾಗಿರಬೇಕೆಂಬ ಕರಾರು. ಜೂಜಿನಲ್ಲಿ ದ್ರೌಪದಿಯನ್ನು ಸೋತಾಗ ಆಗುವ ಅವಮಾನ ಅವಳು ಐವರಿಗ ಹೆಂಡತಿ ಎನ್ನುವ ಸಂಗತಿಯಲ್ಲಿದೆ. ದುರ್ಯೋಧನ 'ಬಾ, ಬಾರೇ ನನ್ನ ತೊಡೆಯ ಮೇಲೆ

ಕೂತುಕೋ ಬಾ' ಎಂದು ಕರೆದಾಗ ಭೀಷ್ಮ ದುರ್ಯೋಧನನನ್ನು ಗದರಿಸುತ್ತಾನೆ. ಆದರೆ ದುಶ್ಶಾಸನ ನಾವು ಹದಿನಾಲ್ಕು ಜನ ಸೋದರರು ಎಂದಾಗ ಈ ಹದಿನಾಲ್ಕು ಜನರ ಜೊತೆಯೂ ಮಲಗಬೇಕಾಗಿತ್ತು ತಾನು ಎಂದು ನೋವಿನಿಂದ, ಅಪಮಾನದಿಂದ ಕುದಿಯುತ್ತಾಳೆ. ಹಲವು ಪಾತ್ರಗಳ ಮನೋವಿಶ್ಲೇಷಣೆಯನ್ನು ಕಾದಂಬರಿಕಾರರು ವಿವರವಾಗಿ ಮಾಡಿದ್ದಾರೆ.

'' ಪರ್ವ ಯುದ್ಧ ಸನ್ನದ್ಧ ಸ್ಥಿತಿಯನ್ನು ಆ ಹಂತವನ್ನು ಸೂಚಿಸುತ್ತದೆ. ಪರ್ವವೆಂದರೆ ಗೆಣ್ಣುಗಳು ಎಂಬ ಅರ್ಥ ಕೂಡ ಇದೆ.(ಮಹಾಕಾವ್ಯದ ಅಧ್ಯಾಯಗಳನ್ನು ಪರ್ವಗಳೆನ್ನುವುದು ಇದೇ ಅರ್ಥದಲ್ಲಿ) ಇಲ್ಲಿ ಕಥನ ಕೂಡ ಒಂದೊಂದು ಮನಸ್ಸಿನ ನೆನಪುಗಳ ಮೂಲಕ ಚೂರು ಚೂರಾಗಿ ನಿರ್ಮಾಣಗೊಳ್ಳತ್ತದೆ. ಒಂದೊಂದು ಭಾಗವೂ ಭಾರತದ ಕಥೆಯ ಒಂದೊಂದು ವ್ಯಾಖ್ಯಾನವೂ ಇದ್ದೀತು ಅಥವಾ ಪೂರಕ ಸಾಮಗ್ರಿಯ ರಚನೆ ಎನ್ನಬಹುದು ಇದೇನೆ ಇರಲಿ ಪರ್ವದಲ್ಲಿ ಚರ್ಚಿಸಲಾದ ಮುಖ್ಯ ಪ್ರಶ್ನೆಯೆಂದರೆ ಸಮಾಜ ವ್ಯವಸ್ಥೆಯ ಪರಿವರ್ತನೆಯ ಘಟ್ಟದಲ್ಲಿ ಹೆಣ್ಣಿನ ಸ್ಥಾನ. ಶಲ್ಯನ ಮೊಮ್ಮಗಳ ಋತಚಕ್ರ ವೈಫಲ್ಯದ ಕತನದಿಂದ ಪ್ರಾರಂಭವಾದದ್ದು, ಯುದ್ಧದ ಉತ್ತುಂಗ ಸ್ಥಿತಿಯಲ್ಲಿ ಸೈನಿಕರಿಂದ ಬಲಾತ್ಕಾರಕ್ಕೆ ಒಳಗಾಗಿ ಗರ್ಭಿಣಿಯರಾದ ಹೆಂಗಸರ ಚಿತ್ರದಲ್ಲಿ ಮುಗಿಯುತ್ತದೆ. ಈ ನಡುವೆ ಎಷ್ಟೋ ಹೆಣ್ಣುಗಳ ಕಥನ ಬಂದು ಹೋಗುತ್ತದೆ. ವಿವಿಧ ಲಯ ಮೇಳನದ ದನಿಯಿಂದ ಹುಟ್ಟುವ ವಿಕೃತ ಭಾವವೊಂದು ಕಾದಂಬರಿಯಲ್ಲಿ ಸ್ಥಾಯಿಯಾಗುವುದು. ನಿಯೋಗ, ಬಹುಪತಿತ್ವ, ಬಹುಪತ್ನಿತ್ವ, ಸ್ತ್ರೀ ಪ್ರಧಾನ ಬುಡಕಟ್ಟು, ಮನುಷ್ಯ ರಾಕ್ಷಸ ಸಂಬಂಧದ ಜನನ, ಬ್ರಹ್ಮಚರ್ಯ ಹೀಗೆ ಹಲವು ಬಗೆಯ ಜೀವನ ಕ್ರಮಗಳ ಪರಸ್ಪರ ಮುಖಾಮುಖಿಯಿಂದ ಯುದ್ಧ ಸ್ಫೋಟಗೊಂಡಿದೆ ನಿರ್ಣಾಯಕ ಹಂತವೊಂದನ್ನು ಕಾದಂಬರಿ ತಲುಪಿದೆ (ಕಾದಂಬರಿ ಎಂದರೆ ಇಲ್ಲಿ ವರ್ಣಿತವಾದ ಜೀವನ ಕ್ರಮ) ತನ್ನ ಇರುವಿಕೆಯನ್ನು ಹೆಂಗಸು ಇಲ್ಲಿ ಗುರುತಿಸಿಕೊಳ್ಳಬೇಕು. ಇದಕ್ಕೆ ಇಲ್ಲಿನ ಒಬ್ಬೊಬ್ಬ ಹೆಂಗಸೂ ಕಂಡುಕೊಳ್ಳುವ ಉತ್ತರಗಳು ಬಗೆ ಬಗೆಯಾಗಿವೆ. ಹೀಗಾದರೂ ಬದುಕಿನ ಲಯಗಳು ಎತ್ತಲೋ ಸಾಗಿ ಕೊನೆಗೆ ಒಂದು ಗಂಡು ಒಂದು ಹೆಣ್ಣು ಎಂಬ ನೆಲೆಗೆ ತಲುಪುತ್ತಿದೆಯೆಂಬ. ಆದರೆ ಜೀವನದ ಒಟ್ಟು ಒತ್ತಡ ಅದನ್ನು ಮೀರಿ 'ಅಕ್ರಮ' ಸಂಬಂಧಗಳ ಕಡೆಗೂ ನುಗ್ಗುವುದೆಂಬ ವಿಚಾರವೊಂದು ಮಂಡಿತವಾದಂತಿದೆ.'' ( ಎಸ್ ಎಲ್ ಭೈರಪ್ಪನವರ ಕೃತಿಗಳ ವಿಮರ್ಶೆ : ಸಂ. ಸುಮತೀಂದ್ರ ನಾಡಿಗ್, ಪು-೧೧೫, ೧೧೬) ಎಂಬ ಕೆ.ವಿ.ನಾರಾಯಣರವರ ವಿಚಾರಗಳು ಪರ್ವ ಕೃತಿಯ ಸಾಮಾಜಿಕ ಚಿಂತನೆಯನ್ನು ಕುರಿತ ಸೂಕ್ತ ಒಳನೋಟಗಳನ್ನು ಕೊಡುತ್ತದೆ.

ಪರ್ವ ಮಹಾಭಾರತದ ಕತೆಯನ್ನು ಆಧರಿಸಿ ರಚಿತವಾಗಿದ್ದರೂ ಪೌರಾಣಿಕತೆಯನ್ನು ಬಿಟ್ಟುಕೊಂಟ್ಟಿದೆ. '' ಹೀಗೆ ಪೌರಾಣಿಕತೆಯನ್ನು ಬಿಟ್ಟುಕೊಟ್ಟಿರುವುದರಿಂದ ಅಂಥ ಸನ್ನಿವೇಶಗಳು ಅಮಾನವೀಯಗೊಂಡಿವೆ'' ಎಂದು ಕೀರ್ತಿನಾಥ ಕುರ್ತಕೋಟಿಯವರು ಅಭಿಪ್ರಾಯ ಪಡುತ್ತಾರೆ.

## ಅಧ್ಯಾಯ ೬

### ಜನಸಾಮಾನ್ಯ ನೆಲೆಯ ಏರುಪೇರುಗಳನ್ನು ಕಲಾತ್ಮಕವಾಗಿ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಬಿಂಬಿಸುವ ಕಾದಂಬರಿಗಳು.

# ನಿರಾಕರಣ

ನಿರಾಕರಣ ಕಾದಂಬರಿಯ ಕೇಂದ್ರ ಪಾತ್ರ ನರಹರಿ ಒಬ್ಬ ಸಾಮಾನ್ಯ ವ್ಯಕ್ತಿ. ಬಡತನದ ಎಲ್ಲ ನೋವುಗಳನ್ನು ಅನುಭವಿಸಿದವನು. ಬದುಕಿನ ಪ್ರಾರಂಭದ ಘಟ್ಟದಲ್ಲಿಯೇ ಬದುಕಿನ ಬಗ್ಗೆ ನಿರಾಶಕ್ತಿಯನ್ನು ಹೊಂದುವ ಸ್ಥಿತಿ ಅವನಿಗೆ ಎದುರಾಗುತ್ತದೆ. ನರಹರಿಯ ತಂದೆಯು ಒಳ್ಳೆಯ ಸ್ವಭಾವದವನಾಗಿದ್ದರೂ ನಿನ್ನ ತಂದೆ ಕುಡುಕನಾಗಿದ್ದ ಜೂಜುಕೋರನಾಗಿದ್ದ ಸಾಲಗಾರನಾಗಿದ್ದ ಎಂದು ಏನೇನೋ ಸಬೂಬು ಹೇಳಿ ನರಹರಿಗೆ ಬರಬೇಕಾದ ಆಸ್ತಿಯ ಪಾಲಿನಲ್ಲಿ ಸ್ವತಃ ಅವನ ದೊಡ್ಡಪ್ಪ ಚಿಕ್ಕಪ್ಪಂದಿರು ಮೋಸ ಮಾಡುತ್ತಾರೆ. ನರಹರಿ ಯ ಪಾಲಿಗೆ ಬಂದ ಒಂದು ಎಕರೆ ಗದ್ದೆಯನ್ನು ಎರಡುನೂರು ರುಪಾಯಿಗೆ ಬರೆಯಿಸಿಕೊಂಡು ಕೇವಲ ಹನ್ನೆರಡು ರೂಪಾಯಿ ಮಾತ್ರ ಕೊಟ್ಟು ನರಹರಿಯನ್ನು ಬೆದರಿಸಿ ಕಳಿಸುತ್ತಾರೆ. ಈ ಎಲ್ಲ ಸಂಗತಿಗಳಿಂದ ನೊಂದ ಅವನು ಬೊಂಬಾಯಿಗೆ ಬರುತ್ತಾನೆ. ಬೊಂಬಾಯಿಯಲ್ಲಿ ನೆಲೆ ನಿಲ್ಲುವುದು ಕಷ್ಟವಾಗುತ್ತದೆ. ಉದ್ಯೋಗ ದೊರೆಯದೇ ಭಿಕ್ಷೆ ಬೇಡುತ್ತಾನೆ. ಹೋಟಲ್ಲಿನಲ್ಲಿ ಒಬ್ಬ ಸಪ್ಲೈಯರ್ ಆಗುತ್ತಾನೆ, ಟಾಂಗಾ ಓಡಿಸುವ ಕೆಲಸವನ್ನು ಮಾಡುತ್ತಾನೆ. ನಂತರ ಟೈಪಿಂಗ್ ಕಲಿತು ಟೈಪಿಸ್ಟಾಗಿ ಕೆಲಸ ಆರಂಭಿಸುತ್ತಾನೆ ಈಗ ಬೊಂಬಾಯಿಯಲ್ಲಿ ಒಂದು ನೆಲೆ ದೊರೆತ ಅನುಭವ ಅವನಿಗೆ ಆಗುತ್ತದೆ . ಇಪ್ಪತ್ತೈದು ರೂಪಾಯಿ ಬಾಡಿಗೆಯ ಒಂದು ಮನೆ ತೆಗೆದುಕೊಂಡುಕೊಳ್ಳುತ್ತಾನೆ ವೇದಾಂತದಲ್ಲಿ ತುಂಬಾ ಆಶಕ್ತಿ ಧರ್ಮಗ್ರಂಥಗಳನ್ನು ಓದುವ ಆಭಿರುಚಿಯನ್ನು ಬೆಳಸಿಕೊಳ್ಳುವ ನರಹರಿ ಆತ್ಮ ಪರಮಾತ್ಮ ಜೀವ, ಜಗತ್ತು ಮುಂತಾದ ತಾತ್ವಿಕ ವಿಚಾರಗಳನ್ನು ಕುರಿತು ಆಲೋಚಿಸುತ್ತಾನೆ. ಒಂಟಿತನ ಅವನಿಗೆ ಪ್ರಿಯವಾದದ್ದು ಗ್ರಾಮಕ್ಕೆ ಮರಳಿ ಬರಲು ಕರೆ ಬಂದರೂ ಬೊಂಬಾಯಿಯನ್ನು ಬಿಡುವ ನಿರ್ಧಾರಕ್ಕೆ ಅವನು ಬರುವುದಿಲ್ಲ.

ನರಹರಿ ಸಾಂಸಾರಿಕ ಬಂಧನಕ್ಕೆ ಸಿಲುಕುವ ಸಂದರ್ಭ ಬರುತ್ತದೆ. ಸ್ನೇಹಿತ ರಾಮಕೃಷ್ಣನ ಊರಾದ ಬನ್ನಿಕೊಪ್ಪಲಿಗೆ ಬಂದಾಗ ಅವನ ತಂಗಿ ಲಲಿತೆಯೊಡನೆ ಮದುವೆಯ ಪ್ರಸ್ತಾಪ ಬರುತ್ತದೆ. ಮೊದ ಮೊದಲು ಈ ಪ್ರಸ್ತಾಪವನ್ನು ಸಂಬಂಧವನ್ನು ಅವನು ನಿರಾಕರಿಸಿದರೂ, ಲಲಿತೆಯಲ್ಲಿ ತನ್ನ ತಾಯಿಯ ರೂಪ, ಸ್ವರೂಪವನ್ನು ಗುರುತಿಸಿ ಕಾಣದ ಯಾವುದೋ ಪ್ರೀತಿಯ ಸೆಳೆತಕ್ಕೆ ಸಿಲುಕಿ ಮದುವೆಗೆ ಒಪ್ಪಿಕೊಳ್ಳುತ್ತಾನೆ.

ಆದರೆ ಲಲಿತೆಯ ಜೊತೆಗಿನ ದಾಂಪತ್ಯ ಮುಂದುವರೆಯದಂತಾಗುವುದು ಅವನ ದೌರ್ಭಾಗ್ಯ. ನರಹರಿಯ ಮನಸ್ಸನ್ನು ಅರ್ಥಮಾಡಿಕೊಂಡು, ಚೆನ್ನಾಗಿಯೇ ಸಂಸಾರ ಸರಿದೂಗಿಸಿಕೊಂಡು ಹೋದ ಲಲಿತೆ ಭವಾನಿ, ವಿಜಯ, ಗಣೇಶರನ್ನು ಹೆತ್ತು ಸಾವನ್ನಪ್ಪುತ್ತಾಳೆ. ಈ ಸಾವು ನರಹರಿಯ ಬದುಕಿನ ಗಂಭೀರತೆಯನ್ನು ದರ್ಶನ ಮಾಡಿಸುತ್ತದೆ, ನಿರಾಶೆ ಮೂಡಿಸುತ್ತದೆ. ಪುನಃ ಮದುವೆಯಾಗುವ ಯೋಚನೆ ಅವನಲ್ಲಿ ಬರುವುದಿಲ್ಲ ಈ ನೋವು ಆರುವ ಮುನ್ನವೇ ಲಲಿತೆಯ ಅಣ್ಣ ನರಹರಿಯ ಭಾವ ರಾಮಕೃಷ್ಣ ಅಪಘಾತದಲ್ಲಿ ಮರಣ ಹೊಂದುತ್ತಾನೆ. ನರಹರಿ ತನ್ನ ಮೂರು ಮಕ್ಕಳನ್ನು ಅತ್ತೆಯ ಮನೆಯಲ್ಲಿ ಬಿಟ್ಟು ಬರುತ್ತಾನೆ. ಒಂದರ ನಂತರ ಒಂದು ನಿರಾಶೆಯನ್ನುಂಟು ಮಾಡುವ ಘಟನೆಗಳು ಜರುಗುತ್ತಾ ಸಾಗುತ್ತವೆ. ಭಾವನಾಗಿ ತನ್ನ ಕರ್ತವ್ಯವನ್ನು ಮಾಡಬೇಕು ಅವಳಿಗೊಂದು ವರ ಹುಡುಕಿ ಮದುವೆ ಮಾಡಬೇಕು ಎನ್ನುವ ಪ್ರಯತ್ನದಲ್ಲಿರುವಾಗಲೇ ಅವನ ಅತ್ತೆಯೂ ಸಾಯುತ್ತಾಳೆ. ಮೇಲಿಂದ ಮೇಲೆ ಉಂಟಾಗುವು ಸಾವು ಮತ್ತು ಅವುಗಳ ಪರಿಣಾಮ ನರಹರಿಯಲ್ಲಿ ನಿರಾಕರಣ ಸ್ಥಿತಿಯನ್ನು ಉಂಟುಮಾಡುತ್ತದೆ. ಸಂಕೀರ್ಣ ಸ್ಥಿತಿಯ ಮನಸ್ಸು ಅವನದಾಗುತ್ತದೆ.

ಗ್ರಾಮದಲ್ಲಿ ವೈದೇಹಿ ಮತ್ತು ಮಕ್ಕಳನ್ನು ಬಿಡುವುದಕ್ಕೆ ಮನಸ್ಸು ಬಾರದೇ ಬೊಂಬಾಯಿಗೆ ಅವರನ್ನು ಕರೆತರುತ್ತಾನೆ. ಮದುವೆಯಾಗದ ಹರೆಯದ ವೈದೇಹಿಯ ಜೊತೆ ಅವನು ಬದುಕುವುದನ್ನು ಕಂಡ ಸುತ್ತಲಿನ ಜನ ನೂರೆಂಟು ಮಾತುಗಳನ್ನು ಆಡಲು ಪ್ರಾರಂಭಿಸುತ್ತಾರೆ. ಈ ಅವಮಾನವನ್ನು ತಾಳದೇ ವೈದೇಹಿ ನರಹರಿಗೆ ಮದುವೆಯಾಗಲು ಒತ್ತಾಯಿಸುತ್ತಾಳೆ. ಮದುವೆಯಾಗದಿದ್ದರೆ ತನ್ನ ಹಳ್ಳಿಗೆ ಹಿಂತಿರುಗುವುದಾಗಿ ಹೇಳುತ್ತಾಳೆ ನರಹರಿಗೆ ವೈದೇಹಿ ವಿಚಾರ ಸರಿ ಎನ್ನಿಸಿ ಮದುವೆಗೆ ಅವನು ಒಪ್ಪುವುದು ಅನಿವಾರ್ಯವಾಗುತ್ತದೆ. ಸಂಸಾರದ ಬದುಕನ್ನು ಅವನು ಎರಡನೇ ಭಾರಿಗೆ ಸ್ವೀಕರಣ ಮಾಡಿದ ಸಂಗತಿ ಇದಾಗುತ್ತದೆ. ಅವಳು ರಾಮ ಲಕ್ಷ್ಮಣರೆಂಬ ಎರಡು ಮಕ್ಕಳನ್ನು ಹೆತ್ತು ಅಸುನೀಗುತ್ತಾಳೆ. ಇಂಥ ಸ್ಥಿತಿ ವಾಸ್ತವವಾಗಿ ಯಾರಿಗೇ ಎದುರಾದರೂ ಎದೆಗುಂದುವುದು ಸಹಜ. ಈಗ ಐದು ಮಕ್ಕಳನ್ನು ರಕ್ಷಿಸುವ ಹೊಣೆಗಾರಿಕೆ ನರಹರಿಯದು ಈ ಹೊಣೆಗಾರಿಕೆಯ ಭಾರವನ್ನು ಹೊರುವ, ನಿಭಾಯಿಸುವ ಗಟ್ಟಿತನಕ್ಕೆ ತನ್ನ ಮನಸ್ಸನ್ನು ಸಿದ್ಧಗೊಳಿಸಕೊಳ್ಳಲು ಅವನಿಂದ ಸಾಧ್ಯವಾಗುವುದೇ ಇಲ್ಲ.

ಹೆಚ್ಚಿನ ಆರ್ಥಿಕ ಅನುಕೂಲವಿಲ್ಲದ ನರಹರಿ ಹೆಚ್ಚು ವೇಳೆ ಕೆಲಸ ಮಾಡಿ ಸಂಸಾರದ ಖರ್ಚುಗಳನ್ನು ಸರಿದೂಗಿಸಲು ಪ್ರಯತ್ನಿಸುತ್ತಾನೆ. ತಾನು ದುಡಿಯಲು ಹೋದಾಗ ಮಕ್ಕಳನ್ನು ನೋಡಿಕೊಳ್ಳವವರು ಯಾರು ? ಎಂಬ ಪ್ರಶ್ನೆ ಅವನಲ್ಲಿ ಮೂಡುತ್ತದೆ ಆಫೀಸಿನಿಂದ ಅವನು ಬರುವ ವೇಳೆಗೆ ಮಕ್ಕಳು ಬೇಧಿ ಮಾಡಿ ಕೊಂಡಿರುತ್ತವೆ. ಅದನ್ನು ತೊಳೆಯುವುದು ಮತ್ತು ಮಕ್ಕಳಿಗೆ ಸರಿಯಾದ ಆಹಾರವನ್ನು ಕೊಡಲು ಅವನಿಗೆ ಸಾಧ್ಯವಾಗದೇ ಹೋಗುತ್ತದೆ. ಇವನಿಲ್ಲದ ವೇಳೆ ಮಕ್ಕಳು ಪೈಪುಗಳು ಹತ್ತಿರ ಆಡಲು ಹೋಗುವುದು ಅವರ ಸ್ವಭಾವವನ್ನು ಅನುಕರಣೆ ಮಾಡುವುದು ಇದೆಲ್ಲ ತಾನು ಈ ಮಕ್ಕಳನ್ನು ಸಾಕಲು ಸಾಧ್ಯವೇ ಇಲ್ಲ ಎಂಬ ನಿರ್ಧಾರಕ್ಕೆ ಬರಲು ಕಾರಣವಾಗುತ್ತದೆ.

ಕಾದಂಬರಿ ಪ್ರಾರಂಭವಾಗುವುದೇ ಮುಂಬೈ, ಟೈಂಸ್ ಪತ್ರಿಕೆಯಲ್ಲಿ ನರಹರಿ ಪ್ರಕಟಿಸಿದ ಮಕ್ಕಳನ್ನು ದತ್ತು ಕೊಡುವ ವಿಚಾರದೊಂದಿಗೆ ಇಲ್ಲಿ ಅವನನ್ನು ಯಾವ ವಂಶ ಪ್ರಜ್ಞೆಯೂ ಕಾಡುವುದಿಲ್ಲ ತನ್ನ ನಂತರ

ತನ್ನ ವಂಶದ ವೃಕ್ಷ ಬೆಳೆಯಬೇಕು ವಂಶದ ಹೆಸರನ್ನು ಆ ಮಕ್ಕಳು ಹೇಳಬೇಕು ಎನ್ನುವ ಮನೋಭಾವ ಅವನಲ್ಲಿ ಕಾಣುವುದಿಲ್ಲ. ವಂಶವೃಕ್ಷದ ಶ್ರೋತ್ರಿಯವರ ವಿಚಾರದಂತೆ ಮಕ್ಕಳು ವಂಶಕ್ಕೆ ಸಂಬಂಧಪಟ್ಟವುಗಳು ಎನ್ನುವ ಪ್ರಜ್ಞೆ ಕಾಡುವುದಿಲ್ಲ. ಸುಸಂಸ್ಕೃತ ತಂದೆ ತಾಯಿಗಳಿಗೆ ಹುಟ್ಟಿ ಸುಸಂಸ್ಕೃತ ರೀತಿಯಲ್ಲಿ ಬೆಳೆಸಿದ ಪುಟಾಣಿಗಳು ಎಂದು ದತ್ತು ತೆಗೆದುಕೊಳ್ಳುವವರಿಗೆ ಆಸೆ ತೋರಿಸುವ ನರಹರಿಗೆ ಮಕ್ಕಳನ್ನು ತಾನೇ ಸಾಕಿ ಬೆಳಸಬೇಕೆನ್ನುವ ಛಲ ಇಲ್ಲ. ಅವನ 'ನಿರಾಕರಣ' ಸ್ವರೂಪ ಪ್ರಾರಂಭವಾಗುವುದೇ ಈ ಹಂತದಿಂದ ಹೊಣೆಗಾರಿಕೆಯಿಂದ ಜಾರಿಕೊಳ್ಳುವ ತಂದೆಯಾಗಿ ನರಹರಿ ತನ್ನೆಲ್ಲ ದೌರ್ಬಲ್ಯವನ್ನು ಈ ಸಂದರ್ಭದಲ್ಲಿ ತೋರುತ್ತಾನೆ. ಪಿತೃತ್ವ ತ್ಯಾಗಕ್ಕಾಗಿ ಸಿದ್ಧನಾಗುತ್ತಾನೆ. ಇದೇ ಸ್ಥಿತಿಯಲ್ಲಿ ಈ ಮಕ್ಕಳ ತಾಯಿ ಇದ್ದಿದ್ದರೆ ಅವಳೆಂದೂ ಮಾತೃತ್ವವನ್ನು ತ್ಯಾಗಮಾಡಲು ಸಿದ್ಧಳಾಗುತ್ತಿರಲಿಲ್ಲ.

ಮಕ್ಕಳನ್ನು ಸ್ವತಃ ತಂದೆ ದತ್ತು ಕೊಡುವ ವಿಚಾರದೊಂದಿಗೆ ಕಾದಂಬರಿ ಪ್ರಾರಂಭವಾಗುವುದರಿಂದ ಭಾವನಾತ್ಮಕ ಸೆಳೆತವನ್ನೂ ಕುತೂಹಲವನ್ನು ಕಾದಂಬರಿ ಉಂಟುಮಾಡುತ್ತದೆ.

''ವೇದಾಂತಿಕ ಮನೋಭಾವದ ಜನ ಕರ್ತವ್ಯ ತಪ್ಪಿಸಿಕೊಳ್ಳೊದರಲ್ಲಿ ಮುಂದು'' (ನಿರಾಕರಣ, ಪು-೫) ಎಂಬ ಬಸ್ ಪ್ರಯಾಣಿಕರ ಮಾತು ನರಹರಿಯ ನಿರ್ಧಾರವನ್ನು ಬದಲಿಸುವುದಿಲ್ಲ.

' ಇನ್ನೂ ಕೆಲವು ದಿನಗಳಲ್ಲಿ ಮಕ್ಕಳ ಪಾಲಿಗೆ ನಾನು ಸಾಯುತ್ತೇನೆ ' ಎಂಬ ಕಠಿಣ ನಿರ್ಧಾರಕ್ಕೆ ಬರುತ್ತಾನೆ ಅದಕ್ಕಾಗಿ ಮನಸ್ಸನ್ನು ಸಿದ್ಧಗೊಳಿಸಿಕೊಳ್ಳುತ್ತಾನೆ.

ನಾಲ್ಕನೆ ಇಯತ್ತೆಯಲ್ಲಿ ಒದುತ್ತಿರುವ ಹಿರಿಯ ಮಗಳು ಮಕ್ಕಳನ್ನು ನೋಡಿಕೊಳ್ಳಬಹುದಿತ್ತು ಎನ್ನುವ ಆಶಾಭಾವನೆಯೂ ಅವಳು ಅಡುಗೆ ಮಾಡುವಾಗ ಲಂಗ ಸುಟ್ಟುಕೊಳ್ಳುವದರೊಂದಿಗೆ ಕಮರಿ ಹೋಗುತ್ತದೆ.

ತಮ್ಮನ್ನು ಅಪ್ಪ ಬೇರೆಯವರಿಗೆ 'ದತ್ತು' ಕೊಡುತ್ತಾರೆಂಬ ವಿಷಯ ಮಕ್ಕಳ ಮನಸ್ಸಿನಲ್ಲಿ ಉಂಟು ಮಾಡುವ ಪರಿಣಾಮವನ್ನು ಕಾದಂಬರಿಕಾರರು ಮನಮುಟ್ಟುವಂತೆ ಚಿತ್ರಿಸಿದ್ದಾರೆ.

'' ರಾಂಗ್ ಣೇಕರ್ ಹೆಂಡ್ತಿ, ಹೆತ್ತ ಅಪ್ಪನಿಗೆ ಹೀಗೆ ಮಾಡುಕ್ಕೆ ಹ್ಯಾಗೆ ಕರಳು ಬರುತ್ತೆ ಅಂದ್ರು, ಶಕುಂತಲಾ ಮೌಸಿ ಗಂಡಸು ಜಾತಿ ಕಣ್ರಿ ಅಂತಿದ್ರು'' (ನಿರಾಕರಣ ಪು-೧೧) ಅದು ನಿಜವೇನಣ್ಣಾ ? ಎಂದು ಮಗಳು ಭವಾನಿ ತಂದೆಯನ್ನು ಕೇಳುವಲ್ಲಿ ಎಳೆಯ ಮನಸ್ಸಿಗೆ ಆತಂಕ, ಅತಂತ್ರ ಸ್ಥಿತಿ ತೋರುತ್ತದೆ ಸಮಾಜದಲ್ಲಿ ಈ ಸಂದರ್ಭದಲ್ಲಿ ಬರಹವು ಕುಹಕ, ಟೀಕೆ ವಾಸ್ತವಾಂಶಗಳಿಂದ ಕೂಡಿವೆ.

ಮೊದಲ ಮದುವೆಯಾಗುವಾಗಲೂ ಅರೆಬರೆ ಮನಸ್ಸಿನಿಂದಲೇ ಒಪ್ಪಿಕೊಳ್ಳುವ ನರಹರಿ ನಂತರ ವೈದೇಹಿಯನ್ನು ಮದುವೆಯಾಗುವಾಗಲೂ ಸಾಮಾಜಿಕವಾಗಿ ಎದುರಾಗುವ ಟೀಕೆಯನ್ನು ತಪ್ಪಿಕೊಳ್ಳವ ಸಲುವಾಗಿಯೇ ಮದುವೆಯಾಗುತ್ತಾನೆ. ಇಲ್ಲಿಯೂ ಅವನ ಈ ಕ್ರಿಯೆ ಸಂಪೂರ್ಣ ಸಿದ್ಧಗೊಂಡ ಮಾನಸಿಕ 'ಸ್ವೀಕರಣ' ಕ್ರಿಯೆಯಾಗುವುದೇ ಇಲ್ಲ.

ಸಂಸಾರಬಂಧನಕ್ಕೆ ಅಂಟಿದರೂ ಅಂಟದಂತಿರಬೇಕು ಎಂಬ ತಾತ್ವಿಕ ಭಾವನೆ ಅವನಲ್ಲಿ ಬಲವಾಗುತ್ತಾ ಸಾಗುತ್ತದೆ. ಸಾಮಾನ್ಯನೊಬ್ಬನ ಚಂಚಲ ಮನಸ್ಸಿನ ಸ್ವರೂಪವನ್ನು ಕಾದಂಬರಿ ಕಟ್ಟಿಕೊಡುತ್ತದೆ. ಮಕ್ಕಳನ್ನು ದತ್ತುಕೊಡುವಾಗಲೂ ಪ್ರೀತಿಯ ಆಕರ್ಷಣೆ, ವಿಕರ್ಷಣೆಗೆ ಒಳಗಾಗುತ್ತಾನೆ.

ನಾಲ್ಕು ಮಕ್ಕಳ ದತ್ತು ನಿಶ್ಚಯವಾಗಿ ಹಿರಿಯ ಮಗ ವಿಜಯ ಉಳಿದಾಗ ಅವನನ್ನು ಉಳಿಸಿಕೊಳ್ಳಬೇಕು ಎನ್ನುವ ಆಕರ್ಷಣೆಗೆ ಒಳಗಾಗುತ್ತಾನೆ. ಆದರೆ ನರಹರಿಗೆ ಪಿಂಡಪ್ರಧಾನ ಮಾಡುವುದಕ್ಕಾಗಿ ಮಗ ಎನ್ನುವುದರಲ್ಲಿಯೂ ನಂಬಿಕೆ ಇಲ್ಲ. ವಂಶೋದ್ಧಾರಕ್ಕಾಗಿ ಎನ್ನುವ ವಿಚಾರವೂ ಇಲ್ಲ ಕಾರಣ ತನ್ನ ತಂದೆ ತಾಯಿಗಳಿಗೆ ಅವನು ಹೃಷಿಕೇಶ, ಕಾಶಿ, ಗಯಾಗಳಿಗೆ ಹೋದಾಗ ಪಿಂಡಪ್ರಧಾನ ಮಾಡುವುದಿಲ್ಲ.

ನರಹರಿಗೆ ' ಒಂಟಿತನ' ಅವನ ವ್ಯಕ್ತಿತ್ವದ ಸಹಜ ಸ್ಥಿತಿ. ಅವನು ಲಲಿತೆಯನ್ನು , ವೈದೇಹಿಯನ್ನು ಮದುವೆಯಾಗುವುದು ಕಾಮದ ಆಕರ್ಷಣೆಯಿಂದ ಅಲ್ಲ. ಭಾವ ರಾಮಕೃಷ್ಣನ ಸ್ನೇಹವಾದ ಮೊದಲಲ್ಲಿ ಅವನ ಜೊತೆಗೆ ವೇಶ್ಯಾಗೃಹಕ್ಕೆ ಹೋದಾಗಲೂ ಕಾಮದ ವಿಷಯದಲ್ಲಿ ಅವನು ಆಸಕ್ತಿ ತಾಳುವುದೇ ಇಲ್ಲ. ಈ ತರಹದ ನಿರ್ಲಿಪ್ತಿಯನ್ನೂ ನರಹರಿಯಲ್ಲಿ ಕಾಣುತ್ತೇವೆ.

ಮಕ್ಕಳನ್ನು ದತ್ತುಕೊಟ್ಟ ನಂತರ ಸನ್ಯಾಸವನ್ನು ಹರಿದ್ವಾರದಲ್ಲಿ ದೊರೆತ ಗುರುವಿನಿಂದ ಸ್ವೀಕರಿಸುತ್ತಾನೆ. ' ಒಂದು ಜಾಗದಲ್ಲಿ ನೆಲೆಸಿ ತಪಸ್ಸು ಸುರುಮಾಡುವ ಮೊದಲು ನೀನು ಮೇಲೆ ಹೋಗಿ ಸಂಚಾರ ಮಾಡಿಕೊಂಡು ಬಾ'

'ಮೇಲೆ ಎಂದರೆ ಹಿಮಾಲಯ, ಹೃಷಿಕೇಶವೇ ಅದರ ಆರಂಭ ಬಿಂದು. ಹೃಷೀಕ ಎಂದರೆ ಇಂದ್ರಿಯ, ಇಲ್ಲಿಂದ ಮೇಲೆ ಹೋಗಿ ಸಂಚಾರ ಮಾಡಿಕೊಂಡು ಬರುವುದು ಎಂದರೆ ಏನು ಗೊತ್ತಾಯಿತು ತಾನೆ ?' (ನಿರಾಕರಣೆ ಪು-೭೪) ಎಂದು ಪ್ರಶ್ನಿಸಿ ನರಹರಿಗೆ ಸೂಚ್ಯವಾಗಿ ಅವನ ಮುಂದಿನ ದಾರಿಯನ್ನು ತೋರುತ್ತಾರೆ.

ಇಂದ್ರಿಯ ಬಯಕೆಗಳಿಂದ ದೂರವಾಗಿ, ಆಧ್ಯಾತ್ಮಿಕ ಅತ್ಯಂತಿಕ ಸತ್ಯದ ಕಡೆಗೆ ತುಡಿಯುವುದರ ಸಂಕೇತವಾಗಿ ಈ ಹಿಮಾಲಯವನ್ನು ಏರುವ ಕ್ರಿಯೆಯನ್ನು ಕಾದಂಬರಿಕಾರರು ಚಿತ್ರಿಸುತ್ತಾರೆ. ಆದರೆ ನರಹರಿಗೆ ಹಿಮಾಲಯವನ್ನು ಏರುವುದು ಸಾಧ್ಯವಾಗುತ್ತದೆ. ಆದರೆ ಏರುವುದರ ಆಶಯವನ್ನು ಅವನಿಂದ ಸಾಧಿಸುವುದಾಗುವುದಿಲ್ಲ. ಅವನದು ವಿಲಕ್ಷಣವಾದ ವ್ಯಕ್ತಿತ್ವ. ಸಂಸಾರವನ್ನು ಅಂದರೆ ಬಂಧನವನ್ನು ತ್ಯಜಿಸುವುದು ಪ್ರವಾಹದ ವಿರುದ್ಧ ಈಜಿದಂತೆ, ಈ ಪ್ರವಾಹದ ವಿರುದ್ಧ ಈಜುವುದು ಅವನಿಂದ ಸಾಧ್ಯವಾಗುವುದಿಲ್ಲ.

ಹಿಮಾಲಯವನ್ನು ಏರುತ್ತ ಪ್ರಚಂಡ ಹಿಮಾಪಾತವಾಗುವ ಕೇದಾರನಾಥಕ್ಕೆ ಹೋಗುತ್ತಾನೆ. ಅಲ್ಲಿ ಬಾರಾಮಾಸಿ ಮಹಾರಾಜರ ದರ್ಶನವಾಗುತ್ತದೆ. ಬಾರಾಮಾಸಿ ಮಹಾರಾಜರು ಲಂಗೋಟಿದಾರಿಯಾಗಿ ಅಥವಾ ಅದೂ ಇಲ್ಲದೇ ಹನ್ನೆರಡು ತಿಂಗಳೂ ಅಲ್ಲಿಯೇ ಇರುವವರು.

ಚೆಂಬೂರಿನ ಅಣಿಕ್ ಗುಡ್ಡವನ್ನು ಲೆಕ್ಕವಿಲ್ಲದಷ್ಟು ಸಲ ಹತ್ತಿದರೂ ಹಿಮಾಲಯ ಏರುವುದು ನರಹರಿಗೆ ಕಷ್ಟವಾಗುತ್ತದೆ. ಚೆಂಬೂರಿನ ಗುಡ್ಡ ಬಂಧನಕ್ಕೆ ಸಂಕೇತವಾದರೆ, ಹಿಮಾಲಯ ಬಂಧನದ ಮುಕ್ತಿಯ ಸಂಕೇತವಾಗಿದೆ. ಅದೇ ರೀತಿ ಹಿಮಾಲಯ ನಿಸ್ಸಂಗರ ನೆಲೆ. ಕಾಶಿ ಸಂಗರ ಪರಿವಾರ ಕೇಂದ್ರ. ಕಾಶಿ ಬೆಳೆಯುತ್ತಾ ಸಾಗಿದೆ ಆದರೆ ಹಿಮಾಲಯ ಇದ್ದಂತೆಯೇ ಇದೆ. ಅಂದರೇ ಐಂದ್ರಿಕ ಬಯಕೆಗಳಿಗೆ ಸೋಲುವವರ ಸಂಖ್ಯೆ ವರ್ಧಿಸುತ್ತಲೇ ಇದೆ. ಶುದ್ಧ ಆಧ್ಯಾತ್ಮಿಕತೆಯಲ್ಲಿ ಯಾವ ಬದಲಾವಣೆಯೂ ಇಲ್ಲ.

ನರಹರಿ ನಿಸ್ಸಂಗನಾಗುವುದು, ಹಿಮಾಲಯಕ್ಕೆ ಅವನು ಹೊಂದಿಕೊಳ್ಳದೆ ಕೆಳಗಿಳಿದು ಬರುತ್ತಾನೆ,

ಕೇದಾರನಾಥ ತಲುಪಿದ ನಂತರ ಅವನಿಗೆ ದೇವಸ್ಥಾನದ ಮುಂಬಾಗದ ಮೇಲೆ ನಗ್ನ ಸ್ಥಿತಿಯಲ್ಲಿ ಕುಳಿತ ಬಾರಾಮಾಸಿ ಮಹಾರಾಜರ ದರ್ಶನವಾಗುತ್ತದೆ. ನಂತರ ಅವರ ಜೊತೆಯಲ್ಲಿ ಒಂದು ಕಲ್ಲಿನ ಪುಟ್ಟ ಮನೆಯಲ್ಲಿ ವಾಸಿಸುತ್ತಾನೆ. ಶೀತಕಾಲದಲ್ಲಿ ದೇವಾಲಯದ ಬಾಗಿಲು ಮುಚ್ಚಿದಾಗ ಇಲ್ಲಿ ಬರಬಾರದಾಗಿತ್ತೆಂದು ಅವರು ತಿಳಿಸುತ್ತಾರೆ. ಮೂರು ತಿಂಗಳು ಅಲ್ಲಿಯೇ ಕಳೆದು ಆ ವಿಪರೀತ ಹಿಮಾಪಾತವಾಗುವ ಪ್ರದೇಶದಲ್ಲಿ ತಾನಿರುವುದು ಸಾಧ್ಯವೇ ಇಲ್ಲವೆನಿಸಿ ಕೆಳಗಿಳಿಯಲು ಪ್ರಾರಂಭಿಸುತ್ತಾನೆ. ಮಧ್ಯದಲ್ಲಿ ತಂಗಿ, ಹದಿನೈದು ದಿನದಲ್ಲಿ ಹೃಷಿಕೇಶವನ್ನು ತಲುಪುತ್ತಾನೆ.

ಮತ್ತೆ ಲಲಿತೆ, ವೈದೇಹಿಯರ ನೆನಪು ಕಾಡಲು ಪ್ರಾರಂಭವಾಗುತ್ತದೆ. ಲಲಿತಳದು ಮಾತೃವಾತ್ಸಲ್ಯ ಭಾವನೆ, ಗಂಡನನ್ನು ತಬ್ಬಿಕೊಂಡರೂ ತಾಯಿಯು ಮಗವನ್ನು ಅಪ್ಪಿಕೊಂಡಂತಹ ಬೆಚ್ಚನೆಯ ಅನುಭವವಾಗತ್ತಿತ್ತು. ಆದರೆ ವೈದೇಹಿ ತಬ್ಬಿಕೊಂಡರೆ ತಪ್ತಳಾದ ಪ್ರೇಯಿಸಿಯು ಪ್ರಿಯನನ್ನು ಆಲಂಗಿಸುವ ಬಿಸಿ ವ್ಯಾಪಿಸುತ್ತಿತ್ತು. ಒಬ್ಬರ ಪ್ರೀತಿ ಹೆಚ್ಚಲ್ಲ ಒಬ್ಬರದು ಕಡಿಮೆಯಲ್ಲ ಎರಡರ ಸ್ವರೂಪವೂ ಬೇರೆ ಬೇರೆ. (ನಿರಾಕರಣ ಪು-೧೧೯)

ಹೀಗೆ ಅನೇಕ ನೆನಪುಗಳು ಅವನನ್ನು ಮತ್ತೆ ಭೂತಕಾಲದ ದಿನಗಳತ್ತ ತಿರುಗಿಸುತ್ತದೆ ಬನ್ನಿ ಮಹಾರಾಜ ಎಂಬ ಭಗ್ನಪ್ರೇಮಿ ಸನ್ಯಾಸಿಯಾಗಿರುತ್ತಾನೆ. ಆದರೆ ನರಹರಿಯನ್ನು ಲಲ್ಲೂ ಎಂಬ ವೇಶ್ಯೆಯ ಮನೆಗೆ ಕರೆದುಕೊಂಡು ಹೋಗುತ್ತಾನೆ. ಆದರೆ ನರಹರಿಗೆ ತಾನೂ ಇಲ್ಲಿಗೆ ಬರಬಾರದಿತ್ತು ಎಂಬ ಭಾವನೆ ಉಂಟಾದರೂ ಅವನ ಅಧಃಪತನ ಕ್ರಿಯೆ ಮತ್ತೆ ಪ್ರಾರಂಭವಾಗಿರುತ್ತದೆ.

ನರಹರಿಯ ಬದುಕಿನಲ್ಲಿ ಮೂರು ಪ್ರಮುಖ ಘಟನೆಗಳನ್ನು ಗುರುತಿಸಬಹುದು. ಅವನ ಸಾಂಸಾರಿಕ ಬದುಕು, ಆಧ್ಯಾತ್ಮಿಕ ಬದುಕು, ಸಾಮಾಜಿಕ ಬದುಕು ಈ ಮೂರುರಲ್ಲಿಯೂ ಅವನು 'ನಿರಾಕರಣ'ದ ಪ್ರತೀಕವಾಗಿ ಕಂಡು ಬರುತ್ತಾನೆ.

ಅವನು ತನ್ನ ಬದುಕಿನ ಮೂರನೆಯ ಘಟ್ಟದಲ್ಲಿ 'ಶೆಣ್ಯೆ'ಸಹಾಯದಿಂದ ಅನ್ನಪೂರ್ಣ ಅನಾಥಾಶ್ರಮದ ವಾರ್ಡನ್ನಾಗಿ ಸೇರಿಕೊಳ್ಳುತ್ತಾನೆ. ಪುನಃ ಅವನು ಮುಂಬೈಗೆ ಹಿಂತಿರುಗುತ್ತಾನೆ ಸ್ವಂತ ಮಕ್ಕಳನ್ನು ಸಾಕದ 'ನರಹರಿ' ಈಗ ಅನಾಥಾಶ್ರಮದ ವಾರ್ಡನ್ನಾಗಿ ಕೆಲಸ ಮಾಡುವ ವಿರೋಧಾಬಾಸಕ್ಕೆ ಒಳಗಾಗುತ್ತಾನೆ. ಅನಾಥಾಶ್ರಮದಲ್ಲಿ ಸಹಾಯಕರಾಗಿ ಕೆಲಸ ಮಾಡುವ 'ರೇಳೆ' ನರಹರಿಯಂತೆ ಹೆಂಡತಿ ಮಕ್ಕಳನ್ನು ಕಳೆದುಕೊಂಡವರು. ನರಹರಿ ಮತ್ತು ರೇಳೆ ಸಮಾನ ದುಃಖಿತರು; ಸಮಾನ ಮನಸ್ಕರು ಆಗಿರುವುದರಿಂದ ಬಹುಬೇಗನೆ ಹೊಂದಿಕೊಳ್ಳುತ್ತಾರೆ.

ಹಿಮ್ಮತ್ ಸಿಂಹಜಿಯವರು ಈ ಅನಾಥಶ್ರಮವನ್ನು ನಿಷ್ಕಾಮ ಧರ್ಮದಿಂದ ನಡೆಸುತ್ತಿಲ್ಲ. ಧರ್ಮವೂ ಆಯಿತು, ವ್ಯವಹಾರವೂ ಆಯಿತು ಎಂಬ ಮನೋಭಾವದಲ್ಲಿ ನಡೆಸುತ್ತಿದ್ದಾರೆ ಎಂಬ ವಿಚಾರ ನರಹರಿಗೆ ತೋರುತ್ತದೆ. ಆದರೆ ಇದರಲ್ಲಿ ರೇಳೆಗೆ ಅಂಥ ತಪ್ಪೇನೂ ಕಂಡುಬರುವುದಿಲ್ಲ. ಪ್ರತಿಯೊಬ್ಬನೂ ನಿರೀಕ್ಷೆಯಿಂದಲೇ ಕಾರ್ಯ ಕೈಗೊಳ್ಳುತ್ತಾನೆ.

''ಹಿಮಾಲಯಕ್ಕೆ ಹೋಗೋದು ಎಷ್ಟು ಜನಕ್ಕೆ ಸಾಧ್ಯ ? ಹಾಗೆ ಹೋಗಿ ಅಲ್ಲಿರೋರಿಂದ ಎಷ್ಟು

ಜನಕ್ಕೆ ಉಪಕಾರವಾಗಿದೆ ? ಉಪಕಾರವಾಗಿರೋದು ಹಿಮ್ಮತ್ ಸಿಂಹ್‌ಜಿಯಂಥೋರಿಂದಲೇ. '' (ನಿರಾಕರಣ, ಪು-೧೪೭) ಎಂದು ಸಮರ್ಥಿಸಿಕೊಳ್ಳುತ್ತಾನೆ 'ರೇಳೆ' ಈ ಸಮಾಜದಲ್ಲಿರುವ ಜನರ ಮನಸ್ಸನ್ನು ಚೆನ್ನಾಗಿ ಅರ್ಥಮಾಡಿಕೊಂಡು ವ್ಯಕ್ತಿ. ''ನಾನು ಪ್ರಪಂಚ ನೋಡಿದೀನಿ ದತ್ತು ತೊಗೊಂಡಾಗ ಇರೋ ಉತ್ಸಾಹ ವರ್ಷ ಎರಡು ವರ್ಷ ಕಳೆದ ಮೇಲೆ ಎಷ್ಟೋ ಜನಕ್ಕೆ ಇರುಲ್ಲ. ಆಮೇಲೆ ಅವರಿಗೆ ಮಕ್ಕಳಾಗಬಹುದು ಮನಸ್ಸು ಕೆಡಬಹುದು ಹೆತ್ತ ರಕ್ತದ ಮಗನಾದರೆ ಏನು ಕೆಟ್ಟ ಗುಣ ಕಲಿತರೂ ಕ್ಷಮಿಸಿ ಬಿಡುತ್ತಾರೆ. ಬೇರೆ ರಕ್ತದ ದತ್ತು ಹುಡುಗ ಹಾಗಾದರೆ ಸಹನಾ ಬರೋದಿಲ್ಲ'' (ನಿರಾಕರಣ, ಪು-೧೫೨) ಎಂಬ ವಾಸ್ತವ ಸ್ಥಿತಿಯನ್ನು ನರಹರಿಯ ಮುಂದೆ ಇಡುತ್ತಾನೆ ನರಹರಿಗೆ ತನ್ನ ಮಕ್ಕಳನ್ನು ನೋಡುವ ಬಯಕೆ ಇದ್ದರೂ ಮಧ್ಯದಲ್ಲಿ ಹೋಗಿ ಸಂಬಂಧ ಕೆಡಿಸಲು ಇಷ್ಟವಾಗುವುದಿಲ್ಲ. ಕಾರಣ ರೇಳೆಯೇ ಈ ಹುಡುಗರನ್ನು ನೋಡಲು ನರಹರಿಯ ಐದನೆಯ ಮಗನಾದ ಲಕ್ಷ್ಮಣನ ಊರಾದ ಬಡೋದೆಗೆ ಹೋಗುತ್ತಾನೆ. ಲಕ್ಷ್ಮಣನ ದತ್ತು ತಂದೆ ಬಾಬೂಬಾಯಿ ಪಟೇಲರಿಗೆ ಹೆಂಡತಿಗೆ ಇಂಗ್ಲೆಂಡಿನಲ್ಲಿ ಅಪರೇಷನ ಮಾಡಿಸಿದ ನಂತರ ಎರಡು ಮಕ್ಕಳಾಗುತ್ತವೆ. ಮಕ್ಕಳಾದ ನಂತರ ದತ್ತು ಪುತ್ರ ಲಕ್ಷ್ಮಣನ ಮೇಲಿನ ಪ್ರೀತಿ ಮಾಯಾವಾಗುತ್ತದೆ. ''ಅವನನ್ನು ಆಳುತನಕ್ಕೆ ಹಾಕಿಕೊಳ್ಳುತ್ತಾರೆ ಆಫ್ರಿಕಾಕ್ಕೆ ಹೋದಾಗ ಅವನನ್ನು ಸಾಯ್ಸಿರಬಹುದು ಯಾರಾದ್ರೂ ಕೂಲಿ ಕುಂಬಳಿಯವರಿಗೆ ಕೊಟ್ಟು ಬಂದಿರಬಹುದು'' (ನಿರಾಕರಣ, ಪು -೧೫೨) ಎಂಬ ವಿಷಯ ಪಟೇಲರ ಅಂಗಡಿಯ ಆಳಿನಿಂದ ತಿಳಿದು ಬರುತ್ತದೆ. ಸಮಾಜದಲ್ಲಿ ಇಂಥ ಕ್ರೌರ್ಯವೂ ಇದೆ ಎಂಬ ವಿಷಯ ಗೊತ್ತಾಗುತ್ತದೆ.

ವಿಜಯ ಮತ್ತು ಗಣೇಶ ಚೆನ್ನಾಗಿರುವ ಸಂಗತಿ ರೇಳೆಗೆ ತಿಳಿಯುತ್ತದೆ. ವಿಜಯನನ್ನು ದತ್ತು ತೆಗೆದುಕೊಂಡವರಿಗೆ ಸ್ವಂತ ಎರಡು ಮಕ್ಕಳಿದ್ದರೂ ವಿಜಯನನ್ನು ಸ್ವಂತ ಮಗನೆಂದೇ ತಿಳಿಯುವ ಉದಾತ್ತ ಹೃದಯವಂತರು. ಆಗ್ರಾದ ಸತ್ಯಪಾಲ್ ಅಗರ್‌ವಾಲ್‌ರೂ ಕೂಡಾ ಗಣೇಶನನ್ನು ಸ್ವಂತ ಮಗನಂತೆ ಸಾಕಿರುತ್ತಾರೆ.

ಜಯಪುರದ ಚಾಂದ್‌ಮಲ್‌ಜಿ ರಾಮಚಂದ್ರನ ದತ್ತು ತಂದೆ. ತಂದೆ ಚೆನ್ನಾಗಿ ನೋಡಿಕೊಳ್ಳುತ್ತಿದ್ದರೂ ಅವನ ಹೆಂಡತಿ ಕ್ರೂರಿ ಆಸ್ತಿಯಲ್ಲಿ ಪಾಲುಕೊಡಬೇಕಾಗುತ್ತದೆ ಎನ್ನುವ ಕಾರಣದಿಂದ ಅವನು ಸಾಯಲಿ ಎನ್ನುವ ಶಾಪ ಹಾಕುತ್ತಿರುತ್ತಾಳೆ. ಕೂಲಿಯಾಳಿನಂತೆ ದುಡಿಸಿಕೊಳ್ಳುತ್ತಿರುತ್ತಾಳೆ ಇದನ್ನು ಕಂಡ ರೇಳೆ ರಾಮಚಂದ್ರನನ್ನು ಅನಾಥಾಶ್ರಮಕ್ಕೆ ಕರೆತರುತ್ತಾನೆ.

ಭವಾನಿಯ ಸ್ಥಿತಿಯೂ ಅಷ್ಟೇನೂ ಉತ್ತಮವಾಗಿರುವುದಿಲ್ಲ ಪಣಂದೀಕರ್ ಮಗ ಇವಳನ್ನು ತಂಗಿ ಎಂದು ತಿಳಿಯುವುದಿಲ್ಲ ಮನೆಯಲ್ಲಿ ಸೇವಕಿಯಂತೆ ನಡೆಸಿಕೊಳ್ಳುತ್ತಿರುತ್ತಾರೆ. ಆದರೆ ಭವಾನಿ ಕಷ್ಟಗಳನ್ನು ಎದುರಿಸುವ ದಿಟ್ಟೆ. ಮೆಟ್ರಿಕ್ ಪಾಸಾಗಿ ಟೈಪಿಂಗ್ ಕಲಿತು ಮುಂಬೈಗೆ ಇಂಟರ್‌ವ್ಯೂಗೆ ಬರುತ್ತಾಳೆ ಹೀಗೆ ಬಂದಾಗ ತನ್ನ ತಂದೆ ಅನಾಥಾಶ್ರಮದಲ್ಲಿರುವುದನ್ನು ತಿಳಿದ ಅಲ್ಲಿಗೆ ಬರುತ್ತಾಳೆ.

ನರಹರಿ ಎಲ್ಲ ಮಕ್ಕಳನ್ನು ದತ್ತು ಕೊಟ್ಟು ಹೊಣೆಗೇಡಿಯಂತೆ ವರ್ತಿಸಿದ ರೀತಿಯನ್ನು ಕಟುವಾಗಿ ಟೀಕಿಸುತ್ತಾಳೆ. ಅವನ ಅಂತಃ ಪ್ರಜ್ಞೆಗೆ ನಾಟುವಂತೆ ಮಾತನಾಡುತ್ತಾಳೆ. '' ಅಮ್ಮ, ಚಿಕ್ಕಮ್ಮ ಬದುಕಿದ್ದರೆ

ಮಕ್ಕಳನ್ನು ಕೂಲಿ ಕೆಲಸ ಮಾಡಿ ಸಾಕುತ್ತಿದ್ದರು ಹೀಗೆ ಮಾಡುತ್ತಿದ್ದರೇ ?'' ಎಂಬ ಭವಾನಿಯ ಪ್ರಶ್ನೆಗೆ ಅವನಲ್ಲಿ ಉತ್ತರವೇ ಇಲ್ಲ ಅನುಭವಗಳಿಗೆ ಒಡ್ಡಿಕೊಳ್ಳದ ದುರ್ಬಲ ಮನಸ್ಸಿನ ನರಹರಿಯ ಬಗ್ಗೆ ಅವನ ಸ್ಥಿತಿಯ ಬಗ್ಗೆ ಮೊದಮೊದಲು ಓದುಗರಿಗೆ ಅನುಕಂಪ ಬಂದರೂ ನಂತರ ದತ್ತು ಸ್ವೀಕರಿಸಿದ ತಂದೆ ತಾಯಿಗಳಲ್ಲಿ ಲಕ್ಷ್ಮಣನ, ರಾಮಚಂದ್ರನ ಮತ್ತು ಭವಾನಿಯ ಸ್ಥಿತಿಯನ್ನು ಕಂಡು ಕೋಪವೂ ಉಂಟಾಗುತ್ತದೆ, ಭವಾನಿಯ ಧೈರ್ಯ ನರಹರಿಯಲ್ಲಿ ಕಾಣುವುದಿಲ್ಲ. '' ಸನ್ಯಾಸ, ಸಾಕ್ಷಾತ್ಕಾರ, ಮುಕ್ತಿ ಇವೆಲ್ಲ ನಿಮಗೊಬ್ಬರಿಗೆ ಮಾಡಿದೆ ಏನೋ ; ಈಗಲೂ ಒಂದು ಕೆಲಸ ಮಾಡಿ ರಾಮನಿಗೆ ಎಲ್ಲಾನೂ ಬಿಡಿಸಿ ಹೇಳಿ ಬಿಡಿ ; ಇವಳೇ ನಿನ್ನ ಅಕ್ಕ ಅಂತ ತಿಳಿಸಿ ನನಗೆ ಹ್ಯಾಗೋ ಒಂದು ಕೆಲಸ ಸಿಕ್ಕುತ್ತೆ ಬೋಂಬಾಯಿಯಲ್ಲೇ ಒಂದು ಕೋಣೆ ಮಾಡ್ಕಂಡು ಇರ್ತೀನಿ ನನ್ನ ಜೊತೆ ಇಟ್ಕತೀನಿ ತಂದೆ ತಾಯಿ ಇಲ್ದೆ ನಾನು ಬೆಳೆದದ್ದು ಸಾಕು ಇದುವರೆಗೆ ಅವನು ನೊಂದದ್ದು ಸಾಕು ಈಗ ರಾಮನಿಗೆ ನಾನಾದರೂ ತಾಯಿಯಾಗ್ತೀನಿ'' (ನಿರಾಕರಣ, ಪು-೧೯೪) ಎನ್ನುವ ಅವಳ ಸಂಕಲ್ಪದ ಮುಂದೆ ನರಹರಿ ಗರಬಡಿದವನಂತಾಗುತ್ತಾನೆ. ಇದುವರೆಗೆ ತಾನು ಮಾಡಿದದುದೆಲ್ಲ ಮಹಾ ವೈಫಲ್ಯದಂತೆ ತೋರುತ್ತದೆ. ತನ್ನಲ್ಲಿ ನಿರ್ಣಯಿಸುವ ಶಕ್ತಿಯೇ ಇಲ್ಲ ಎನಿಸುತ್ತದೆ ಆದರೆ ಕೊನೆಗೆ ರಾಮಚಂದ್ರ ಭವಾನಿಯರನ್ನು ತಾನೇ ನೋಡಿಕೊಳ್ಳಬೇಕೆಂದು ನಿರ್ಧರಿಸುತ್ತಾನೆ. ಈ ನಿರ್ಧಾರದಿಂದ ತಾನು ಕೆಳಗೆ ಬಿದ್ದೆನೆಂದೆನಿಸಿದರೂ ಅ ಕ್ಷಣದಲ್ಲಿ ತಾನು ಮೊದಲಿಗಿಂತ ಹೆಚ್ಚು ಚೆನ್ನಾಗಿ ಆಶ್ರಮದ ಮಕ್ಕಳ ಸೇವೆ ಮಾಡಲು ಅರ್ಹನಾದಂತೆ ಎನಿಸುತ್ತದೆ.

ಬೊಂಬಾಯಿಯ ಬಂಡವಾಳ ಶಾಹಿ ವ್ಯವಸ್ಥೆಯಲ್ಲಿ ನರಹರಿಯಂಥ ಸಾಮಾನ್ಯನ ಬದುಕು ಹೇಗೆ ಅಸ್ತಿತ್ವ ರಹಿತವಾಗುತ್ತದೆ ಎಂಬುದರ ಸೂಕ್ಷ್ಮ ವಿವರಗಳು ಕಾದಂಬರಿಯಲ್ಲಿ ದೊರೆಯುತ್ತವೆ.

ಕಾಶಿ, ಹಿಮಾಲಯ ಪರ್ವತಗಳ ಹಿನ್ನೆಲೆಯಲ್ಲಿ ವ್ಯಕ್ತವಾಗಿರುವ ಭಾರತೀಯ ಸಂಸ್ಕೃತಿ, ಪರಂಪರೆಯ ಆಧ್ಯಾತ್ಮಿಕ ವಿಷಯಗಳ ಚಿತ್ರಣವಿದೆ. ಬಾರಾಮಾಸಿ ಮಹಾರಾಜ್‌ರ ಬದುಕು, ಬನ್ಸಿಮಹಾರಾಜ್‌ನ ಬದುಕು, ಕಾಶಿಯ ಲಲ್ಲೂಳ ಬದುಕು ಹೀಗೆ ಅನೇಕ ಸಂಗತಿಗಳು ಕಾದಂಬರಿಯಲ್ಲಿ ಅನುಭವದ ಸಾಧ್ಯತೆಗಳನ್ನು ತೆರೆದಿಡುತ್ತದೆ.

# ಗೃಹಭಂಗ

'ಗೃಹಭಂಗ' ಇದುವರೆಗೆ ರಚಿತವಾದ ಭೈರಪ್ಪನವರ ಕಾದಂಬರಿಗಳಲ್ಲಿ ಕಲಾತ್ಮಕ ಗುಣದಿಂದ ವಿಶೇಷವಾದ ಸ್ಥಾನವನ್ನು ಪಡೆದುಕೊಳ್ಳುತ್ತದೆ. ಕಾದಂಬರಿಕಾರರೇ ನಿವೇದಿಸುವಂತೆ '' ಈ ಕಾದಂಬರಿ ಯಾವ ಸಮಸ್ಯೆಯನ್ನು ಕುರಿತದ್ದಲ್ಲ ವಸ್ತುನಿಷ್ಠವಾಗಿ ಜೀವನವನ್ನು ಕಾಣಿಸುವ ಪ್ರಯತ್ನ ಜೀವನವೆಂಬುದು ಯಾರೋಬ್ಬನ ಅನುಭವ ಅಥವಾ ಬೌದ್ಧಿಕ ಹಿಡಿತದ ಸಮಗ್ರತೆಗೆ ಸಿಕ್ಕದಷ್ಟು ವಿಶಾಲವಾದದ್ದು ಈ ಕಾದಂಬರಿಯಲ್ಲಿ ಕಾಣಿಸಲು ಪ್ರಯತ್ನಿಸಿರುವ ಜೀವನದ ಕಾಲ ೧೯೨೦ರಿಂದ ಪ್ರಾರಂಭವಾಗಿ ೧೯೪೫ದರ ಸುಮಾರಿಗೆ ಮುಕ್ತಾಯಗೊಳ್ಳುತ್ತದೆ.''(ಕಾದಂಬರಿ ಓದುವ ಮುನ್ನ ಲೇಖನ) ಎಂದು ತಿಳಿಯುತ್ತದೆ.

ಗೃಹಭಂಗದ ಕಥೆ ಸಾಗುವುದು ಗ್ರಾಮ ಪರಿಸರದಲ್ಲಿ ಇಲ್ಲಿ ಬರುವ ಪಾತ್ರಗಳು ಗ್ರಾಮೀಣ ಬದುಕಿನ ಚಿತ್ರಣವನ್ನು ನೀಡುತ್ತವೆ. ತಿಪಟೂರು ತಾಲ್ಲೂಕ ಕಂಬನಕೆರೆ ಹೋಬಳಿ ರಾಮಸಂದ್ರ ಗ್ರಾಮದ ಶಾನಭೋಗ ರಾಮಣ್ಣ ಮತ್ತು ಆತನ ಹೆಂಡತಿ ಗಂಗಮ್ಮ ಇವರ ಮಕ್ಕಳಾದ ಚೆನ್ನಿಗರಾಯ, ಅಪ್ಪಣ್ಣಯ್ಯ ಈ ಪಾತ್ರಗಳ ಪ್ರಸ್ತಾಪದೊಂದಿಗೆ ಕಾದಂಬರಿ ಪ್ರಾರಂಭವಾಗುತ್ತದೆ. ರಾಮಣ್ಣನು ಮರಣ ಹೊಂದಿ ಆರು ವರ್ಷಗಳು ಗತಿಸಿವೆ, ರಾಮಣ್ಣನು ತೀರಿ ಹೋದ ನಂತರ ಈ ಕುಟುಂಬದ ಯಜಮಾನಿಕೆ ಗಂಗಮ್ಮನಿಗೆ ದೊರುಕುತ್ತದೆ. ಅವಳ ಯಜಮಾನಿಕೆಯಲ್ಲಿ ಈ ಕುಟುಂಬ ಅನುಭವಿಸುವ ನೋವು, ಸಂಕಟ. ತೊಂದರೆಗಳು ಪರಿಣಾಮಕಾರಿಯಾಗಿ ಚಿತ್ರಣಗೊಂಡಿವೆ.

ಗಂಗಮ್ಮ ತನ್ನ ಕುಟುಂಬವನ್ನು ಹೇಗೆ ನಿಭಾಯಿಸಿಕೊಂಡು ಹೋಗಬೇಕು ಎನ್ನುವ ಯಾವ ಚಿಂತನೆ ಇಲ್ಲದವಳು. ಅವಳ ಬಾಯಲ್ಲಿ ಬೈಗುಳುಗಳು ತುಂಬಾ ವೈವಿಧ್ಯಪೂರ್ಣವಾಗಿ, ಸಹಜವಾಗಿ ಒಂದರಮೇಲೊಂದು ಉರುಳಿ ಬರುತ್ತವೆ. ಇವಳ ಗುಣದ ಅಪ್ಪಟ ಪ್ರತಿರೂಪವನ್ನು ಮಕ್ಕಳಲ್ಲಿಯೂ ಕಾಣುತ್ತೇವೆ. ಯಾವುದೇ ಸೂಕ್ಷ್ಮತನ, ವಿಚಾರಮಾಡುವ ಗುಣ, ಸಂದರ್ಭವನ್ನು ಅರ್ಥಮಾಡಿಕೊಳ್ಳುವ ಒಳನೋಟ ಇವರಲ್ಲಿ ಕಾಣುವುದೇ ಇಲ್ಲ. ಒಂದರ್ಥದಲ್ಲಿ ಇವರ ಮೂರ್ಖತನ, ಒರುಟುತನ, ಹುಂಬತನ ಇಡೀ ಕುಟುಂಬ ಒಡೆದು ಹೋಗುವುದಕ್ಕೆ ಕಾರಣವಾಗುತ್ತದೆ. ನಂಜಮ್ಮನಂಥ ಸ್ನೇಹಮಯಿ, ತ್ಯಾಗಿ, ಮೃದುಹೃದಯಿ ಸೊಸೆಯಾಗಿ ಬಂದರೂ ಈ ಕುಟುಂಬವನ್ನು ಕಾಪಾಡುವುದು ಅವಳಿಂದ ಸಾಧ್ಯವಾಗುವುದಿಲ್ಲ. ಈ ಕುಟುಂಬದ ದುರವಸ್ಥೆಗೆ ಅವಳು ಬಲಿಯಾಗುವುದು ಅನಿವಾರ್ಯವಾಗುತ್ತದೆ. ಅವಮಾನ ಆತಂಕಗಳಲ್ಲಿಯೇ ದಿನ ಕಳೆದ ಅವಳೂ ಒಂದು ದಿನ ಮರಣವನ್ನೇ ಆಶ್ರಯಸುತ್ತಾಳೆ ಈ ಎಲ್ಲ ಕತೆ ನಡೆಯುವ ಸಂದರ್ಭದಲ್ಲಿ ಗ್ರಾಮ ಸಂಸ್ಕೃತಿ ಈ ಕಾದಂಬರಿಯಲ್ಲಿ ಸೊಗಸಾಗಿ ಮೂಡಿ ಬಂದಿದೆ.

ಕಥೆ ಒಂದು ಪ್ರದೇಶದಲ್ಲಿ ನಡೆಯುತ್ತಿದ್ದರೂ ಆ ಪ್ರದೇಶವನ್ನು ಮೀರಿ ನಿಲ್ಲುವ ವ್ಯಾಪಕತೆ ಈ ಕಾದಂಬರಿಯಾಗಿದೆ.

ತಂದೆ ತೀರಿದ ನಂತರ ಶ್ಯಾನುಭೋಗಿಕೆಯನ್ನು ಹಿರಿಮಗ ಚೆನ್ನಿಗರಾಯ ನಿಭಾಯಿಸಿ ಈ ಕುಟುಂಬದ ಬಾರ ಹೊತ್ತುಕೊಳ್ಳಲಿ ಎನ್ನುವುದು ಗಂಗಮ್ಮನ ಆಸೆ. ಆದರೆ ಅವನೋ ಸೋಮಾರಿ, ಅವಿವೇಕಿ, ತಾಯಿಯೆಂಬ ಗೌರವವೂ ಇಲ್ಲದೇ ಪುಂಖಾನುಪುಂಖವಾಗಿ ಬೈಗುಳಗಳನ್ನು ಉದುರಿಸುವಂಥವನು. ಈ ಕುಟುಂಬದ ಸ್ಥಿತಿಯನ್ನು ಅದಕ್ಕೆ ಹಿಡಿದಿರುವ ಗ್ರಹಣವನ್ನು ಕಾದಂಬರಿಕಾರರು ಮನಮುಟ್ಟುವಂತೆ ಚಿತ್ರಿಸಿದ್ದಾರೆ.

> ಅಪ್ಪಣ್ಣ ಮಠಕ್ಕೆ ಹೋಗ್ತಿಯೋ ಇಲ್ಲೋ?
> ಹೋಗ್ದೆ ಇದ್ರೆ ನಿಂಗೇನಾಗುತ್ತೆ ಕತ್ತೆಮುಂಡೆ?
> ನನ್ನ ಮುಂಡೆ ಅಂತಿಯೋನೋ? ನಿನ್ನ ವಂಶ ನಿರ್ವಂಶವಾಗುತ್ತೆ,
> ನೋಡ್ತಿರು ಸೂಳೆ ಮಗನೆ. (ಗೃಹಭಂಗ, ಪು -೧೧)

ಇದು ಅಪ್ಪಣ್ಣ ಮತ್ತು ಗಂಗಮ್ಮನ ಮಧ್ಯೆ ನಡೆಯುವ ಸಂಭಾಷಣೆ, ಈ ಮಾತುಗಳೇ ಇವರಿಬ್ಬರ ಸಂಸ್ಕೃತಿಯ ಮಟ್ಟವನ್ನು ತೋರುತ್ತದೆ. ಇವಳು ಆಡುವ ರೀತಿಯನ್ನು ನೋಡಿಯೇ ಜನ ಗಂಗಮ್ಮನನ್ನು 'ಹೆಣ್ಣು ಹುಲಿ' ಎಂದು ಗುರುತಿಸುತ್ತಿದ್ದರು.

''ರಾಮಸಂದ್ರ ಐನೂರು ಮನೆಯ ಗ್ರಾಮವೆಂದು ಗುರುತಿಸಿಕೊಂಡಿದ್ದರೂ ಶಾನುಭೋಗರ ಲೆಕ್ಕದಲ್ಲಿರುವುದು ನೂರ ನಲವತ್ತೇಳು ಒಕ್ಕಲು. ಊರಮಗ್ಗುಲಿನಲ್ಲಿರುವ ಕೆರೆ, ಕೆರೆಯ ಏರಿಯ ಮೇಲಿರುವ ಚೋಳೇಶ್ವರ ದೇವಸ್ಥಾನ, ಬ್ರಹ್ಮದೇವರ ಮಂಟಪ, ಹನುಮಂತರಾಯನ ಗುಡಿ, ಗ್ರಾಮದೇವತೆ ಕಾಳಮ್ಮನ ಗುಡಿ, ಬಣಜಿಗ, ನೊಣಬ, ಮಗ್ಗ ಗಾಣಿಗ, ಕುರುಬ ಮೊದಲಾದ ಜಾತಿಗಳಿಗೆ ಒಂದೊಂದು ಸಂದಿ, ಗೊಂದಿ ಮಾಂಸ ಮಡ್ಡಿ ತಿನ್ನುವ ಜಾತಿಯವರ ನಡುವೆ ಬ್ರಾಹ್ಮಣ, ಲಿಂಗಾಯತ, ಚಾತಾಳಿ ಮೊದಲಾದವರು ಇರುತ್ತಿದ್ದುದು ಅಪರೂಪ'' (ಗೃಹಭಂಗ, ಪು -೧೪) ರಾಮಸಂದ್ರ ಗ್ರಾಮದ ಒಟ್ಟು ಸ್ವರೂಪವನ್ನು ಈ ಮೇಲಿನ ಮಾತುಗಳು ತೋರುತ್ತವೆ.

ಗಂಗಮ್ಮನ ಸಂಸಾರದ ಹಿತಚಿಂತನೆಯನ್ನು ಮಾಡುವವರು ಸನ್ಯಾಸಿ ಮಾದೇವಯ್ಯನವರು ಆದರೆ ಅವರ ಎಲ್ಲ ಪ್ರಯತ್ನಗಳಿಗೂ ಈ ಕುಟುಂಬದ ದುರಂತವನ್ನು ತಡೆಯುವುದಕ್ಕೆ ಸಾಧ್ಯವಾಗುವುದಿಲ್ಲ.

ತಾಯಿಯ ತಲೆಯನ್ನೆ ಹಜಾಮರ ರುದ್ರನ್ನ ಕರ್‌ದು ಬೋಳಿಸ್ತೀನಿ ಎನ್ನುವ ಮಕ್ಕಳು. ಕತ್ತೆ ಮುಂಡೆ, ಬೋಳಿಮುಂಡೆ, ಸೂಳೆಮುಂಡೆ, ಹೊಲೆಮುಂಡೆ, ಹೊಲೇರ ಮುಂಡೆ ಎಂದು ಯಾವ ಎಗ್ಗಿಲ್ಲದೆ ಬೈಯ್ಯುವುದು ನೋಡಿದರೆ ಈ ಮಕ್ಕಳ ಮೂರ್ಖತನ ಗೊತ್ತಾಗುತ್ತದೆ. ಇವರ ಮೂರ್ಖತನವೇ ಕುಟುಂಬಕ್ಕಿದ್ದ ಆಸ್ತಿಯನ್ನು ಕಳೆದುಕೊಳ್ಳುವಂತೆ ಮಾಡುತ್ತದೆ.

ತಾಯಿಯ ಮೇಲಿನ ಸಿಟ್ಟನ್ನು ಪರಿಹರಿಕೊಳ್ಳಲು ತಮ್ಮ ಮನೆಯ ಹಂಚನ್ನು ಈ ಜಾಣ ಮಕ್ಕಳು ಒಡೆದು ಹಾಕುತ್ತಾರೆ. ಬೀಡಿ ಸೇದಲು ಹೋಗಿ ಕಬ್ಬಿನ ಗದ್ದೆಗೆ ಬೆಂಕಿ ಹಾಕುತ್ತಾರೆ. ಈ ಘಟನೆಯೇ ಈ

ಕುಟುಂಬಕ್ಕೆ ಅಳಿಸಲಾರದ ದುಃಖವನ್ನು ತೊಂದರೆಯನ್ನು ತರುತ್ತದೆ. ಅರಿಯದ ಈ ಮಕ್ಕಳು ಮಾಡಿದ ಅನಾಹುತದಿಂದ ಈ ಕುಟುಂಬ ಪಾರುಮಾಡಬೇಕೆಂದು ಮಾದೇವಯ್ಯನವರು ಪ್ರಯತ್ನಿಸುತ್ತಾರೆ. ಚೆನ್ನಿಗರಾಯ ಅಪ್ಪಣ್ಣನೇ ಬೆಂಕಿ ಹಚ್ಚಿದ ಎಂದು ಹೇಳಿದರೂ ಹೇಗೆ ನಂಬುವುದು ಎಂದು ಗ್ರಾಮದ ಹಿರಿಯ ಪಟೇಲ್ ಶಿವೇಗೌಡನಿಗೆ ಮಾದೇವಯ್ಯನವರು ಹೇಳಿದರೆ, ಮಾದೇವಯ್ಯನವರ ಮಾತಿನ ಅರ್ಥವನ್ನು ತಿಳಿಯಲಾರದ ಮೂರ್ಖ ಚೆನ್ನಿಗರಾಯ.

''ನಾನೇನ್ ಸುಳ್ ಹ್ಯೇಳ್ತಿಲ್ಲ ಕಣ್ರೀ ಅಯ್ನೋರೇ, ದೇವರಾಣೆ ಬೇಕಾದ್ರೂ ಇಡ್ತೀನಿ ಅವ್ನೆ ಇಲ್ಲಿ ತಂಕ ಓಡಿಬಂದು 'ಹಿಂಗಾಯ್ತು'ಪುರದಪ್ಪನ ಗದ್ದಿಗ್ ಬೆಂಕಿ ಹತ್ಕಂಡಿದೆ ನೀನು ಬಾ ಅಂತ ಕರ್ದ, ಬೆಂಕಿ ಹಾಕ್‌ದೋನು ನೀನು ನಾನ್ಯಾಕ್ ಬರ್ಲಿ ಹೋಗು ಅಂದೆ ಅವ್ನು ವಾಟಹ್ವಡ್‌ದ'' ಎಂಬ ಸತ್ಯವನ್ನು ಹೇಳುತ್ತಾನೆ. ಆದರೆ ಈ ಮಾತುಗಳು ಇವನ ದಡ್ಡತನವನ್ನು, ಮುಗ್ದತನವನ್ನು ಮೂರ್ಖತನವನ್ನು ಬಯಲು ಮಾಡುತ್ತವೆ. ಇದೇ ಮಾತುಗಳನ್ನು ಸಾಕ್ಷಿಯಾಗಿಟ್ಟುಕೊಂಡು ಗ್ರಾಮದ ಹಿರಿಯರು ಈ ಕುಟುಂಬಕ್ಕೆ ದಂಡವನ್ನು ಕಟ್ಟುವವರೆಗೆ ಈ ಪ್ರಕರಣ ಬೆಳೆಯುತ್ತದೆ. ಗ್ರಾಮದ ಹಿರಿಯರೆಲ್ಲ ಈ ಹುಡುಗ ಅರಿಯದೇ ಮಾಡಿದ ತಪ್ಪು ಎಂದು ಈ ಪ್ರಕರಣವನ್ನು ಮುಗಿಸುವುದಿಲ್ಲ. ಎಲ್ಲರೂ ತಮ್ಮ ತಮ್ಮ ಲಾಭ ನಷ್ಟಗಳನ್ನು ಲೆಖ್ಖ ಹಾಕುತ್ತಾರೆ. ಅಯ್ಯಾಶಾಸ್ತ್ರಿಯಂಥವನು ಯಾವ ಗದ್ದೆ ತನಗಿಲ್ಲದಿದ್ದರೂ ಬೇರೆಯವರ ಗದ್ದೆ ಸುಟ್ಟದ್ದರಿಂದ ತನಗೆ ಗಣಪತಿ ಪೂಜೆಗೆ ಅಂತು ಕಬ್ಬು ಅರೆಯವಾಗ ಬರುವ ಬೆಲ್ಲದ ಉಂಡೆಗಳ ಮೇಲೆ ಲೆಖ್ಖಹಾಕಿ ತನಗೆ ಬರುವ ಹಣ ತಪ್ಪಿ ಹೋಯಿತೆಂದು ಪರಿತಪಿಸುವುದು ವಿಚಿತ್ರವಾಗಿದೆ. ಎಲ್ಲರೂ ಗಂಗಮ್ಮನಿಂದ ದಂಡಕಕ್ಕಿಸಿಬೇಕೆಂದು ನಿರ್ಧಾರ ಮಡಿಯೇ ಕೂತಂತೆ ನ್ಯಾಯ ತೀರ್ಮಾನವಾಗುತ್ತದೆ. ಪಟೇಲ ಶಿವೇಗೌಡರು ತಾವಾಗಿಯೇ ದಂಡ ಕಟ್ಟಲು ಹಣಕೊಡುವುದಾಗಿ ಹೇಳುತ್ತಾರೆ. ಆದರೆ ಜಮೀನನ್ನು ಆಧಾರವಾಗಿ ಇಡಬೇಕೆಂಬ ಮಾತಿನಲ್ಲಿ ಜಮೀನನ್ನು ಕಬಳಿಸುವ ಸಂಚು ಎದ್ದು ಕಾಣುತ್ತದೆ ಇದನ್ನು ತಪ್ಪಿಸಲು ಮಾದೇವಯ್ಯನವರು ಒಡವೆ ವಸ್ತ್ರ ಆಧಾರವಾಗಿ ಪಡೆಯಬಹುದು ಎಂಬ ಮಾತಿಗೆ ಶಾನುಭೋಗಿಕೆ ನೋಡುತ್ತಿರುವ ಶಿವಲಿಂಗೇಗೌಡ ''ಮದುವೇಲಿ ಕೊಟ್ಟ ಚಿನ್ನಾನ ಮಾರಾಕೆ ಗಂಡ ಸತ್ತಮ್ಯಾಲೆ ಹೆಂಗಸಿಗೆ ಕಾನೂನೇ ಇಲ್ಲ ಜಮೀನು ಆಧಾರ ಮಾಡ್‌ಬಹುದು'' ಎಂದು ಅವಳ ಜಮೀನು ಆಧಾರಮಾಡುವಂತೆ ಒತ್ತಾಯಿಸುತ್ತಾನೆ.

ಈ ಘಟನೆಯಿಂದ ಈ ಕುಟುಂಬದ ಕಷ್ಟದ ಸಂಗತಿಗಳು ಹೆಚ್ಚುತ್ತ ಸಾಗುತ್ತವೆ. ನಾಗಲಾಪುರದ ಕಂಠೀ ಜೋಯಿಸರ ಮಗಳು ನಂಜಮ್ಮ ಗಂಗಮ್ಮನಿಗೆ ಸೊಸೆಯಾಗಿ ಚೆನ್ನಿಗರಾಯನಿಗೆ ಹೆಂಡತಿಯಾಗಿ ಬರುತ್ತಾಳೆ. ಚೆನ್ನಿಗರಾಯ ಹಾಗೂ ಹೀಗೂ ಶ್ಯಾನಭೋಗಿಕೆ ಮಾಡುವುದಕ್ಕೆ ಹೊನ್ನವಳ್ಳಿಯ ಶೀತಾರಾಮಯ್ಯನವರಲ್ಲಿ ಲೆಕ್ಕ ಕಲಿತುಕೊಂಡು ಬಂದಿರುತ್ತಾರೆ. ಆದರೆ ಶಿವಲಿಂಗಯ್ಯ ಮಾತ್ರ ಇವನಿಗೆ ಶಾನುಭೋಗಿಕೆ ಬಿಟ್ಟುಕೊಡುವುದಿಲ್ಲ. ಮಾವ ಕಂಠಿಜೋಹಿಸರ ಸಹಾಯದಿಂದ ಅಂತೂ ಶಾನುಭೋಗಿಕೆ ದೊರೆಯುತ್ತದೆ. ಆದರೆ ಚೆನ್ನಿಗರಾಯ ಪುಕ್ಕಲು ಆಸಾಮಿ. ಮಾವ ವೀರಾಚಾರಿ ಮಾಡ್ಸಿದ ಮಾಟದ ಗೊಂಬೆಯನ್ನೆ ಒದ್ದು ಬೆಳ್ಳಿ, ಬಂಗಾರದ, ನಾಣ್ಯವನ್ನು ತೆಗೆದುಕೊಳ್ಳುವ ಗಟ್ಟಿಗ. ಆದರೆ ಅದೇ ಅಳಿಯ ಚೆನ್ನಿಗರಾಯ ಅದೇ ದೃಶ್ಯ ನೋಡಿ ಜ್ವರದಿಂದ ಬಳಲುತ್ತಾನೆ.

ನುಗ್ಗಿಕೆರಿ ಗ್ರಾಮದ ಶ್ಯಾಮಭಟ್ಟರೆಂಬ ಪುರೋಹಿತರ ಮಗಳು ಸಾತಮ್ಮ ಅಪ್ಪಣ್ಣನ ಹೆಂಡತಿಯಾಗಿ ಬರುತ್ತಾಳೆ. ಚೆನ್ನಿಗರಾಯ ಅಪ್ಪಣ್ಣ ಇಬ್ಬರೂ ಹೆಂಡತಿಯನ್ನು ಆಳಬೇಕು ಎನ್ನುವ ಮನೋಭಾವದವರೆ. ಹೆಣ್ಣು ಎಂದರೆ ಆಳಿಸಿಕೊಳ್ಳುವುದಕ್ಕೆ ಹುಟ್ಟಿದ ಜೀವ ಎಂಬ ನಂಬಿಕೆ ಅವರದು. ಆಳುವುದಕ್ಕೆ ಬಳಸುವ ಬೈಗಳುಗಳನ್ನು ಅಮ್ಮನಿಂದಲೇ ಕಲಿತದ್ದು ಒಂದು ವಿಪರ್ಯಾಸ.

'' ಲೇ ಮುಂಡೆ, ಜಮಾಬಂದಿ ಮಾಡ್ಕಂಡ್ ಬಂದು, ನಂಗೆ ಮೈ ಕೈಯಲ್ಲಾ ನೋಯುತ್ತೆ, ಹರಳೆಣ್ಣೆ ತಗಂಡ್ ಬಂದು ನನ್‌ನೆತ್ತಿಗೆ ಹಾಕಿ ಮೈಕೈ ನೀವು ಬಾ'' ( ಗೃಹಭಂಗ, ಪು-೪೫) ಎಂದು ಕರೆಯುವ ಚೆನ್ನಿಗರಾಯ.

'ಲೇ ಮುಂಡೇ, ನಂಗ್ ಎಣ್ಣೆ ತಿಕ್ಕ ಬಾ ಇಲ್ಲಿ '
ಅದೇನ್ ಹಾಗ್ ನೋಡ್ತಿಯೇ ಕತ್ತೆ ಮುಂಡೆ, ಹೇಳಿದ್ ಕೇಳ್ಳಿಲ್ವೇನೆ ?
ಎನ್ನುವ ಅಪ್ಪಣ್ಣ (ಗೃಹಭಂಗ, ಪು - ೪೨)

'ಗಂಡ ಹೆಂಡ್ತೀನ ಇನ್ನೇನನ್ ಬೇಕೆ ಚೆನ್ನಾಲಿ ಲೌಡಿ ?' ಎಂದು ಮಕ್ಕಳನ್ನು ಸಮರ್ಥಿಸುವ ಗಂಗಮ್ಮನನ್ನು ನೋಡಿ ಇಬ್ಬರೂ ಸೊಸೆಯಂದಿರೆ ದಿಕ್ಕೆತೋಚದಂತಾಗುತ್ತದೆ. ಆದರೆ ಸಾತು 'ಉತ್ತಮ ವಂಶದಲ್ಲಿ ಹುಟ್ಟಿದ್ರೆ ತಾನೇ ಇವರ ಬಾಯಲ್ಲಿ ಒಳ್ಳೆ, ಮಾತು ಬರೋದು ' ಎಂದು ತನ್ನ ಅಸಮಾಧಾನ ವ್ಯಕ್ತಪಡಿಸುತ್ತಾಳೆ. ಈ ಮನೆಯ ನಡುವಳಿಕೆಯೇ ಹೀಗಿದೆ, ಇಲ್ಲಿಗೆ ಬಂದ ಎರಡು ವರ್ಷದಿಂದ ನನಗೆ ಅಭ್ಯಾಸವಾಗಿದೆ ಎಂದು ನಂಜಮ್ಮ ಸಾತುವನ್ನು ಸಂತೈಸುತ್ತಾಳೆ.

ಉತ್ತಮ ವಿಚಾರಗಳ, ನಡುವಳಿಕೆಗಳ ಇಬ್ಬರೂ ಸೊಸೆಯಂದಿರ ಪ್ರಯೋಜನವನ್ನು ಪಡೆದುಕೊಳ್ಳದಷ್ಟು ಮೂರ್ಖತನ ಗಂಗಮ್ಮ ಮತ್ತು ಅವಳ ಮಕ್ಕಳದು.

ಚೆನ್ನಾಗಿ ಶಾನಭೋಗಿಕೆಯನ್ನು ಮಾಡಲು ಕಲಿಯದ ಚೆನ್ನಿಗರಾಯ ತಿಮ್ಲಾಪುರದ ದ್ಯಾವರಸಯ್ಯನವರಿಂದ ಐವತ್ತು ರುಪಾಯಿ ಕೊಟ್ಟು ಲೆಕ್ಕ ಬರೆಯಿಸಬೇಕಾಗುತ್ತದೆ. ಆದರೆ ತಮ್ಮ ಫಿರ್ಕಾದ ಲೆಕ್ಕಪತ್ರ ಬರೆಯುವುದರೊಂದಿಗೆ ಇದನ್ನು ನಿಭಾಯಿಸುವುದು ಕಷ್ಟವಾಗುತ್ತದೆ. ಅದಕ್ಕೆ ನಂಜಮ್ಮನಿಗೆ ಬರೆಯುವುದನ್ನು ಕಲಿತುಕೊಳ್ಳಲು ಹೇಳುತ್ತಾರೆ. ಅವಳ ಸ್ವಭಾವ ಜಾಣತನ ಮೆಚ್ಚಿ ರೂಲು ಹಾಕಲು ಕಲಿಸುತ್ತಾರೆ. ಲೆಕ್ಕವನ್ನು ಹೇಳಿಕೊಡುತ್ತಾರೆ. ಆದರೆ ಹೆಂಗಸರು ಸರ್ಕಾರಿ ಲೆಕ್ಕ ಬರೀಭೌದೆ ? ಎನ್ನುವ ಪ್ರಶ್ನೆ ನಂಜಮ್ಮನಿಗೆ ಕಾಡುತ್ತದೆ. 'ಹೆಂಗಸರು ಸರ್ಕಾರಿ ಲೆಕ್ಕವನ್ನು ಕೈಲಿ ಮುಟ್ಟಿದ್ದು ಗೊತ್ತಾದರೂ ಪೋಲಿಸರಿಗೆ ಹಾಕ್ತಾರಂತೆ' (ಗೃಹಭಂಗ, ಪು - ೨೨) ಎನ್ನುವ ಭಾವನೆ ಗಂಗಮ್ಮನದು ಶಾನುಭೋಗಿಕೆ, ಸರ್ಕಾರಿ ಕೆಲಸ ಎಲ್ಲ ಗಂಡಸರೇ ಮಾಡಬೇಕೆನ್ನುವ ನಂಬಿಗೆ. ಹೆಂಗಸು ಮಾಡಿದರೆ ಅದರ ಪಾವಿತ್ರ್ಯ ಹಾಳಾಗುತ್ತದೆ ಎನ್ನುವ ವಿಚಾರ ಅಂದಿನ ಸಮಾಜದಲ್ಲಿ ಇದ್ದಂತೆ ತೋರುತ್ತದೆ. ಸಂಸಾರದ ತಾಪತ್ರಯ ನೀಗಿಸುವುದಕ್ಕೆ ದ್ಯಾವರಸಯ್ಯನವರರ ಸಲಹೆ ಪ್ರಕಾರ ಲೆಕ್ಕ ಬರೆಯುವದಕ್ಕೆ ಮುಂದಾದರೂ ನಂಜಮ್ಮನಿಗೆ ತೀವ್ರತರವಾದ ಅಡ್ಡಿ, ಪ್ರತಿಭಟನೆ ಉಂಟಾಗುತ್ತದೆ. ಈ ಪ್ರತಿಭಟನೆ ಮಾಡುವವರು ಬೇರೆ ಯಾರೂ ಅಲ್ಲ

ಅತ್ತೆ ಗಂಗಮ್ಮನೇ. ಸ್ವತಃ ಅಪ್ಪಣ್ಣನ್ನನ್ನೆ ನಂಜಮ್ಮನ ವಿರುದ್ಧ ಎತ್ತಿ ಕಟ್ಟುವ ಗಂಗಮ್ಮ. ''ನೋಡೋ ಅಪ್ಪಣ್ಣಯ್ಯ ನಾನು ದೇವರಾಣೆ ಇಡಬೇಕೆ ? ಸುಳ್ಳು ಹೇಳುಕ್ಕೆ ನಾನೇನು ಹಿಟ್ಟು ತಿಂದಿದೀನೋ ಹೇಲ್ ತಿಂದಿದೀನೋ? ನಿಮ್ಮಮ್ಮನ್ನ ಸುಳ್ಳುಮುಂಡೆ ಅಂದ್ಲಲ್ಲಾ ಇವ್ಳು ಆದೇನು ಮಕಾ ನೋಡ್ತಿಯಾ ಎತ್ತಿ ಒಂದು ಸಲ ಒದಿಯೋ ಈ ಲೌಡಿಗೆ ?'' (ಗೃಹಭಂಗ, ಪು-೮೦) ಎಂದು ಹೇಳುವದಷ್ಟೇ ತಡ ಅಪ್ಪಣ್ಣಯ್ಯ ಬಲಗಾಲನ್ನೆತ್ತಿ ಅತ್ತಿಗೆ ನಂಜಮ್ಮನ ಬೆನ್ನಿಗೆ ಒದೆಯುತ್ತಾನೆ. ಅವನಿಗೆ ಅತ್ತಿಗೆ ತಾಯಿ ಸಮಾನ ಎಂಬ ಯಾವ ವಿಚಾರವಾಗಲಿ, ಸಂಸ್ಕಾರವಾಗಲಿ ಇಲ್ಲ. ತಾಯಿಯ ಮಾತು ವೇದವಾಕ್ಯ ಅಷ್ಟೇ. ಗ್ರಾಮೀಣ ಪರಿಸರದಲ್ಲಿ ಇದೇ ಕಾರಣಕ್ಕೆ ಎಷ್ಟೋ ಸಂಸಾರಗಳು ಹಾಳಾಗುತ್ತವೆ. ಗಂಗಮ್ಮನ ಸ್ವಭಾವ ಅರಿತ ಸಾತು ಅಪ್ಪಣ್ಣ ಬೇರೆ ಮನೆ ಮಾಡ್ರಿದೇನೆ ಗಂಡನ ಮನೆಗೆ ಬರುತ್ತೇನೆಂದು ಹಟ ಹಿಡಿಯುತ್ತಾಳೆ.

ಪಟೇಲ್ ಶಿವೇಲಿಂಗೇಗೌಡರ ಮೇಲೆ ಗಂಗಮ್ಮನನ್ನು ರೇವಣ್ಣಶೆಟ್ಟಿ ಎತ್ತಿಕಟ್ಟಿ ಕೋರ್ಟಿನ ಕಟ್ಟೆ ಹತ್ತುವಂತೆ ಮಾಡಿದ್ದು ಈ ಕುಟುಂಬಕ್ಕೆ ಮತ್ತಷ್ಟು ಕಷ್ಟವನ್ನು ಹೆಚ್ಚಿಸುತ್ತದೆ. ಗಂಗಮ್ಮ ದುರಹಂಕಾರಿ, ಅವಳಿಗೆ ಮುನ್ನೋಟವೂ ಇಲ್ಲ. ಹಿನ್ನೋಟವೂ ಇಲ್ಲ, ಕೋರ್ಟಿಗೆ ಹೊದರೆ ತೊಂದರೆಗಳೇನು ಎಂಬುದು ನಂಜಮ್ಮನಿಗೆ ಗೊತ್ತು ಅದಕ್ಕೆ ಅಣ್ಣ ಕಲ್ಲೇಶಿಯನ್ನು ಕರೆಯಿಸಿಕೊಂಡು ಮುಂದಾಗುವ ಅನಾಹುತ ತಡೆಯಲು ಪ್ರಯತ್ನಿಸುತ್ತಾಳೆ.

ಬಣಜಿಗ ರೇವಣ್ಣನ ಹುನ್ನಾರ ಅರಿಯದೇ ನೊಣಬ ಪಟೇಲ ಶಿವೇಗೌಡನ ರೋಷಕ್ಕೆ ಇಡಿ ಕುಟುಂಬವೇ ಹಾಳಾಗುವಂಥ ಅವಿವೇಕವನ್ನು ಗಂಗಮ್ಮ ಮಾಡುತ್ತಾಳೆ. ಅವಳು ಮಾತನಾಡುವ ಮಾತುಗಳು ಎಂಥವರಿಗಾದರೂ ರೋಷ ತರಿಸುತ್ತದೆ. ಆಸ್ತಿಯನ್ನು ಉಳಿಸಿಕೊಳ್ಳಲು ಅಣ್ಣ ಕಲ್ಲೇಶಿಯನ್ನು ಶಾಮಭಟ್ಟರನ್ನು ಕರೆಸಿಕೊಂಡರೆ ನಂಜಮ್ಮನಿಗೆ ಅತ್ತೆಯಿಂದ ದೊರುಕುವ ಮಾತುಗಳು ತುಂಬಾ ಕಠೋರವಾಗಿಯೂ, ಅಸಹ್ಯವಾಗಿಯೂ ಇವೆ.

'' ಏನೆ ಹಾದರಗಿತ್ತಿ ಮುಂಡೆ, ಆಗ ನಿಮ್ಮಣ್ಣನಿಗೆ ಹೇಳಿಕಳ್ಸಿ ಅವನುನ್ನ ಜೊತೇಲಿ ಮಲಗಿಸ್ಕಂಡಿದ್ದೆ. ಈಗ ಈ ಮುದಕ ಜೋಯ್ಸನಿಗೆ ಹೇಳಿ ಕರಿಸ್ಕಂಡಿದೀಯಾ. ಇವತ್ತು ರಾತ್ರಿ ಇವನ ಜೊತೆ ವಾಲಾಡ ಬೇಕೇನೆ?'' (ಗೃಹಭಂಗ, ಪು-೧೦೭) ಎಂಬ ಮಾತುಗಳನ್ನು ಕೇಳಿಸಿಕೊಂಡೂ ಈ ಮನೆಯಲ್ಲಿ ಬದುಕು ಸಾಗಿಸುವ ನಂಜಮ್ಮ ತಾಳ್ಮೆಯ ಸಾಕಾರ ರೂಪವಾಗಿದ್ದಾಳೆ.

ರಾಮಸಂದ್ರ ಊರಿಗೆ ಪ್ಲೇಗು ಬಂದು. ಕ್ಷಾಮಕ್ಕೂ ಗುರಿಯಾಗಿ ನಾಶವಾಗುತ್ತದೆ. ಆದರೂ ನಂಜಮ್ಮ ಬದುಕಿನೊಂದಿಗೆ ಹೋರಾಡುತ್ತಾಳೆ. ಕ್ರೂರಿ ಅತ್ತೆ, ಸೋಮಾರಿ ಗಂಡ, ಪ್ರಕೃತಿಯ ರೋಷ, ಎಲ್ಲವನ್ನು ಎದುರಿಸಿ ಬಾಳುವ ಅವಳ ಛಲ ಮೆಚ್ಚುವಂಥಹದು.

ಗ್ರಾಮೀಣ ಪರಿಸರ ಹಲವು ಮೌಢ್ಯಗಳಿಂದ ತುಂಬಿ ಹೋಗಿರುವುದನ್ನು ಈ ಕಾದಂಬರಿ ಚಿತ್ರಿಸುತ್ತದೆ. ವೀರಾಚಾರಿ ಮಾಡುವ ಮಾಟ ಮಂತ್ರ, ಪ್ಲೇಗು ಬಂದಾಗ ರೋಗಿಗೆ ಔಷಧಿ ಕುಡಿಸಲೂ ಹಿಂದು ಮುಂದೆ ನೋಡುವುದು, ಹಾವು ಹನ್ನೆರಡು ವರ್ಷ ಸೇಡು ಕಾಯುತ್ತೆ ಎಂಬ ಅವೈಜ್ಞಾನಿಕ ವಿಚಾರ ಹೀಗೆ ಹತ್ತಾರು ಇಂಥ ಸಂಗತಿಗಳು ಕಾದಂಬರಿಯಲ್ಲಿ ಮೂಡಿ ಬಂದಿವೆ.

ಪ್ಲೇಗ ಎಂದರೆ ಮಾರಿ, ಕಜ್ಜಿ ಎಂದರೆ ನಾಗರಕಾಟ, ಋಷಿ ಪಂಚಮಿ ವಿಧವೆಯರಿಗೆ ಒಳಿತು

ಮಾಡುತ್ತದೆ. ಕಷ್ಟಗಳು ಬಂದಾಗ ಹರಕೆ ಹೊತ್ತುಕೊಳ್ಳಬೇಕು ಎಂಬ ನಂಬಿಕೆಗಳು ಇಲ್ಲಿ ಕಂಡು ಬರುತ್ತವೆ.

ರಾವಬಹದ್ದೂರರ ಗ್ರಾಮಾಯಣ, ಕುವೆಂಪುರವರ ಕಾನೂರ ಹೆಗ್ಗಡತಿ, ತೇಜಸ್ವಿಯವರ ಕರ್ವಾಲೋ ಮುಂತಾದ ಕಾದಂಬರಿಗಳಲ್ಲಿ ಗ್ರಾಮ ಸಮಾಜದ ವಿಚಾರಗಳು ವಿವರವಾಗಿ ಬಿಟ್ಟಿಕೊಳ್ಳುತ್ತವೆ. ಅದರಂತೆ ಗೃಹಭಂಗವೂ ಗ್ರಾಮ ಪರಿಸರದ ಬದುಕಿನ ವಾಸ್ತವ ಚಿತ್ರಣವನ್ನು ಕಟ್ಟಿಕೊಡುತ್ತದೆ.

ಪ್ಲೇಗ್ ಬಂದಾಗ ಇಡೀ ಗ್ರಾಮವೇ ಅಸ್ತಿತ್ವಕ್ಕಾಗಿ ಗುಡಿಸಲುಗಳನ್ನು ಕಟ್ಟಿಕೊಂಡು ಜೀವನಮಾಡುವುದು. ನಿರಂತರವಾದ ತಾಳ್ಮೆ ಇಲ್ಲದ ರೋಷ ಉಕ್ಕಿಸುವ ಪಾತ್ರಗಳು, ಮೋಸವನ್ನು ಸಹಜವೆನ್ನುವಂತೆ ಆಚರಿಸುವ ಗ್ರಾಮದ ಪ್ರತಿಷ್ಠಿತ ವ್ಯಕ್ತಿಗಳು ಸ್ವಭಾವ ಉತ್ತಮವಾಗಿ ಮೂಡಿದೆ.

ಗ್ರಾಮದಲ್ಲಿ ಜಾತಿ ವ್ಯವಸ್ಥೆ ಬಲವಾಗಿಯೇ ಇದ್ದದನ್ನು ಕಾದಂಬರಿ ಗುರುತಿಸಿದೆ ನಂಜಮ್ಮ ಸರ್ಕಾರೀ ಬಾವಿಯಲ್ಲಿ ನೀರು ಸೇದಲು ಹೋದಾಗ ಕೊಡ ನೀರಿಗೆ ಬೀಳುತ್ತದೆ ಅವಳ ಅಣ್ಣ ಕಲ್ಲೇಶ ಕೊಡ ತೆಗೆದುಕೊಡುವ ಸಂದರ್ಭದಲ್ಲಿ ಆ ಬಾವಿಯ ನೀರನ್ನು ಉಪಯೋಗಿಸುವ ಜನಗಳ ವಿವರ ಬರುತ್ತದೆ.

'' ಎಡಗೈ ಬಲಗೈಯವರು ವಿನಾ ಉಳಿದ ಎಲ್ಲ ಮತಸ್ಥರೂ ಅಲ್ಲಿಯೇ ಕುಡಿಯುವ ಮತ್ತು ಅಡಿಗೆಯ ನೀರು ತರುತ್ತಿದ್ದರು. ಬ್ರಾಹ್ಮಣ, ಲಿಂಗಾಯತ, ಅಕ್ಕಸಾಲಿ, ಚಾತಾಳಿ ಮೊದಲಾದ ಮೇಲುಜಾತಿಯ ಹೆಂಗಸರು ಮಾತ್ರ ಸೇದಲು ತಮ್ಮ ಹಗ್ಗ ಬಿಡುವ ಮೊದಲು ಮನೆಯಲ್ಲಿ ತಂದ ನೀರಿನಲ್ಲಿ ಒಂದು ಶಾರೆಯನ್ನು ರಾಟೆಗೆ ಎರಚಿ ಮಡಿಮಾಡಿಕೊಳ್ಳುತ್ತಿದ್ದರು.'' (ಗೃಹಭಂಗ, ಪು-೧೫೬)

ಬ್ರಾಹ್ಮಣ ಸ್ತ್ರೀಯರು ಮುಟ್ಟಾದಾಗ ಅಡಿಗೆ ಮಾಡದೇ ಇರುವುದು ಈಗಲೂ ನಡೆದುಕೊಂಡು ಬರುತ್ತಿದೆ. ಅಂದೂ ಕೂಡಾ ಈ ಪದ್ಧತಿ ಇದ್ದುದನ್ನು ಗುರುತಿಸಬಹುದು.

''ಗ್ರಾಮದ ಪುರೋಹಿತರಾದ ಅಯ್ಯಾಶಾಸ್ತ್ರಿಗಳ, ಅಣ್ಣಾಜೋಯಿಸರ ಹೆಂಡತಿಯರಾದರೆ ಆಚಾರ ವ್ಯವಹಾರ ಮಡಿ ಮೈಲಿಗೆ ಇಟ್ಟುಕೊಂಡಿರುವ ಹೆಂಗಸರು. ಅಣ್ಣಾಜೋಯಿಸರ ಹೆಂಡತಿ ಮುಟ್ಟಾದಾಗ ಗಂಡನ ಕಣ್ಣಿಗೆ ಸಹ ಬೀಳುವುದಿಲ್ಲ. ಮುಟ್ಟಾದಾಗಲೂ ನಂಜಮ್ಮ ಕದ್ದು ಅಡಿಗೆ ಮಾಡುತ್ತಾಳೆ. ನಮ್ಮ ಪಾರ್ವತಿ ಮಾಡ್ತು ಅಂತ ಸುಳ್ಳ ಸುಳ್ಳೆ ಹೇಳ್ತಾಳೆ ಕಣ್ರಿ ಎಂದು ಅಣ್ಣಾ ಜೋಯಿಸರ ಹೆಂಡತಿ ವೆಂಕಟಲಕ್ಷ್ಮಿ (ಗೃಹಭಂಗ. ಪು-೧೭೨)ಹೇಳಿದಾಗ ಇನ್ನೊಂದು ದಿನ ಅವಳ ಮನೆಗೆ ಹೋಗಬಾರದೆಂದು ತಂಗಮ್ಮ ನಿಶ್ಚಯಿಸಿಕೊಂಡುಳು ; ಇತರ ಜಾತಿ ಹೆಂಗಸರು ಮುಟ್ಟಾದ ದನಿವೇ ನೀರು ಹಾಕ್ಕುಂಡು ಒಳಗೆ ಹೋಗಿ ಅಡಿಗೆ ಮಾಡ್ತಾರೆ ಬ್ರಾಹ್ಮಣರಾಗಿ ಹುಟ್ಟಿ ಹೀಗೆ ಮಾಡೂದು ಅಂದ್ರೆ.'' (ಗೃಹಭಂಗ, ಪು-೧೭೨)

ಅಪ್ಪಣ್ಣಯ್ಯ ಶಾನುಭೋಗಿಕೆಗೆ ಪಾಲು ಕೇಳಿ ಪಂಚಾಯತಿ ಕೂಡಿಸಿದಾಗ 'ಶಾನುಭೋಗಿಕೆ ಯಾವಾಗ್ಲೂ ಹಿರೀಮಗಂದು' ಎಂದು ತಿಳಿಸುವುದನ್ನು ನೋಡಿದರೆ ಶಾನುಭೋಗಿಕೆ ವಂಶಪಾರಂಪರ್ಯವಾಗಿ ಬರುತ್ತಿತ್ತು ಮತ್ತು ಅದು ಕುಟುಂಬದ ಹಿರಿಮಗನಿಗೆ ದಕ್ಕುತ್ತಿತ್ತು ಎಂಬ ವಿಷಯ ತಿಳಿದು ಬರುತ್ತದೆ.

ಅಪ್ಪಣ್ಣಯ್ಯ ಚೆನ್ನಿಗರಾಯನಂತೆ ಸೋಮಾರಿಯಾಗಿದ್ದರೂ ಅವನ ಅವಿವೇಕತನಕ್ಕೇನೂ ಕೊರತೆ ಇಲ್ಲ. ತಾನೇ ಕಟ್ಟಿದ ಮನೆಯನ್ನು ತಾನೆ ಬೆಂಕಿ ಹೊತ್ತಿಸಿಸುಡುವುದು, ಹೆಂಡತಿಯ ತಾಳಿಯನ್ನು ಕಿತ್ತುಕೊಂಡು ಊರಿನ ಬೀದಿ ಓಣಿಗಳಲ್ಲಿ ಸುತ್ತುವುದು ನೋಡಿದಾಗ ಇಂಥ ಮಕ್ಕಳು ಹುಟ್ಟಿದ ಮನೆ ಎಂದು ಸುಖವಾಗಿರಲು ಸಾಧ್ಯವಿಲ್ಲ ಎನಿಸುತ್ತದೆ. ನಂಜಮ್ಮ ಮತ್ತು ಸಾತು ಇಂಥವರಿಗೆ ಹೆಂಡತಿಯಾಗಿ ಬಂದು

ಅನುಭವಿಸಬಾರದ ಎಲ್ಲ ನೋವುಗಳನ್ನು ಅನುಭವಿಸುತ್ತಾರೆ.

ಅಪ್ಪಣ್ಣಯ್ಯ ಮನೆ ಸುಟ್ಟನಂತರ ನಿರ್ಗತಿಕರಾದ ಸಾತುವನ್ನು, ತಂಗಮ್ಮಳನ್ನು ನಂಜಮ್ಮ ತನ್ನ ಮನೆಗೆ ಕರೆದುಕೊಂಡು ಬರುತ್ತಾಳೆ. ಗಂಗಮ್ಮ ಈ ಸಂದರ್ಭದಲ್ಲಿಯೂ ಪ್ರೇತದಂತೆ ಬೆನ್ನು ಹತ್ತುತ್ತಾಳೆ. ಬ್ರಾಹ್ಮಣರನ್ನು ಸೇರಿಸಿಕೊಂಡು ನಂಜಮ್ಮ ಮಾಂಗಲ್ಯಹೋದ ಸಾತುವನ್ನು ಮನೆಗೆ ಸೇರಿಸಿಕೊಂಡಿದ್ದಾಳೆ ಅಂಥವಳಿಗೆ ದಂಡ ಕಡಕಟ್ಟಬೇಕು ಎನ್ನುವ ಉದ್ದೇಶ ಅವಳದು ಅಣ್ಣಾಜೋಯಿಸರನ್ನು ಈ ಸದಂರ್ಭದಲ್ಲಿ ಧರ್ಮಪಾಲನೆ ಮಾಡಲು ಕೇಳಿಕೊಳ್ಳುತ್ತಾಳೆ.

'ಮಾಂಗಲ್ಯ ಹೋದ ಹೆಂಗಸು ವಿಧವೆಗೆ ಸಮಾನ ಆದರೆ ಗಂಡ ಇದ್ದೂ ವಿಧವೆಯಾಗುವದು ಹೇಗೆ ? ಆದ್ದರಿಂದ ಅವಳು ಇದ್ದೂ ಸತ್ತ ಸಮಾನ ಅಂಥೋಳ ಮುಖದರ್ಶನ ಸಹ ಮಾಡಬಾರ್ದು ಅಂಥೋಳನ್ನು ಮನೆಗೆ ಸೇರಿಸಿ ನೀವು ತಪ್ಪು ಮಾಡಿದೀರಿ ಪ್ರಾಯಶ್ಚಿತವಾಗಬೇಕು ದಂಡಕೊಡಬೇಕು' (ಗೃಹಭಂಗ, ಪು -೧೮೨) ಎನ್ನುವ ಅಯ್ಯಾಶಾಸ್ತ್ರಿಗಳ ಮಾತು ಮತ್ತು ಶೃಂಗೇರಿ ಸಂಸ್ಥಾನದ ಸರ್ವಾಧಿಕಾರಿಗಳ ರುಜುನಲ್ಲಿ ಬಂದಿದ್ದ ಪತ್ರದಲ್ಲಿರುವ ವಿಷಯ 'ಗಂಡನೇ ಬೇಡವೆಂದು ಮಾಂಗಲ್ಯ ಹರಿದು ಎಸೆದು ಹೋದ ಆ ಹೆಂಗಸನ್ನು ಮನೆಗೆ ಸೇರಿಸಿಕೊಂಡ ಶ್ಯಾನುಭೋಗ ಚೆನ್ನಿಗರಾಯ ಸಂಸಾರವನ್ನು ಬಹಿಷ್ಕರಿಸಲಾಗಿದೆ. ಶ್ರೀಮಠಕ್ಕೆ ಒಂದುನೂರು ಒಂದು ರೂಪಾಯಿ ತಪ್ಪುದಂಡ ಕೊಟ್ಟು ದರ್ಭೆಯಲ್ಲಿ ನಾಲಿಗೆ ಸುಡಿಸಿಕೊಂಡು ಸ್ಥಳ ಪುರೋಹಿತರಿಂದ ಪ್ರಾಯಶ್ಚಿತ ಮಾಡಿಕೊಳ್ಳುವ ತನಕ ಆ ಸಂಸಾರದ ಜೊತೆಗೆ ಯಾರೂ ಬೆಂಕಿ ನೀರಿನ ಸಂಬಂಧ ಮಾಡಕೂಡದು ಹಾಗೆ ಯಾರದರೂ ಮಾಡಿದ್ದೇ ಆದರೆ ಅವರನ್ನು ಬಹಿಷ್ಕರಿಸಿ ಶ್ರೀಮಠಕ್ಕೆ ನಿವೇದಿಸತಕ್ಕದ್ದು' (ಗೃಗಭಂಗ, ಪು -೧೮೫) ನಂಜಮ್ಮ ತನ್ನವರಿಗಾದ ಕಷ್ಟ ಪರಿಹರಿಸಲಿಕ್ಕೆ ಹೋಗಿ ಗುರುಮನೆಯ ಕೋಪವನ್ನು ಅನುಭವಿಸುವಂತೆ ಆಗುತ್ತದೆ.

'ಬರ'ಕಾದಂಬರಿಯಲ್ಲಿ ವಾಸ್ತವ ಚಿತ್ರಣಗಳೊಂದಿಗೆ ಮನಮುಟ್ಟುತ್ತದೆ. 'ಪ್ರಕೃತಿ' ವಿಕೋಪದೊಂದಿಗೆ ಗ್ರಾಮದ ಜನತೆ ಸೆಣಸುತ್ತಾರೆ. ಹಸಿವನ್ನು ನೀಗಿಸಿಕೊಳ್ಳಲು ಶತ್ತೆಗಡ್ಡೆ ಶೋಧಿಸಿ ಅಗೆದು ತಿನ್ನುತ್ತಾರೆ ಶೆತ್ತೆಗಡ್ಡೆ ತೀರಿ ಹೋದಾಗ ಕತ್ತಾಳೆ ಗಿಡವನ್ನು ಕಡಿದು ಅದರ ಗಿಣ್ಣನ್ನು ತಂದು ಬೇಯಿಸಿ ತಿನ್ನುತ್ತಾರೆ ಅದರಿಂದ ಭೇದಿ ಶುರುವಾಗುತ್ತದೆ. ಊರಿಗೆಲ್ಲ ಈ ಥರ ಬಂದಿರೋದು ಮಾದೇವಯ್ಯನವರಂತಹ ಸಾತ್ವಿಕ ಸನ್ಯಾಸಿ ಊರು ಬಿಟ್ಟು ಹೋದದ್ದರಿಂದ ಎಂದು ಜನ ನಂಬುತ್ತಾರೆ. 'ಬರ'ದ ಸಂದರ್ಭದಲ್ಲಿ ಮಾನ ಮರ್ಯಾದೆ ಬದಿಗಿಟ್ಟು ಎಷ್ಟೇ ಜನ ಹೆಂಗಸರು ಹೊಟ್ಟೆಗೆ ಸಂಪಾದಿಸಿದರು ಎನ್ನುವ ವಿಷಯ ನಂಜಮ್ಮನಿಗೆ ತಿಳಿಯುತ್ತದೆ.

ಗ್ರಾಮದ ಬದುಕಿಗೆ ಹೊಂದಿಕೊಳ್ಳದ ಕಲ್ಲೇಶಿಯ ಹೆಂಡತಿ. ತಾನು ಹಾಸನದ ಪೇಟೆಗೆ ಸೇರಿದವಳು ಎನ್ನುವ ಭಾವನೆ ಅವಳಲ್ಲಿ ಹೋಗುವುದೇ ಇಲ್ಲ ಇವರಿಬ್ಬರ ನಡುವೆ ಕಂಠೀ ಜೋಯಿಸರ ತಾಯಿ ಅಕ್ಕಮ್ಮ ಪಡಬಾರದ ಪಾಡು ಪಡುತ್ತದೆ. ಕಮಲುವಿನ ಸ್ವಭಾವದಿಂದ ಕಲ್ಲೇಶಿ ಪರಸ್ತ್ರೀಯರ ಸಹವಾಸವನ್ನು ಮಾಡುತ್ತಾನೆ.

''ಗ್ರಾಮಗಳಲ್ಲಿ ಹೆಣ್ಣುಮಕ್ಕಳು ಮೈನೆರೆಯುದಕ್ಕಿಂತ ಮೊದಲು ಮದುವೆ ಮಾಡುವ ರೂಢಿ ಇರುವುದು ತೋರುತ್ತದೆ. ಹಿಂದಿನ ಕಾಲದಲ್ಲಿ ಮದುವೆಗೆ ಮೊದಲು ಹುಡುಗಿಯರು ಮೈನರೆದರೆ ಕಣ್ಣು

ಕಟ್ಟಿ ಕಾಡಿನಲ್ಲಿ ಬಿಟ್ಟು ಬಿಡುತ್ತಿದ್ದರಂತೆ'' (ಗೃಹಭಂಗ, ಪು - ೨೫೩) ಎಂಬ ವಿಚಾರ ಚರ್ಚೆಯ ಸಂದರ್ಭದಲ್ಲಿ ಬರುತ್ತದೆ.

ಕನ್ಯಾದಾನವಾಗುವ ತನಕ ಗಂಡಿನ ಮನೆಯಲ್ಲಿ ಗಂಗೋದಕನೂ ಸ್ವೀಕರಿಸಬಾರದು ಎಂಬ ಶಾಸ್ತ್ರದ ಪ್ರಸ್ತಾಪವಿದೆ. ಪಾರ್ವತಿಗೆ ಗಂಡು ನೋಡಲು ಹೋದ ಸಂದರ್ಭದಲ್ಲಿ ಕನ್ಯೆಯ ತಂದೆ ಚೆನ್ನಿಗರಾಯ ಊಟಮಾಡಿ ಎಂದ ಕೂಡಲೇ ಊಟಕ್ಕೆ ಕುಳಿತು ಬಿಡುತ್ತಾನೆ. ನಂತರ ವರನ ತಂದೆ 'ಕನ್ಯೆಯ ತಂದೆಯೇ ನಮ್ಮ ನೇಲಿ ಊಟಮಾಡಿಬಿಟ್ರು ಇನ್ನು ಮದುವೆ ಪ್ರಸ್ತಾಪ ಮುಂದುವರಿಲಾರ್ದು ಶಾಸ್ತ್ರ ನಿಮಗೇ ಗೊತ್ತಿದೆಯಲ್ಲ' ಎಂದು ಚೆನ್ನಿಗರಾಯನ ಜೊತೆ ಬಂದ ವೆಂಕಟೇಶಯ್ಯನವರಿಗೆ ಹೇಳುತ್ತಾರೆ.

ನಂಜಮ್ಮ ಎಂಥ ಪರಿಸ್ಥಿತಿಯಲ್ಲಿಯೂ ಹೋರಾಟ ಮಾಡುವ ಗುಣವುಳ್ಳವುಳು. ಪಾರ್ವತಿ ಮದುವೆಯ ಸಿದ್ಧತೆಯಲ್ಲಿ, ವರನ ಆಯ್ಕೆಯಲ್ಲಿ ಅವಳ ಯುಕ್ತಾಯುಕ್ತ ಸ್ವಭಾವ ಎದ್ದು ಕಾಣುತ್ತದೆ. ಮಗಳು ಪಾರ್ವತಿ, ರಾಮಣ್ಣ ವಿಶ್ವನನ್ನು ಚೆನ್ನಾಗಿ ನೋಡಿಕೊಂಡು ಅವರಿಗೆ ಉತ್ತಮ ಭವಿಷ್ಯವನ್ನು ತಂದುಕೊಬೇಕೆಂದು ಹಗಲಿರುಳು ಶ್ರಮಿಸುತ್ತಾಳೆ.

ದಾವರಸಯ್ಯನವರ ಮಗ ಸೂರ್ಯನಾರಾಯಣನಿಗೆ ಮಗಳನ್ನು ಕೊಟ್ಟು ವ್ಯವಸ್ಥಿತವಾಗಿ ಮದುವೆ ಮಾಡುತ್ತಾಳೆ. ಜಾತಕ ಗುಣಿಸಿ ನೋಡಿದಾಗ ಪಾರ್ವತಿ ಸೂರ್ಯನಾರಾಯಣನಿಗೆ ಗ್ರಹಕೂಟ, ಯೋನಿಕೂಟ, ನಾಡಿಕೂಟಗಳೆಲ್ಲ ಕೂಡಿ ಬಂದ ವಿಷಯವನ್ನು ಗಮನಿಸುತ್ತಾರೆ. ಈ ಮದುವೆಯಲ್ಲಿ ಅಪ್ಪಣ್ಣಯ್ಯ ಶ್ರದ್ಧೆಯಿಂದ ದುಡಿಯುತ್ತಾನೆ ಆದರೆ ಚೆನ್ನಿಗರಾಯ ತನಗೆ ಹೊಸ ಪಂಚೆಯೇ ಬೇಕು ಎಂದು ಸಣ್ಣ ಮಕ್ಕಳಂತೆ ಹಟ ಹಿಡಿಯುತ್ತಾನೆ.

ಊರಿಗೆಲ್ಲ ಪ್ಲೇಗು ಬಂದ ಸಂದರ್ಭದಲ್ಲಿ ಪಾರ್ವತಿ, ರಾಮಣ್ಣ ಸಾಯುತ್ತಾರೆ. ದರ್ಪದ ಪ್ರತಿರೂಪವಾದ ಪಟೇಲ್ ಶಿವೇಗೌಡ, ತನ್ನ ಷಂಡ ಗಂಡನನ್ನು ತಿರಸ್ಕರಿಸಿ ಊರ ಮುಂದೆ ಅಂಗಡಿ ಹಾಕಿ ಸುಖವಾಗಿ ಬಾಳುವ ನರಸಿ ನಂಜಮ್ಮನಿಗೆ ಸದಾ ನೈತಿಕ ಧೈರ್ಯ ತುಂಬವ ಸನ್ಯಾಸಿ ಮಾದೇವಯ್ಯ, ಕಷ್ಟಕ್ಕಾಗುವ ಗುಂಡೇಗೌಡ ಮುಂತಾದ ಪಾತ್ರಗಳಿಂದ ವಿವಿಧ ಘಟನೆಗಳಿಂದ ಗ್ರಾಮೀಣ ಬದುಕಿನ ಎಲ್ಲ ಪ್ರಕ್ರಿಯೆಗಳನ್ನು ಸನ್ನಿವೇಶಗಳನ್ನು ಕಾದಂಬರಿ ಕಟ್ಟಿಕೊಡುತ್ತದೆ. ಬಹುಪಾಲು ಪಾತ್ರಗಳು ಸ್ವಾರ್ಥದಿಂದ ತುಂಬಿ ತುಳುಕುತ್ತವೆ. ಮಾನವೀಯತೆಯ ಗುಣವಿಲ್ಲದೇ ತಿರಸ್ಕಾರಕ್ಕೆ ಒಳಗಾಗುತ್ತವೆ.

ಈ ಕಾದಂಬರಿಯಲ್ಲಿ ಕಾದಂಬರಿಕಾರರ ವೈಯಕ್ತಿಕ ವಿಚಾರಗಳು ತತ್ವಗಳು, ಉದ್ದೇಶಗಳು ಯಾವುದೇ ಸ್ಥಾನವನ್ನು ಪಡೆದುಕೊಂಡಿಲ್ಲ. ಅವಿದ್ಯಾವಂತ ಜನಸಮೂಹ, ತಮ್ಮದೇ ಆದ ಹೀನ ಪ್ರಪಂಚದಲ್ಲಿ ಹೇಗೆ ಬದುಕುತ್ತಿದ್ದಾರೆ. ಎಂಬುದರ ವಾಸ್ತವ ಚಿತ್ರಣ ಇದೆ. ಮಾನವ ನಿರ್ಮಿತ ಸಂಕಷ್ಟಗಳಿಗೆ, ಪ್ರಕೃತಿಯೇ ಕೈಜೊಡಿಸಿ ಅವರ ಬದುಕನ್ನು ಮತ್ತಷ್ಟು ಬರ್ಬರವಾಗುವಂತೆ ಮಾಡುತ್ತದೆ. ಒಂದು ಬಡ ಬ್ರಾಹ್ಮಣ ಕುಟುಂಬ ಸುತ್ತ ಬಿಚ್ಚಿಕೊಳ್ಳುವ ಗ್ರಾಮ ಬದುಕಿನ ಸಂಗತಿಗಳು ನೈಜತೆಯಿಂದ ಒಡಗೂಡಿವೆ. ಪುರುಷರ ಅಟ್ಟಹಾಸದಲ್ಲಿ ಸೊರಗಿ ಹೋಗುವ ಸ್ತ್ರೀಯರ ಬದುಕಿನ ದಾರುಣ ಚಿತ್ರಣ ಇಲ್ಲಿದೆ.

'ಅನ್ವೇಷಣ' ಗ್ರಹಭಂದ ಕಾದಂಬರಿಯ ಮುಂದುವರಿಕೆಯಾಗಿದೆ. ಗ್ರಹಭಂಗದ ವಿಶ್ವನಾಥನ ಬದುಕಿನ ಬಗೆಗೆ ಇತರರು ನಡೆಸುವ ಅನ್ವೇಷಣೆಯನ್ನೇ ಈ ಕಾದಂಬರಿಯ ವಸ್ತು. ಈ ಕಾದಂಬರಿಯಲ್ಲಿ ಬಳಿಸಿದ 'ತಂತ್ರ' ವಿಭಿನ್ನವಾಗಿದೆ. ಕಾದಂಬರಿಯುದ್ಧಕ್ಕೂ 'ವಿಶ್ವನಾಥ'ನ ಪಾತ್ರ ಬೇರೆ ಪಾತ್ರಗಳ ಮುಖೇನ ತನ್ನ ಅಸ್ತಿತ್ವವನ್ನು ಪಡೆದುಕೊಳ್ಳುತ್ತದೆ. ಹೀಗಿದ್ದರೂ ಈ ಕಾದಂಬರಿಯ ಕೇಂದ್ರ ವ್ಯಕ್ತಿ ವಿಶ್ವನಾಥ. ಅವನ ಬದುಕಿನಲ್ಲಿ ಯಾವ ಸಿದ್ಧಾಂಥವೂ ಇಲ್ಲ. ಅವನು ಬೆಳೆದಂತೆಲ್ಲಾ ಬದುಕಿನ ಎಲ್ಲಾ ಸಾಧ್ಯತೆಗಳನ್ನು ಅನ್ವೇಷಿಸುತ್ತಾನೆ. ತಾಯಿ ನಂಜಮ್ಮನ ಸಾವಿನೊಂದಿಗೆ ಅವನು ಅನಾಥ ಸ್ಥಿತಿಯನ್ನು ಅನುಭವಿಸಿದರು ರೇವಣ್ಣ ಸಿದ್ಧಪ್ಪ ಅನ್ನುವ ಜಂಗಮಯ್ಯ ಅವನನ್ನು ಸಾಕುತ್ತಾರೆ ಇದೆ ಕಾರಣ ಅವನು 'ಬ್ರಾಹ್ಮಣ' ಜಾತಿಯ ವೃತ್ತದಿಂದ ಹೊರಗೆ ಬಂದಂತಾಗುತ್ತದೆ.

ಕಂಠಿ ಜೋಹಿಸರು ತಮ್ಮ ಮೊಮ್ಮಗನನ್ನು ಹುಡುಕುವದಕ್ಕೆ ತೊಡುಗುವ ಕ್ರಿಯೆಯಿಂದ ಕಾದಂಬರಿ ಪ್ರಾರಂಭವಾಗುತ್ತದೆ. ವಿಶ್ವನಾಥ ಧೈರ್ಯಶಾಲಿ. ಹಲವಾರು ವೃತ್ತಿಗಳನ್ನು ಅವಲಂಬಿಸುತ್ತ ಹೋಗುತ್ತಾನೆ. ಹೋಟೆಲ್ ಮಾಣಿ, ವಕೀಲರ ಅಡಿಗೆಯವ, ಥಿಯೇಟರಿನ ಗೇಟ್ ಕೀಪರ್, ನಾಟಕದ ಪಾತ್ರದಾರಿ, ರಿಕ್ಷಾ ಚಾಲಕ, ಟೈಲರ್ ಈ ಎಲ್ಲಾ ವೃತ್ತಿಗಳಲ್ಲಿ ಅವನು ತೊಡಗಿಕೊಳ್ಳುತ್ತಾನೆ. ನಿರಂತರವಾಗಿ ಸ್ಥಳ ಮತ್ತು ವೃತ್ತಿಗಳನ್ನು ಅವನು ಬದಲಾಯಿಸುತ್ತ ಹೋಗುತ್ತಾನೆ. ವಿಶ್ವನಾಥನ ಸಂಪರ್ಕಕ್ಕೆ ಬಂದ ವ್ಯಕ್ತಿಗಳು ತಮ್ಮ ತಮ್ಮ ಸ್ವಭಾವ ಕುರಿತು ಅನ್ವೇಷಣಕ್ಕೆ ತೊಡಗಿಕೊಳ್ಳುತ್ತಾರೆ. ಮಾನವ ಬದುಕಿನ ಅಂತರಂಗದ ಅನ್ವೇಷಣೆಯೇ ಈ ಕಾದಂಬರಿಯ ವಸ್ತು ಎಂಬುದು ಕಾದಂಬರಿಯ ಘಟನೆಗಳನ್ನ ಮೆಲುಕು ಹಾಕುತ್ತಾ ಸಾಗಿದಾಗ ಓದುಗನಿಗೆ ಅನಿಸುತ್ತದೆ. ಅವನು ಯಾರ ಯಾರ ಸಂಪರ್ಕಕ್ಕೆ ಹೋಗುತ್ತಾನೆಯೋ ಅಲ್ಲಿಯ ಸಂಸ್ಕೃತಿಯ ವಿವರಗಳು ಆ ಸಂದರ್ಭದಲ್ಲಿ ದೊರುಕುತ್ತದೆ. 'ನಾಟಕ' ಕಲೆಯ ಬದುಕಿನಲ್ಲಿ ಮಾಲತೀಬಾಯಿಯನ್ನು ಮದುವೆಯಾಗುವೆನೆಂದು ವಿಶ್ವನಾಥ ಹೇಳುವುದು. ಅವನಿಗೆ ವಾಸ್ತವ ಪ್ರಪಂಚದ ಅರಿವೇ ಇಲ್ಲವೆಂಬ ತಿಳುವಳಿಕೆಗೆ ಆ ಕಲೆಯಲ್ಲಿ ಆಗಲೇ ಪರಿಣಿತರಾದವರು ತಿಳಿಯುತ್ತಾರೆ.

ಜೀವನದ ವಿವಿಧ ಅನುಭವಗಳನ್ನ ಅವನು ದಕ್ಕಿಸಿಕೊಳ್ಳುತ್ತಾ ಸಾಗಿದಂತೆ ಮುನ್ನೆಡೆವ ಅವನ ಬದುಕಿನಲ್ಲಿ ಹಲವಾರು ವ್ಯಕ್ತಿಗಳು ಬರುತ್ತಾರೆ.

ಮುನಿಯಮ್ಮ ಸರಳಾಬಾಯಿಯರೊಡನೆ ದೈಹಿಕ ಸಂಪರ್ಕವನ್ನು ಹೊಂದುವ ಅವನಿಗೆ ದಾಂಪತ್ಯದ ಕಟ್ಟಡವನ್ನು ಕೊರೆದು ಹೊಗಿಸುವುದು ಹೇಸಿಗೆ ಎನಿಸುತ್ತದೆ. ಇದೇ ಕಾರಣಕ್ಕೆ ರಾಣೆಬೆನ್ನೂರಿನ ವಕೀಲರ ಮನೆಯನ್ನು ಬಿಟ್ಟು ಅವನು ಬೇರೆ ನೆಲೆಯನ್ನು ಹುಡುಕಿಕೊಂಡು ಹೋಗುತ್ತಾನೆ. ಟಾಂಗಾವಾಲಾಗಳು, ಬಾಂಬೆ ಸೂಳೆಗೇರಿ ಸಂಸ್ಕೃತಿ ಮುಂತಾದವುಗಳು ಕಾದಂಬರಿಯಲ್ಲಿ ಚಿತ್ರಿತವಾಗಿವೆ.

# ದೂರಸರಿದರು

ಇದು ಭೈರಪ್ಪನವರ ಎರಡನೆ ಕಾದಂಬರಿ. ೧೯೬೨ರಲ್ಲಿ ಮುದ್ರಣಗೊಂಡ ಕಾದಂಬರಿ ಪ್ರೇಮದ ಸ್ವರೂಪವನ್ನು ವೈಚಾರಿಕ ನಿಲುವಿನಿಂದ ಕಟ್ಟಿಕೊಡುತ್ತದೆ.

''ಭೈರಪ್ಪನವರ ಆಲೋಚನಾ ಪ್ರಪಂಚ 'ದೂರಸರಿದರು' ಕಾದಂಬರಿಯಲ್ಲಿ ಮುಖ್ಯವಾಗಿ ಆನಂದ ಮತ್ತು ವಿನತೆ, ವಸಂತ ಮತ್ತು ಉಮಾ, ಇವರ ಪ್ರೇಮ ಸಂಬಂಧಗಳಲ್ಲಿ ತೆರೆಯುತ್ತದೆ. ಇಲ್ಲಿ ಪ್ರೇಮದ ಸಮಸ್ಯೆಯನ್ನು ವೈಚಾರಿಕ ದೃಷ್ಟಿಯಿಂದ ನೋಡುವ ಕಣ್ಣದೆ. ಇಲ್ಲಿ ಬರುವ ಎಲ್ಲ ಪ್ರೇಮ ಸಂಬಂಧಗಳು ಅಸಫಲವಾದುವು. ಬೌದ್ಧಿಕ ಜೀವಿಗಳಲ್ಲಿ ವಿಷಮ ದಾಂಪತ್ಯಕ್ಕೆ ಅಥವಾ ಅಸಫಲ ಪ್ರೇಮ ಸಂಬಂಧಕ್ಕೆ ಕಾರಣವೇನು ಎಂಬ ಶೋಧನೆಗೆ ಭೈರಪ್ಪನವರು ತೊಡಗಿದಂತೆ ಕಾಣುತ್ತದೆ.'' (ಸಹಸ್ಪಂದನ : ಸಂ. ಮಾಧವ ಕುಲಕರ್ಣಿ. ಮ. ಗೋವಿಂದರಾವ್, ಪು - ೧೮೭) ಎಂದು ಮಲ್ಲಿಕಾರ್ಜುನ ಹಿರೇಮಠರು ಈ ಕಾದಂಬರಿಯ ಒಟ್ಟು ಆಶಯವನ್ನು ಸೂಚಿಸುತ್ತಾರೆ.

ಕಾದಂಬರಿಯ ಶಿರ್ಷಿಕೆಯೆ ಕಾದಂಬರಿಯ ಆಶಯವನ್ನು ಸೂಚಿಸುತ್ತದೆ. ''ಜೀವವು ಒಂದೇ ಎಂದು ಪ್ರೀತಿಸುವಂತಹ ವ್ಯಕ್ತಿಗಳು, ಅದರಿಂದಲೇ ಎರವಾಗುತ್ತಾರೆ 'ದೂರಸರಿದರು'ನಲ್ಲಿ ಬರುವ ಪಾತ್ರಗಳು ಪ್ರೀತಿಸುತ್ತವೆ ಆದರೆ ಮದುವೆಯಾಗುವುದಿಲ್ಲ. ಅವು ದೂರ ಸರಿಯುತ್ತವೆ ಪತಿ ಪತ್ನಿಯರಾಗುವವರಲ್ಲಿ ಕೇವಲ ದೈಹಿಕ ಹೊಂದಾಣಿಕೆಯೇ ಇದ್ದರೇ ಸಾಕೆ ? ವೈಚಾರಿಕ ಸಾಮ್ಯವೇ ದಾಂಪತ್ಯದ ಪ್ರಮುಖ ಅಂಗವೇ ? ಪ್ರೀತಿಯೇ ಅದರ ಜೀವಾಳವೇ? ಎಂಬೆಲ್ಲ ಪ್ರಶ್ನೆಗಳನ್ನು ಕೇಳಿ ಉತ್ತರಕ್ಕಾಗಿ ಯೋಚಿಸಲು ಹಚ್ಚುತ್ತಾರೆ ಕಾದಂಬರಿಕಾರರು'' (ಸಹಸ್ಪಂದನ : ಸಂ. ಮಾಧವ ಕುಲಕರ್ಣಿ. ಮ. ಗೋವಿಂದರಾವ್, ಪು-೨೦೦) ಎಂದು ಕಣವಿ ಮಹಾದೇವರವರು ಈ ಕಾದಂಬರಿಯ ಉದ್ದೇಶವನ್ನು ಧೋರಣೆಯನ್ನು ಗುರುತಿಸಲು ತೊಡುಗುತ್ತಾರೆ.

ಆನಂದ ಮತ್ತು ವಿನತೆಯರ ಕಾಲೇಜು ಜೀವನದಿಂದ ಕಾದಂಬರಿ ಪ್ರಾರಂಭವಾಗುತ್ತದೆ. ಆನಂದ ತಂದೆಯನ್ನು ಕಳೆದುಕೊಂಡು ತಾಯಿಯ ಆರೈಕೆಯಲ್ಲಿ ಬೆಳೆದವನು. ತಂದೆ ಮಿಡ್ಲ್‌ಸ್ಕೂಲಿನ ಉಪದ್ಯಾಯರು ಇನ್‌ಷೂರೆನ್ಸಿನ ಹಣದ ಸಹಾಯ ಹಾಗೂ ತಾಯಿಯ ದುಡಿಮೆಯಲ್ಲಿ ಆನಂದನ ಓದು ಸಾಗುತ್ತದೆ. ಆನಂದನ ತಾಯಿ ಗೌರಮ್ಮ ಜವಾಬ್ದಾರಿಯುತ ಸ್ತ್ರೀ. ಮೈಸೂರಿಗೆ ಬಂದು ನೆಲೆ ನಿಲ್ಲುವ ಅವಳಿಗೆ

ಸರ್ವಸ್ವವೆಂದರೆ ಮಗ ಆನಂದ. ಆನಂದ ಕೂಡಾ ಜವಾಬ್ದಾರಿಯನ್ನು ಹೊಂದಿದ ತರುಣ ವಿದ್ಯಾರ್ಥಿ. ಜವಳಿ ಮತ್ತು ಸ್ಟೇಷನರಿ ಅಂಗಡಿಯಲ್ಲಿ ಟೈಪಿಸ್ಟ್ ಮತ್ತು ಗುಮಾಸ್ತೆಯಾಗಿ ದುಡಿಯುತ್ತಾನೆ. ಸಂಜೆ ಆರರಿಂದ ಒಂಬತ್ತರವರೆಗೆ ಕೆಲಸ. ಆನಂದನಿಗೆ ವಿದ್ಯಾರ್ಥಿ ಜೀವನವೆಂದರೆ ಮಜಾ ಮಾಡುವುದು ಎಂಬ ಉದ್ದೇಶವಿಲ್ಲ ಜೀವನ ಹೊರೆ, ಅನುಭವ ಮತ್ತು ವಾಸ್ತವತೆಯ ಪರಿಜ್ಞಾನ ಅವನಿಗಿದೆ ಮಧ್ಯವರ್ಗದ ಸಾಮಾನ್ಯ ಕುಟುಂಬದ ಆನಂದ ಬದುಕನ್ನು ಕಟ್ಟಿಕೊಳ್ಳುವಲ್ಲಿ ವಿಶೇಷವಾದ ಮುತವರ್ಜಿಯನ್ನು ಹೊಂದಿದವ. ನಿವೃತ್ತ ಪ್ರಾಧ್ಯಾಪಕರಿಗೆ ಗೌರವ ಸಮಾರಂಭ ಏರ್ಪಡಿಸುವ ಸಂದರ್ಭದಲ್ಲಿ ಆನಂದ ಮತ್ತು ವಿನತೆಯ ಪರಿಚಯವಾಗುತ್ತದೆ. ಪರಿಚಯ ಸ್ನೇಹವಾಗುತ್ತದೆ. ಸ್ನೇಹ ಪ್ರೀತಿಯಲ್ಲಿ ಪರ್ಯಾವಸಾವನ ಹೊಂದುತ್ತದೆ.

ಆನಂದ ಸಾಹಿತ್ಯದ ಬಗ್ಗೆ ಅಪಾರ ಒಲವು ಇಟ್ಟುಕೊಂಡ ವ್ಯಕ್ತಿ. ಮೂರು ಕಾದಂಬರಿಗಳ ಹಸ್ತಪ್ರತಿ, ಇಪ್ಪತ್ತಕ್ಕೂ ಮಿಕ್ಕಿ ಸಣ್ಣಕಥೆಗಳು ಅವನಲ್ಲಿ ಇವೆ. ಅವುಗಳನ್ನು ಪ್ರಕಟಿಸುವ ಮುನ್ನ ಸಾವಿರ ಸಲ ಯೋಚಿಸಬೇಕೆಂಬ ಧೋರಣೆ ಅವನದು. ಸಾಹಿತ್ಯಕ್ಕೂ ತತ್ವಶಾಸ್ತ್ರಕೂ ಸಂಬಂಧವಿದೆಯೆಂಬ ನಂಬಿಕೆ ಅವನಲ್ಲಿ ಗಾಢವಾಗಿದೆ.

''ಯಾವ ತತ್ವವೂ ಇಲ್ಲದೆ ಇರುವ ಸಾಹಿತ್ಯವಾದರೂ ಯಾವುದು ? ತತ್ವಶಾಸ್ತ್ರದ ಆಳವಾದ ಪರಿಚಯ, ದೃಷ್ಟಿಕೋನ ಇಲ್ಲದ ಯಾವ ಬರಹವೂ ನಿಜವಾದ ಸಾಹಿತ್ಯವಾಗಲಾರದೂ. ಪ್ರಪಂಚದ ದೊಡ್ಡ ದೊಡ್ಡ ಬರಹಗಾರರೆಲ್ಲರೂ ದೊಡ್ಡವರೆನಿಸಿಕೊಂಡಿರುವುದು ಅವರ ಲೇಖನದಲ್ಲಿ ಕತೆ, ಕವನ, ನಾಟಕ ಯಾವುದೇ ಇರಲಿ ಕಾಣುವ ದರ್ಶನದಿಂದ, ಜೀವನದರ್ಶನದಿಂದ ಕನ್ನಡಿಯಷ್ಟು ತಿಳಿಯಾಗಿ, ತರ್ಕಬದ್ಧವಾಗಿ ಹೇಳುವುದು ತಾನೆ ತತ್ವ ಶಾಸ್ತ್ರವೆಂದರೆ ? '' (ದೂರಸರಿದವರು, ಪು-೧೪) ಎಂದು ಗಂಭೀರವಾಗಿ ಆಲೋಚನೆಯಲ್ಲಿ ತೊಡುಗುವ ಆನಂದ ಬೌದ್ಧಿಕವಾಗಿ ಎತ್ತರದಲ್ಲಿರುವ ವ್ಯಕ್ತಿ.

ಆನಂದ ವಿನುತೆ ಸಮಾನ ವಯಸ್ಕರು, ಪ್ರಾಯವು ಈಗತಾನೆ ಕಾಲಿಟ್ಟಿರುವ ವಯಸ್ಸು. ವಿನುತೆಯ ತಂದೆ ತೀರಿಕೊಂಡ ನಂತರ ಅವರ ಸಂಸಾರ ಕಷ್ಟದಲ್ಲಿ ಸಿಕ್ಕಿಕೊಳ್ಳುತ್ತದೆ. ವಿನತೆಯ ತಾಯಿಯೂ ಗಂಡ ಸತ್ತ ನಂತರ ಮೈಸೂರಿಗೆ ಬಂದು ನೆಲೆಯಾದವರು. ಮನೆಯ ಚಿನ್ನ, ಬೆಳ್ಳಿ ಕರಗಿಸಿ ಮಕ್ಕಳ ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡುತ್ತಾರೆ.

ಆನಂದ ವಿನತೆಯರ ಮನಸ್ಸು ಸಮಾನವಾದುದು ಒಳ್ಳೆಯ ಆದರ್ಶವನ್ನು ಇಟ್ಟು ಕೊಂಡವರು. ಕಾದಂಬರಿಯಲ್ಲಿ ಇದೆ ರೀತಿ ಮತ್ತೊಂದು ಜೋಡಿ ವಸಂತ ಉಮೆಯರದು. ವಸಂತ ಮನಶಾಸ್ತ್ರ ತೆಗೆದುಕೊಂಡು ಆನರ್ಸನ್ನು ಎಂ. ಎಯನ್ನು ಮಗಿಸಿದವ. ಈಗ ತತ್ವಶಾಸ್ತ್ರವನ್ನು ಸೂಕ್ಷ್ಮವಾಗಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿ. ವಸಂತ ಉಮೆಯರು ತತ್ವಶಾಸ್ತ್ರದ ಗಹನವಾದ ಸಮಸ್ಯೆಗಳನ್ನು ಚರ್ಚಿಸುತ್ತಾರೆ. ಉಮೆ ಕೂಡಾ ತತ್ವಶಾಸ್ತ್ರದ ವಿದ್ಯಾರ್ಥಿನಿ ಇವರಿಬ್ಬರ ಮಧ್ಯೆ ಮತ್ತು ಆನಂದ ವಸಂತರ ಮಧ್ಯೆ ಚರ್ಚಿಸಲ್ಪಡುವ ಪ್ಲೇಟೋನ ವಿಚಾರಗಳು ಕಾದಂಬರಿಯ ವಸ್ತುವಿಗೆ ಮುನ್ನೋಟವನ್ನು ಒದಗಿಸುತ್ತವೆ. ಅಂಥ ಅರ್ಥಪೂರ್ಣವಾದ ಚರ್ಚೆಯನ್ನು ಇಲ್ಲಿ ಗುರುತಿಸಬಹುದಾಗಿದೆ.

''ಸ್ತ್ರೀ ಪುರಷರ ಸಮಾನತೆಯನ್ನು ತರ್ಕದ ತುದಿಗೆ ಒಯ್ದು ಮುಟ್ಟಿಸಿದವರು ಅವನಂತೆ ಬೇರೊಬ್ಬರಿಲ್ಲ ಅವನ ಕಲ್ಪನೆಯ ಸಮತಾ ವಾದದಲ್ಲಿ ಸ್ತ್ರೀ ಪುರುಷರ ನಡುವೆ ಇರಬೇಕಾದದು ಬೌದ್ಧಿಕ

ಸಹ ಜೀವನ ಮಾತ್ರ ಅದೇ ಉತ್ತಮ ಮಟ್ಟದ ಪ್ರೇಮ ಸಾಮಾನ್ಯ ಜನರಂತೆ ಭಾವುಕತೆಯ ಮತ್ತು ಕವಿಗಳು ಹೇಳುವ ಹೃದಯದ ಕವಿತೆಯನ್ನು ಪ್ಲೇಟೋ ಅಲ್ಲಗಳೆಯುತ್ತಾನೆ.''

ಹೃದಯ ಎಂಬುದಕ್ಕೆ ಯಾವ ಸ್ಥಾನವೂ ಇಲ್ಲವೇ ? ಹೃದಯ ಎನ್ನುವದಾದರೂ ಏನು ? ಮನಶಾಸ್ತ್ರದ ದೃಷ್ಟಿಯಿಂದ ನಮ್ಮ ಮನಸ್ಸಿನ ಆಳದಲ್ಲಿ ಇರುವ ಕೆಲವು ಪ್ರಭಲವಾದ ಆಸೆ ಆಕಾಂಕ್ಷೆಗಳು, ಕಾಮನೆಗಳು, ಅವುಗಳೊಡನೆ ನಾವೇ ಮೆಚ್ಚುಗೆಯಿಂದ ಬೆಳಸಿಕೊಂಡ ಕೆಲವು ಬಯಕೆಗಳು, ಇವೆಲ್ಲದರ ಸಂಯುಕ್ತ ಕಲ್ಪನೆಗೆ ಕೊಟ್ಟ ಹೆಸರೆ ಹೃದಯ.

ಸ್ತ್ರೀ ಪುರುಷರ ಪ್ರೇಮ ಯಾವುದಕ್ಕಾಗಿ ? ದಾಂಪತ್ಯಕ್ಕಾಗಿ ತಾನೆ ? ಪರಸ್ಪರ ಬುದ್ಧಿಶಕ್ತಿಗಳ ಸಮಾವೇಶವಾಗದೆ, ವಿಚಾರಗಳ ಏಕೀಕರಣವಾಗದೆ ಇದ್ದರೆ ಅದೆಂತಹ ದಾಂಪತ್ಯ ? ನಮ್ಮಲ್ಲಿ ನೂರಕ್ಕೆ ತೊಂಬತ್ತೊಂಬತ್ತು ಮೀರಿ ಇರುವ ದಾಂಪತ್ಯಗಳಲ್ಲಿ ಪರಸ್ಪರ ವಿಚಾರದ ಸಂಬಂಧವೇ ಇರುಲ್ಲ. ಆದರೂ ಬಂಧನವಿರುತ್ತದೆ. ನಾನು ಈಗ ಹೇಳಿದ ಅರ್ಥದಲ್ಲಿ ಹೃದಯ ಭಂದನದ ಭ್ರಮೆ ಬೇಡ ವಿಚಾರದ ಸಾಹಿತ್ಯವಿದ್ದರೆ ಸಾಕು. ಅದೊಂದನ್ನೆ ನಿಜವಾದ ದಾಂಪತ್ಯವೆನ್ನಬೇಕು. (ದೂರಸರಿದರು, ಪು-೨೬) ಎನ್ನುವ ವಿಚಾರ ವಂಸತನದು. ಆದರೆ ಉಮೆ ಈ ವಿಚಾರಗಳನ್ನು ಒಪ್ಪದೆ,

'ವಿಚಾರದ ಸಾಹಚರ್ಯವೇ ಬೇಕಾದಲ್ಲಿ, ಗಂಡು ಹೆಣ್ಣುಗಳ ನಡುವೆ ದಾಂಪತ್ಯವಾದರೂ ಏಕೆ ಮಿತ್ರತ್ವವೇ ಸಾಕಲ್ಲ ?' ಎಂದು ಪ್ರಶ್ನಿಸುತ್ತಾಳೆ.

ನಾನು ಹೇಳುವುದೂ ಅದನ್ನೇ 'ಬೌದ್ಧಿಕ' ಮೈತ್ರಿಯೊಂದೇ ಆದರ್ಶ ವಿವಾಹ ಎಂದು ವಸಂತ ತನ್ನ ವಿಚಾರವನ್ನು ಸಮರ್ಥಿಸಿಕೊಳ್ಳುತ್ತಾನೆ. ಈ ಸಂಭಾಷಣೆ ಕಥನಕ್ಕೆ ತಾತ್ವಿಕ ದೃಷ್ಟಿಕೋನವನ್ನು ಒದಗಿಸುತ್ತದೆ. ಕಥೆ ಸಾಗುವುದಕ್ಕೆ ಪೂರಕ ಸೂಚನೆಗಳನ್ನು ಕೊಡುತ್ತದೆ. ಕಾದಂಬರಿ ಬೌದ್ಧಿಕ ವಿಚಾರಗಳ ಮತ್ತು ಭಾವನೆಗಳ ಸಹಚರ್ಯಗಳ ವಿಶ್ಲೇಷಣೆಯನ್ನು ಹಲವು ಪಾತ್ರಗಳ ತಳಹದಿಯಲ್ಲಿ ಕೈಗೊಳ್ಳುತ್ತದೆ. 'ದಾಂಪತ್ಯ'ದಲ್ಲಿ ಇರಬೇಕಾದ ಅವಶ್ಯಕತೆಗಳ ಕುರಿತ ದೀರ್ಘ ಆಲೋಚನೆಯನ್ನೇ ಇಲ್ಲಿ ಎತ್ತಿಕೊಳ್ಳಲಾಗಿದೆ. ಕಾಲೇಜಿನಲ್ಲಿ ಚರ್ಚೆಗೆ ಇಟ್ಟ ವಿಷಯ : 'ಸಮಾನತೆ ಮತ್ತು ದಾಂಪತ್ಯ' ಎರಡೂ ಪರಸ್ಪರ ವಿರೋಧಿ ಭಾವಗಳು ಎಂಬುದಾಗಿದೆ. ಎಲ್ಲ ಪಾತ್ರಗಳು ಪ್ರೇಮ ದಾಂಪತ್ಯದ ಸುತ್ತ ಫಿಲಾಸಫಿಯ ಭಾವನೆಗಳ ಹಿನ್ನಲೆಯಲ್ಲಿ ಗಿರಕಿ ಹೊಡೆಯುತ್ತವೆ.

ಆನಂದ - ವಿನುತೆ, ವಸಂತ - ಉಮೆ, ವಾಸನ್ - ವಿಜಯಾ ಇವರ ಪರಿಚಯ, ಸ್ನೇಹ, ಪ್ರೀತಿಯ ವಿವರಗಳನ್ನು ಮತ್ತು ಸಂದರ್ಭಗಳನ್ನು ಕಾದಂಬರಿಕಾರರು ಜೀವನಾನುಭವದ ಹಿನ್ನಲೆಯಲ್ಲಿ ಚಿತ್ರಿಸುತ್ತಾರೆ. ಈ ಎಲ್ಲ ಪಾತ್ರಗಳು ಮಧ್ಯಮ ವರ್ಗದ ಕುಟುಂಬದಿಂದ ಬಂದಿವೆ. ಬದುಕನ್ನು ಸುಂದರವಾಗಿ ಕಟ್ಟಿಕೊಳ್ಳಲು ತಮ್ಮದೇ ಆದ ಪ್ರಯತ್ನದಲ್ಲಿ ತೊಡಗಿಕೊಂಡಂತವುಗಳಾಗಿವೆ. ಉತ್ತಮ ವಿದ್ಯಾಭ್ಯಾಸದ ಹಿನ್ನಲೆ ಈ ಪಾತ್ರಗಳಿಗಿದೆ. ಸಮಾನ ವಿಚಾರ ಧಾರೆಯ ಮೇಲೆಯೇ ಪ್ರೀತಿಯ ಸೆಳೆತಕ್ಕೆ ಒಳಗಾಗುತ್ತಾರೆ.

ಕಾಲೇಜು ಪರಿಸರ ಉತ್ತಮವಾದ ವ್ಯಕ್ತಿತ್ವ ನಿರ್ಮಾಣಕ್ಕೆ ಸಹಾಯ ಮಾಡುತ್ತದೆ. ಉತ್ತಮ ಸಹಪಾಠಿಗಳು, ವಿಷಯಜ್ಞಾನವುಳ್ಳ ಪ್ರಾಧ್ಯಾಪಕರು, ಚರ್ಚೆಯ ಮೂಲಕ ಜ್ಞಾನದ ದಿಗಂತವನ್ನು ಸ್ಪರ್ಶಿಸುವ ವಿದ್ಯಾರ್ಥಿ ಸಮೂಹ ಉತ್ತಮ ಸಾಂಸ್ಕೃತಿಕ ವಾತಾವರಣವನ್ನು ಪರಿಚಯಿಸುತ್ತದೆ.

ಭಾರತೀಯ ಸಮಾಜದಲ್ಲಿ ಗ್ರಹಸ್ಥ ಜೀವನ ಮುಖ್ಯವಾದುದು. ಒಂದು ಹೆಣ್ಣಿಗೆ ಒಂದು ಗಂಡು ಸೇರಿ ಪವಿತ್ರವೆಂದು ಗುರುತಿಸಲ್ಪಟ್ಟ ದಾಂಪತ್ಯವನ್ನು ಅನುಭವಿಸಬೇಕು. ದಾಂಪತ್ಯ ಸುಗಮವಾಗುವುದು, ಸುಂದರವಾಗುವುದು. ಬೌದ್ಧಿಕ ಸಾಹಚರ್ಯದಿಂದಲೋ, ಭಾವನಾತ್ಮಕ ಹೊಂದಾಣಿಕೆಯಿಂದಲೋ ಎಂಬ ವಿಷಯ ಕಾದಂಬರಿಯಲ್ಲಿ ಚರ್ಚೆಯಾಗುತ್ತದೆ. ಸಾಮಾನ್ಯವಾಗಿ ಭಾರತೀಯ ಸಮಾಜದಲ್ಲಿ ಮದುವೆಯೆಂಬುದು ಕಡ್ಡಾಯ. ಪ್ರತಿಯೊಬ್ಬರೂ ಸಂಸಾರವೆಂಬ ನೊಗಕ್ಕೆ ಹೆಗಲುಕೊಡಲೇಬೇಕು. ಮದುವೆ ಕೂಡಾ ಬಹುಬೇಗನೇ ಜರುಗುವಂಥಹದು. ಬಾಲ್ಯವಿವಾಹ ಪದ್ಧತಿಯನ್ನು ಸಮಾಜದಲ್ಲಿ ಬಹುಕಾಲದವರೆಗೆ ಅನುಸರಿಸಿಕೊಂಡು ಬರಲಾಗಿತ್ತು. ಈಗಲೂ ಕೂಡಾ ಅಲ್ಲೊಂದು ಇಲ್ಲೊಂದು ಎಂಬಂತೆ ಈ ಮದುವೆಗಳು ಜರುಗುತ್ತವೆ. ಹೀಗೆ ಮದುವೆಗೆ ಗಂಡು ಹೆಣ್ಣುಗಳನ್ನು ಹೊಂದಿಸುವಾಗ ಅವರ ಸಮಾನವಾದ, ಮನಸ್ಸು, ಬೌದ್ಧಿಕತೆಯ ವಿಚಾರಗಳಿಗಿಂತ, ಕುಲ, ಗೋತ್ರಗಳು ಪ್ರಧಾನ ಪಾತ್ರ ವಹಿಸುವುದೂ ಉಂಟು. ಶಾಸ್ತ್ರಗಳ ಆಧಾರದ ಮೇಲೆ, ಅಂತಸ್ತಿನ ಸಮಾನತೆಯ ಮೇಲೆ ಜರುಗುವ ಮದುವೆಗಳಲ್ಲಿ, ಭಾವನೆಗಳಿಗಾಗಲಿ ಬೌದ್ಧಿಕತೆಗಾಗಲಿ ಪ್ರಥಮ ಪ್ರಾಶಸ್ತ್ಯವಂತೂ ಇಲ್ಲ. ಈ ಕಾರಣಗಳಿಂದ ದಾಂಪತ್ಯವೇ ಬದುಕಿನ ಸಮಸ್ಯೆಯಾಗಿ ಪರಿವರ್ತನೆಯಾಗುವ ಸಾಧ್ಯತೆಯೂ ಇದೆ. ಅಥವಾ ಅತಿ ಬೌದ್ಧಿಕತೆಯೇ ದಾಂಪತ್ಯಕ್ಕೆ ಅಡ್ಡಿಯಾಗುವ ಸಾಧ್ಯತೆಯೂ ಉಂಟು. ಈ ಹಿನ್ನಲೆಯಲ್ಲಿ 'ದೂರಸರಿದರು' ಕಾದಂಬರಿ ಬದುಕಿನ ಈ ಮುಖ್ಯ ಆಯಾಮಗಳ ಕಡೆಗೆ ಓದುಗರ ಗಮನವನ್ನು ಸೆಳೆದು ಚಿಂತನೆಗೆ ತೊಡುಗಿಸುತ್ತದೆ. ಮತ್ತು ಬದುಕಿನ ಆಯ್ಕೆ, ಶೋಧನೆಯತ್ತ ನಮ್ಮನ್ನು ಕರೆದೊಯ್ಯುತ್ತದೆ.

ಪ್ರೀತಿಸಿ ಮದುವೆಯಾಗುವುದು ಭಾರತೀಯ ಸಮಾಜದ ಪದ್ಧತಿಯಲ್ಲ ತಂದೆ ತಾಯಿಗಳು ನೋಡಿ ನಿರ್ಧರಿಸಿದ ಕನ್ಯೆಯನ್ನೋ, ವರನನ್ನೋ ಕೈಹಿಡಿಯುವುದು ನಮ್ಮ ಸಂಪ್ರಾದಯ. ಪ್ರೀತಿಸಿ, ಪರಸ್ಪರ ಅರ್ಥಮಾಡಿಕೊಂಡು ಮದುವೆ ಮಾಡಿಕೊಳ್ಳುವ ಈ ವಿಧಾನ ಪಾಶ್ಚಾತ್ಯ ಸಂಸ್ಕೃತಿಯ ಬಳುವಳಿ. ಇತ್ತೀಚಿಗೆ ವಿದ್ಯಾಭ್ಯಾಸದ ಮಹತ್ವವನ್ನು ಸಮಾಜ ಅರಿತುಕೊಂಡ ಮೇಲೆ ಈ ಪ್ರಭಾವ ಸಮಾಜದ ಮೇಲೆ ಆಗುತ್ತಿದೆ. ರಜಿಸ್ಟರ್ ಮದುವೆಯಾದರು ಎಂಬುದೇ ಅದೊಂದು ಕಳ್ಳ ಮದುವೆ, ಸಮಾಜದಿಂದ ಒಪ್ಪಿತವಲ್ಲದ ಮದುವೆ ಎಂಬ ಭಾವನೆಗಳಿವೆ. ಪ್ರೀತಿಸಿ ಮದುವೆಯಾಗುವುದನ್ನು ನಮ್ಮ ಸಾಂಪ್ರದಾಯಿಕ ಸಮಾಜ ಒಪ್ಪುವುದಿಲ್ಲ ಮತ್ತು ಭಿನ್ನ ಜಾತಿ, ಧರ್ಮಗಳಿಗೆ ಒಳಪಟ್ಟವರಾಗಿದ್ದರೆ ಅಂಥ ಮದುವೆಗಳು ಬಹಳ ಗುಟ್ಟಿನಿಂದಲೇ ನಡೆಯಬೇಕು, ಇಲ್ಲದಿದ್ದರೆ ಕುಟುಂಬದ ಸದಸ್ಯರಿಂದಲೇ ಮದುವೆಗೆ ಅಡ್ಡಿವುಂಟಾಗುವ ಸಂಭವವಿರುತ್ತದೆ. ಆದರೆ ಬದಲಾದ ಸಾಮಾಜಿಕ ಸಂದರ್ಭದಲ್ಲಿ ಈಗ ಇದೂ ನಿಧಾನವಾಗಿ ಒಪ್ಪಿತ ಮುದ್ರೆಯನ್ನು ಪಡೆದುಕೊಳ್ಳುತ್ತಿದೆ. ಆದರೆ ವ್ಯಾಪಕ ಪ್ರಮಾಣದಲ್ಲಿ ಈ ಬದಲಾವಣೆ ಸಾಧ್ಯವಾಗಿಲ್ಲ.

ಸಾಂಪ್ರದಾಯಿಕವಾಗಿ ಜರುಗುವ ಮದುವೆಗಳಲ್ಲಿ ವಿಚಾರಗಳಿಗೆ ಆಸ್ಪದವೇ ಇರುವುದಿಲ್ಲ. ಅಂಥ ಮದುವೆಯ ಮೂಲಕ ದಾಂಪತ್ಯಕ್ಕೆ ಅಡಿಯಿಟ್ಟವನು ರಂಗೇಗೌಡ. ಮೊದಲ ಸಲ ಮನೆಗೆ ಬಂದ ಹೆಂಡತಿಯನ್ನು ಬಿಟ್ಟು ಮೈಸೂರಿಗೆ ಬರಬೇಕಾದರೆ ಅವನಿಗೆ ಅಪರಿಮಿತವಾದ ಸಂಕಟವಾಗುತ್ತದೆ. 'ಜೀವನವೇ ವಿಚಿತ್ರ ಬರೀ ಕೊರತೆ, ಒಂದಲ್ಲ ಒಂದು ರೀತಿಯ ಕೊರತೆ' ಎಂದು ಅವನಿಗನಿಸಿದರೂ '' ನನ್ನಿಷ್ಟವಲ್ಲದಿದ್ದರೆ ನಾನು ಮಾತಾಡುವುದನ್ನು ಅರ್ಥಮಾಡಿಕೊಳ್ಳುವಷ್ಟಾದರೂ ನನಗೆ ಆಸಕ್ತಿ ವಿಷಯಗಳಲ್ಲಿ

ತಾನೂ ಆಸಕ್ತಿ ತೋರಿಸುವಷ್ಟಾದರೂ ಓದಿರಬೇಕು ನನ್ನ ಜತೆ ನಾಟಕ ಸಿನೆಮಾಗಳಿಗೆ ಬಂದು ಅವುಗಳನ್ನು ನನ್ನಂತೆಯೇ ವಿಮರ್ಶಿಸಿ ಮೆಚ್ಚಬೇಕು, ನಾನು ಸಂತೋಷ ಪಟ್ಟು ಕವನ ಕಾದಂಬರಿಗಳನ್ನು ತಾನೂ ನನ್ನೊಡನೆ ಓದಿ ನನ್ನ ಸಂತೋಷ ಹೆಚ್ಚಿಸಬೇಕು.'' (ದೂರಸರಿದರು, ಪು-೬೦) ಎಂಬ ಭಾವನೆಯನ್ನು ವ್ಯಕ್ತಪಡಿಸುತ್ತಾನೆ. ಇವನ ಸಲಹೆ ಪಡೆಯುವ ವಸಂತ - ಉಮೆ ಮುಂತಾದವರು ಶ್ರದ್ಧೆ ಪ್ರೇಮದಿಂದ ಭಾವನಾತ್ಮಕವಾಗಿ ಒಂದಾದರೂ ಬೌದ್ಧಿಕವಾಗಿ ಭಿನ್ನರಾಗುತ್ತಾರೆ. ಈ ಭಿನ್ನತೆ ವಿವಾಹಪೂರ್ವದಲ್ಲಿಯೇ ಕಾಣಿಸಿಕೊಂಡು ಎಲ್ಲರೂ ದೂರವಾಗುತ್ತಾರೆ. ''ಬೌದ್ಧಿಕತೆಗೆ ಸಂಪೂರ್ಣ ಮನಸೊಪ್ಪಿಸಿ ಭಾವನೆಗಳಿಗೆ ಬೆಲೆಗೊಡದೆ ಇರುವುದರ ಪರಿಣಾಮವಿದು'' ಎಂದು ವಿಠಲರಾವ್ ಗಾಯಕ್‌ವಾಡರವರು ಗುರುತಿಸುತ್ತಾರೆ.

'ನನ್ನ ಜೀವನ ನಾನು ಬಲಿಕೊಟ್ಟುಕೊಂಡೇನು' ಆದರೆ ತಾಯಿಯ ಇಚ್ಛೆಗೆ ವಿರೋಧವಾಗಿ ಹೋಗಲಾರೆ ಎಂಬ ವಿನತೆಯ ಮಾತು ಆನಂದ ಮತ್ತು ವಿನತೆಯರನ್ನು ದೂರ ಮಾಡುತ್ತದೆ. ತುಂಬ ನಿರಾಶೆ ಹೊತ್ತು ಅವನು ಪ್ರಕೃಥಿಯ ಮಧ್ಯೆ ಇರಬೇಕೆಂದು ಬಯಸುತ್ತಾನೆ. ಗಿರಿಸ್ವಾಮಿ ಎಂಬ ಸನ್ಯಾಸಿಯನ್ನು ಸಂಧಿಸುತ್ತಾನೆ. ಬಾಬಾಬುಡನ್‌ಗಿರಿ ಮುಳ್ಳಯ್ಯನ ಬೆಟ್ಟ ಮತ್ತು ಪಶ್ಚಿಮ ಘಟ್ಟ ಪ್ರದೇಶಗಳಲ್ಲಿ ಸುತ್ತಿ ಮನಶಾಂತಿಯನ್ನು ಪಡೆಯಲು ಬಯಸುತ್ತಾನೆ.

ವಿನತೆ ಚಿಂತೆಯಲ್ಲಿ ಯಾಂತ್ರಿಕವಾಗಿ ಬದುಕನ್ನು ಕಳೆದು ಟೈಫಾಯಿಡ್ ಜ್ವರದಿಂದ ಮರಣ ಹೊಂದುತ್ತಾಳೆ. ಜಗದಾಂಬಾ ಈ ವಿಷಯವನ್ನು ಆನಂದನಿಗೆ ತಿಳಿಸುತ್ತಾಳೆ. ಆದರೆ ಸಮಯ ಜಾರಿ ಹೋಗಿಸುತ್ತದೆ. ಆನಂದ 'ತಾನೂ ಮಾಡುತ್ತಿರುವ ಕೆಲಸವನ್ನಾದರೂ ಬಿಟ್ಟು ಮದುವೆಯಾಗಿದ್ದರೆ' ಎಂದು ಹಳಹಳಿಸುತ್ತಾನೆ.

ತನ್ನ ಅಭಾಸಕ್ಕೆ ತೊಂದರೆಯಾಗುತ್ತದೆ ಎಂದು ತನ್ನ ಮದುವೆಯನ್ನು ಮುಂದೂಡುತ್ತಾ ಬರುವ ವಸಂತನಲ್ಲಿ ತತ್ವಜ್ಞಾನಿಯ ತಾಳ್ಮೆಯಿದೆ. ಆದರೆ ಅದು ಪ್ರೀತಿಗೆ ಸಹಕಾರಿಯಾಗುವುದಿಲ್ಲ ಅದಕ್ಕಾಗಿ ಉಮೆ 'ನಿಮಗೆ ವಿದ್ಯೆಯಿದೆ ಆದರೆ ಬುದ್ಧಿಯಿಲ್ಲ, ವಿಚಾರವಿದೆ ವಿವೇಕವಿಲ್ಲ ನಿಯಮಾವಳಿಗಳ ಹಂದರವಾಗಿದೆ ನಿಮ್ಮ ತಲೆ, ಆದೆಲ್ಲ ಹೋಗಿ ಜ್ಞಾನ ಹುಟ್ಟುವವರೆಗೂ ನಿಮ್ಮ ಮೆದುಳಿಗೆ ಯಾವ ಬೆಲೆಯೂ ಇಲ್ಲ' ಎಂದು ಬೌದ್ಧಿಕತೆಯ ಅಪಾಯವನ್ನು ತಿಳಿಸುತ್ತಾಳೆ. ಈ ಬೌದ್ಧಿಕತೆಯ ಅಪಾಯದಿಂದ, ಭಾವನಾರಹಿತ ಬದುಕಿನಿಂದ ತೀವ್ರವಾದ ದುಃಖಕ್ಕೆ ಈ ಪಾತ್ರಗಳು ಒಳಗಾಗುತ್ತವೆ.

ಈ ಕಾದಂಬರಿಯಲ್ಲಿ ಬರುವ ಪಾತ್ರಗಳೆಲ್ಲ ಜನಸಾಮಾನ್ಯರೇ ಅವರ ಬದುಕಿನ ಏರು ಪೇರುಗಳನ್ನು ಕಾದಂಬರಿ ಸೂಕ್ತವಾದ ವಿವರಗಳೊಂದಿಗೆ ಕಲಾತ್ಮಕವಾಗಿ ಸೆರೆಹಿಡಿಯುತ್ತದೆ.

ಬೌದ್ಧಿಕತೆಯ ಭಾರದಿಂದ ಬಳಲುವ ಕೆಲವು ಪಾತ್ರಗಳಿಗೆ ಭಾವನೆಗಳಿಗೆ ಒತ್ತು ಕೊಟ್ಟು ಜೀವನ ಸುಖವನ್ನು ಕಾಣುವ ಜಗದಾಂಬಾ ಸರಿಯಾದ ಉತ್ತರವಾಗುವುದು ಮಹತ್ವದ್ದಾಗಿದೆ.

# ಜಲಪಾತ

ಜಲಪಾತ ಭೈರಪ್ಪನವರ ಐದನೆಯ ಕಾದಂಬರಿ. ವಂಶವೃಕ್ಷದ ನಂತರ ರಚಿತವಾದುದು. ಈ ಕಾರಣದಿಂದಲೇ ಇರಬೇಕು. ವಂಶವೃಕ್ಷದ ಹಲವಾರು ವಿಚಾರಗಳು ಈ ಕಾದಂಬರಿಯಲ್ಲಿಯೂ ನುಸುಳಿವೆ. ಗಾತ್ರದ ದೃಷ್ಟಿಯಿಂದ ಜಲಪಾತ ಒಂದು ಪುಟ್ಟ ಕಾಂದಬರಿ. ೧೨೮ ಪುಟಗಳನ್ನು ಹೊಂದಿದೆ. (೧೯೯೯ರ ಮುದ್ರಣ)

''ಜೀವನದ ನೈಸರ್ಗಿಕ ಮತ್ತು ಅನೈಸರ್ಗಿಕ ಪ್ರವೃತ್ತಿಗಳ ನಡುವಿನ ಘರ್ಷಣೆಯೇ ಭೈರಪ್ಪನವರ 'ಜಲಪಾತ' ಕಾದಂಬರಿಯ ವಸ್ತು ನಿಸರ್ಗ ಮತ್ತು ಜೀವ ಕ್ರಿಯೆಗಳು ಕಲೆಯಲ್ಲಿ ರೂಪುಗೊಳ್ಳುವ ಪರಿಯು ಈ ವಸ್ತುವಿನ ಇನ್ನೊಂದು ಪೈಲು. ಈ ಎರಡೂ ವಸ್ತುಗಳನ್ನು ಸಮೀಕರಿಸಿ ಅವುಗಳನ್ನು ವಿಸ್ತರಿಸಿದ ರೀತಿ ಪ್ರತೀಕಾತ್ಮಕವಾಗಿದೆ. ಅಂದರೆ ಇಲ್ಲಿ ಬರುವ ಪಾತ್ರಗಳಲ್ಲಿ ಸನ್ನಿವೇಶ ಮತ್ತು ವರ್ಣನೆಗೂ ವಾಸ್ತವಿಕವಾಗಿ ಅಸಂಬದ್ಧ, ಅನವಶ್ಯಕ ವೆನಿಸಬಹುದು. ಆದರೆ ಅವಕ್ಕೆ ಕಾದಂಬರಿಯ ವಸ್ತುವಿನ ಹೊರಗೆ ಸ್ವತಂತ್ರ ಜೀವವಿಲ್ಲ ಆದ್ದರಿಂದ ಒಟ್ಟು ಕಾದಂಬರಿಯನ್ನು ಒಟ್ಟು ವಸ್ತುವಿನ ಪ್ರತೀಕೀಕರಣವೆಂದು ನೋಡಬೇಕೇ ಹೊರತು ಜೀವನ ವಾಸ್ತವ ಚಿತ್ರಣವೆಂದು ನೋಡಲಾಗದು.'' (ಸಹಸ್ಪಂದನ, ಸಂ.ಮಾಧವಕುಲಕರ್ಣಿ ಮತ್ತು ಗೋವಿಂದರಾವ್, ಪು - ೪೪೪) ಎಂದು ಬಿ.ಟಿ.ದೇಸಾಯಿಯವರು ಈ ಕಾದಂಬರಿ ಕುರಿತು ತಮ್ಮ ವಿಚಾರಗಳನ್ನು ವ್ಯಕ್ತಪಡಿಸುತ್ತಾರೆ.

''ಸೃಷ್ಟಿ ಶಕ್ತಿಯಿಂದ ವಿಜೃಂಭಿಸುವ ಜೀವನ ಪ್ರವೃತ್ತಿ ಮತ್ತು ಆ ಶಕ್ತಿಯನ್ನು ಹತ್ತಿಕ್ಕುವ ಜೀವನ ಪರಿಸ್ಥಿತಿಯ ತಾಕಲಾಟವೇ 'ಜಲಪಾತ'ದ ಕಥಾವಸ್ತು, ಕಾದಂಬರಿಯಲ್ಲಿ ಈ ವಸ್ತುವನ್ನು ಉದ್ದಕ್ಕೂ ಪ್ರತೀಕಗಳ ಮೂಲಕ ಬೆಳೆಸಿರುವುದು ಇಲ್ಲಿನ ವೈಶಿಷ್ಟ್ಯ. ಕೃತ್ರಿಮತೆಯಿಂದ ಬಿಡಿಸಿಕೊಳ್ಳುವುದಕ್ಕಾಗಿ ಹೋರಾಡುವ ಇಲ್ಲಿನ ನಾಯಕಿಯನ್ನು ಕಾದಂಬರಿಯುದ್ದಕ್ಕೂ ಪ್ರಕೃತಿಯೊಡನೆ ಹೇಳಿಕೊಂಡು ಹೋಗಲಾಗಿದೆ. '' (ಸಹಸ್ಪಂದನ, ಸಂ.ಮಾಧವಕುಲಕರ್ಣಿ ಮತ್ತು ಗೋವಿಂದರಾವ್, ಪು - ೪೫೦) ಎಂದು ಶಿವರಾಮು ಕಾಡನಕುಪ್ಪೆಯವರು ಅಭಿಪ್ರಾಯ ಪಡುತ್ತಾರೆ.

ಮೇಲಿನ ಎರಡೂ ಹೇಳಿಕೆಗಳಲ್ಲಿ ಸಾಮ್ಯತೆ ಇದೆ. ಪ್ರತೀಕಗಳ ಮೂಲಕ ಕಾದಂಬರಿಯ ವಿಷಯ ಅಭಿವ್ಯಕ್ತಗೊಂಡಿದೆ.

ಮುಂಬಯಿಯನ್ನು ದೇಶದ ಕೇಂದ್ರ, ಅಥವಾ ಅದೇ ದೇಶವೆಂದು ಭಾವಿಸಿರುವ ಶ್ರೀಪತಿ ತಾನು

ಮುಂಬಯಿಗೆ ಬೆಳೆಸಿದ ಪ್ರಯಾಣಗಳ ವಿವರಗಳೊಂದಿಗೆ ಕಾದಂಬರಿ ಪ್ರಾರಂಭವಾಗುತ್ತದೆ. ಭಾರತದ ಬೃಹತ್ ನಗರಗಳಲ್ಲಿ ಒಂದಾದ ಮುಂಬಯಿ ಎಲ್ಲ ರೀತಿಯಿಂದಲೂ ದೇಶದ ವ್ಯಾಪಕತೆಯನ್ನು ಭಾರತದ ಬೇರೆ ಬೇರೆ ಭಾಗಗಳಿಂದ ಉದ್ಯೋಗಗಳನ್ನು ಹುಡುಕಿಕೊಂಡು ಮುಂಬಯಿಗೆ ಜನರು ಬರುವುದು ಸಾಮಾನ್ಯವಾಗಿದೆ. ಜನರ ವಿಪರೀತ ದಟ್ಟಣೆಯಿಂದ ಮುಂಬಯಿಯ ಬದುಕು ಅಸಹನೀಯವಾಗಿರುವುದು ವಾಸ್ತವ ಅಂಶವಾಗಿದೆ. ಆಧುನಿಕ ಬದುಕಿನಲ್ಲಿ ಅದೂ ಮುಂಬಯಿಯಂಥ ಪಟ್ಟಣದಲ್ಲಿ ಮನುಷ್ಯನ ಸ್ಥಿತಿಯನ್ನು ಶ್ರೀಪತಿಯ ಮಾತುಗಳಲ್ಲಿಯೇ ತಿಳಿದುಕೊಳ್ಳಬಹುದು.

''ನರಜಂತುಗಳನ್ನು ದ್ವೇಷಿಸುವುದನ್ನು ನಾನು ಮೊದಲು ಕಲಿತುದು ಈ ರೈಲಿನಲ್ಲಿ ಎಂದರೆ ಮುಂಬಯಿಯಲ್ಲಿ. ಮುಂಬಯಿಯಲ್ಲಿಯೇ ಒಂದು ರೈಲು ಗಾಡಿ. ಪ್ರತಿಕ್ಷಣವೂ ಏರುತ್ತಿರುವ ಗಡಬಡ ವೇಗದಲ್ಲಿ ಓಡುತ್ತದೆ. ಓಡುವ ಗಾಡಿಯೊಳಗೆ ಲಕ್ಷ ಲಕ್ಷ ಜನ ಪ್ರವಾಸಿಗರು ತೂರಿಕೊಳ್ಳುತ್ತಾರೆ. ತಿಪ್ಪೆಯ ನೊಣಗಳು ಒಂದರ ಮೇಲೊಂದು ತುಂಬಿಕೊಳ್ಳುವಂತೆ ಯಾರು ಯಾರ ಮೇಲೂ ಕಂಪ್ಲೇಂಟ್ ಮಾಡುವಂತಿಲ್ಲ. ರೈಲು ಒಂದು ನಿಮಿಷ ವಿರಾಮ ಕೊಟ್ಟು ನಿಲ್ಲುತ್ತದೆ. ಇಡೀ ನೊಣಗಳ ಗುಂಪು ಸುಂಯ್ ಎಂದು ಹೊರಗೆ ಹಾರಿ ಮತ್ತೊಂದು ಗಾಡಿ ಹತ್ತುತ್ತದೆ. ಮುಂಬಯಿಯಲ್ಲಿ ವಾಸವೆಂಬುದು ಒಂದು ಸ್ಥಿತಿಯಲ್ಲಿ ದಿಕ್ಕುಗೆಟ್ಟ ಪ್ರಕ್ರಿಯೆ'' (ಜಲಪಾತ, ಪು-೮) ಈ ಮಾತುಗಳು ಮುಂಬಯಿ ಒಂದು ಮುಖವನ್ನು ನಮಗೆ ಪರಿಚಯಿಸುತ್ತದೆ.

ಜಲಪಾತ ಕಾದಂಬರಿಯ ನಾಯಕ ಶ್ರೀಪತಿ ಅವನ ಮತ್ತೊಂದು ಹೆಸರು ಭೂಪತಿ. ಅವನ ಹೆಂಡತಿಯ ಹೆಸರು ವಸುಂಧರಾ. ಈ ಹೆಸರುಗಳು ಪ್ರಕೃತಿಗೆ ಸೇರಿದಂಥವುಗಳಾಗಿವೆ. ಆದ್ದರಿಂದಲೇ ಸೃಷ್ಟಿ ಶಕ್ತಿ ಮತ್ತು ಜೀವಸೃಷ್ಟಿ ಇವರಿಬ್ಬರಿಗೂ ಪ್ರತೀಕವಾಗುತ್ತದೆ.

ಶ್ರೀಪತಿ ಮುಂಬೈನಗರದ ಮಾಹಿಮ್‌ನಲ್ಲಿ ವಾಸಮಾಡುತ್ತಾನೆ. ಅಲ್ಲಿನ ಬುಟಾನಿ ಪಬ್ಲಿಸಿಟಿ ಕಂಪನಿಯಲ್ಲಿ ಚಿತ್ರ ಕಲಾವಿದನಾಗಿ ಕೆಲಸಮಾಡುತ್ತಾನೆ. ಆತನಿಗೆ ಹೆಜ್ಜೆ ಹೆಜ್ಜೆಗೆ ಮುಂಬಯಿಯ ಕೃತ್ರಿಮ ಬದುಕಿನ ಬಗ್ಗೆ ಬೇಸರವಾಗುತ್ತದೆ.

ಶ್ರೀಪತಿಗೆ ತನ್ನ ಗ್ರಾಮದ ನೆನಪು ಆಗಾಗ ಕಾಡುತ್ತದೆ. ತನ್ನ ಶಿಕ್ಷಣ ಎಷ್ಟೊಂದು ಸರಳ ರೀತಿಯಿಂದ ಪ್ರಾರಂಭವಾಯಿತು ಎಂಬುದನ್ನು ಅವನ ನೆನಪಿಸಿಕೊಳ್ಳುತ್ತಾನೆ.

''ಐದನೆಯ ವರ್ಷದಲ್ಲಿ ನನಗೆ ಜುಟ್ಟು ಬಿಡಿಸಿ ಅಣ್ಣ (ತಂದೆ) ತೊಡೆಯ ಮೇಲೆ ಕೂರಿಸಿ ಕೊಂಡು ಬೆಳ್ಳಿಯ ರೂಪಾಯಿಯಲ್ಲಿ ಜೇನು ಪತಪ್ಪ ನೆಕ್ಕಿಸಿ ಅಕ್ಕಿಯ ಮೇಲೆ 'ಶ್ರೀ ಓಂ ನಾಮ' ತಿದ್ದಿಸುವ ಮೊದಲೆ ನನಗೆ 'ಶಾಂತಾಕಾರಂ ಭುಜಗಶಯನಂ' ಹೇಳಿ ಕೊಟ್ಟಿದ್ದರು. ಅದೌ 'ದೇವಕಿ ದೇವಿ ಗರ್ಭಜನನಂ' ಬರುತ್ತಿತ್ತು 'ಭಜಗೋಂವಿಂದಂ' ಮೂವತ್ತೊಂದು ಪದ್ಯವನ್ನು ಹೇಳುತ್ತಿದ್ದೆ. 'ಶ್ರೀವನಿತೆಯರಸನೆ' ಅಲ್ಲದೆ 'ಅಮರಾನಿರ್ಜರಾ ದೇವ' ವನ್ನು ತಕ್ಕಮಟ್ಟಿಗೆ ಹೆಳುವ ಮಟ್ಟಕ್ಕೆ ಬಂದಿದ್ದೆ, ಒಂದು ಕಾಸೂ ಖರ್ಚಿಲ್ಲ ನಾನು ಕಲಿತದ್ದು ವಿದ್ಯೆಯೇ ಅಲ್ಲವೇ ?'' (ಜಲಪಾತ, ಪು-೧೦)

ಬದಲಾದ ಸಾಮಾಜಿಕ ಪರಿಸ್ಥಿತಿಯಲ್ಲಿ ಪಟ್ಟಣ ಸಂಸ್ಕೃತಿಯಲ್ಲಿ ಇಂದು ವಿದ್ಯಾಭ್ಯಾಸ ಮಾಡಿಸುವುದು ಕಷ್ಟಕರವಾದ ಸಂಗತಿಯಾಗಿದೆ. ಅಪ್ಪಟ ಭಾರತದ ಮತ್ತು ಕರ್ನಾಟಕದ ಸಂಸ್ಕೃತಿಗೆ ಅನುಗುಣವಾಗಿ

ನಡೆಯುತ್ತಿದ್ದ ಶಿಕ್ಷಣ ಪದ್ಧತಿ ಇಂದು ಆಂಗ್ಲಮಯವಾಗಿದೆ. ಇಂಗ್ಲೀಷನ್ನು ಕಲಿಯದಿದ್ದರೆ ಶಿಕ್ಷಣವೇ ಅಲ್ಲವೆಂಬ ಸ್ಥಿತಿ ಇಂದಿನದು ಆದಕ್ಕೆ ತನ್ನ ಮಗ ವಿಶ್ವನ ಮೊದಲ ತರಗತಿಯ ಎ.ಬಿ.ಸಿ.ಡಿ.ಗೆ ಮೂವತ್ತು ರೂಪಾಯಿ ಕೊಡಬೇಕಾದ ಸಂದರ್ಭವನ್ನು ಶ್ರೀಪತಿ ನೆನಪಿಸಿಕೊಳ್ಳುತ್ತಾನೆ. ಮಕ್ಕಳಿಗೆ ಆಡಲೂ ಸ್ಥಳವಿಲ್ಲದಂಥ ಕಿರಿದಾದ ಮನೆಗಳು, ಇದೆಲ್ಲವನ್ನು ನೋಡಿ ಅವನಿಗೆ ಮುಂಬಯಿ ಎಂದರೆ ಏನು ಎಂಬ ಪ್ರಶ್ನೆ ಮೂಡುತ್ತದೆ. ವಸುಕೂಡಾ ಕೆಲಸಕ್ಕೆ ಹೋದರೆ ತನ್ನನ್ನು ಮತ್ತು ಮಗನನ್ನು ನೋಡಿಕೊಳ್ಳುವವರಾರು ಎಂಬ ಚಿಂತೆ ಕಾಡುತ್ತದೆ. ಆದರೆ ವಸುಂಧರಾಳಿಗೆ ಕೆಲಸಕ್ಕೆ ಹೋಗಲು ಉತ್ಸಾಹವೇನೂ ಇಲ್ಲ.

ವಿಶ್ವನ ನಂತರ ಮತ್ತೆ ಬಸುರಿಯಾಗುವ ವಸುಂಧರಾ ಗರ್ಭಪಾತ ಮಾಡಿಸಿಕೊಳ್ಳುತ್ತಾಳೆ. ಗರ್ಭಪಾತ ಮಾಡುವುದು ಈಗ ನಿರ್ಭಾವುಕ ಕ್ರಿಯೆಯಾಗಿರುವುದನ್ನು ಗಮನಿಸುತ್ತಾನೆ.

ಭಾರತೀಯ ಸಂಸ್ಕೃತಿಯಲ್ಲಿ ಸಂಗೀತಕ್ಕೆ ಮತ್ತು ಚಿತ್ರಕಲೆಗೆ ತನ್ನದೇ ಆದ ಸ್ಥಾನವಿದೆ. ಈ ಕಾದಂಬರಿಯ ನಾಯಕ ಒಬ್ಬ ಶ್ರೇಷ್ಠ ಚಿತ್ರ ಕಲಾವಿದ. ಅವನ ಹೆಂಡತಿಯೂ ಕೂಡಾ ಒಳ್ಳೆಯ ಸಂಗೀತಗಾರ್ತಿಯಾಗುತ್ತಾಳೆ.

ಈ ಕಾದಂಬರಿಯಲ್ಲಿ ಬರುವ ರೆಬೆಲ್ಲೋ ಆಧುನಿಕ ಬದುಕಿಗೆ ಹೊಂದಿಕೊಂಡವಳು. ಬದುಕು ಹೇಗೆ ಬರುತ್ತದೆಯೋ ಹಾಗೆ ಸ್ವೀಕರಿಸುವ ಸ್ವಭಾವ 'ನನ್ನಲ್ಲಿರುವುದು ನೀವು ಏನು ಕೇಳಿದರೂ ಕೊಟ್ಟೇನು' ಎಂದು ಶ್ರೀಪತಿಗೆ ಹೇಳುವ ಮೂಲಕ ಮಾತಿನ ಮೂಲಕವೇ ಅವಳ ಮನೋಭಾವವನ್ನು ತಿಳಿಯಬಹುದಾಗಿದೆ.

ಮತ್ರಾನಿಯವರ ಮದುವೆ ಸಂದರ್ಭ ಆಧುನಿಕತೆಯ ಕೃತ್ರಿಮತೆಯನ್ನು ಚೆನ್ನಾಗಿ ಬಿಂಬಿಸುತ್ತದೆ. ಗ್ರಾಮಗಳಲ್ಲಿ ನಡೆಯುವ ಮದುವೆಯ ಸಡಗರ ಸಂಭ್ರಮ ಮತ್ತು ಆನಂದವನ್ನು ಈ ಮದುವೆಗಳು ತರಲು ಸಾಧ್ಯವಿಲ್ಲದಂಥ ಪರಿಸ್ಥಿತಿಯನ್ನು ಇವು ಸೂಚಿಸುತ್ತವೆ.

"ಬರಿ ಗಡಿಬಿಡಿ ಅಷ್ಟರಲ್ಲಿ ವಿಶ್ವ ಹಸಿವೆಂದು ಅವನ ಅಮ್ಮನನ್ನು ಕೊರೆಯಲು ಶುರು ಮಾಡಿದ್ದ ಆದರೆ ನಾವು ಏನೂ ಮಾಡುವಂತಿರಲಿಲ್ಲ ಹತ್ತು ಗಂಟೆಯ ವೇಳೆಗೆ ಶಾಸ್ತ್ರ ಶುರುವಾಯಿತು ಸಭಾಂಗಣದ ಮಧ್ಯೆ ಕೆಂಪು ಮಿನುಗುವ ಕಾಗದದ ಹೂಮಾಲೆಗಳಿಂದ ರಚಿಸಿ ವಿದ್ಯುತ್ ಬಲ್ಬುಗಳಿಂದ ಹೊಳೆಯುತ್ತಿದ್ದ ಮಂಟಪದ ಮಧ್ಯದಲ್ಲಿ ಒಂದು ಅಗ್ಗಿಷ್ಟಿಕೆಯ ಹೋಮಕುಂಡವನ್ನು ಹೊತ್ತಿಸಿದರು ವಧೂವರರು ಜೊತೆಗೆ ಇನ್ನೊಬ್ಬ ವೃದ್ಧ ದಂಪತಿಗಳು ಅದರ ಸುತ್ತ ಕುಳಿತರು ಒಬ್ಬ ಪುರೋಹಿತರು ಅದೇನು ಮಂತ್ರ ಹೇಳಿದರೋ ಗದ್ದಲದಲ್ಲಿ ಯಾರಿಗು ಕೇಳಲಿಲ್ಲ ಕನ್ಯೆಗೆ ಸುಮಾರು ಮೂವತ್ತೈದರ ಪ್ರಾಯ, ಆಸ್ಪತ್ರೆಯ ಲೇಡಿ ಡಾಕ್ಟರಿಗೆ ಇರಬೇಕಾದ ಗಾಂಭೀರ್ಯವೂ ಆತ್ಮವಿಶ್ವಾಸವೂ ಆಕೆಯ ಮುಖದ ಮೇಲಿದ್ದವು ರೋಜ, ಲಿಪ್‌ಸ್ಟಿಕ್ ಮೊದಲಾದ ಸಕಲ ಸಾಧನಗಳನ್ನು ತಿಕ್ಕಿದ್ದ ಆಕೆ ವಾಸ್ತವವಾಗಿಯೂ ಕೆಂಪಗ್ಗಿರು ನೈಲಾನ್ ವೇಷದಲ್ಲಿದ್ದ ಅವರ ಒಳವಸ್ತ್ರಗಳೇ ನಿಜವಾದ ವಸ್ತ್ರಗಳಾಗಿದ್ದವು. ಅರ್ಧಗಂಟೆಯಲ್ಲಿ ಮದುವೆ ಮುಗಿದೇ ಹೊಯಿತು... ಕಂಟ್ರಾಕ್ಟ್ ತೆಗೆದುಕೊಂಡಿದ್ದ ಕಂಪನಿಯ ಆಳುಗಳು ಒಂದು ಕಡೆಯಿಂದ ಎಲ್ಲರಿಗೂ ಐಸ್‌ಕ್ರೀಂ ಕೊಡುತ್ತಾ ಬಂದರು ನಮಗೂ ಅದು ಬಂದಿತು ವಿಶ್ವ ತುಂಬಾ ಖುಷಿಯಿಂದ ತಿಂದ" (ಜಲಪಾತ, ಪು-೩೨)

ಕೇವಲ ಐಸ್‌ಕ್ರೀಂಮನಲ್ಲಿ ಮುಗಿಯುವ ಇದೆಂಥಹ ಮದುವೆ? ಬಂದವರಿಗೆ ಒಂದು ಊಟವನ್ನು

ಹಾಕದಿರುವ ಈ ಬೊಂಬಾಯಿ ಮದುವೆಯನ್ನು ಐಸ್‌ಕ್ರೀಂ ಮದುವೆಯೆಂದು ಶ್ರೀಪತಿ ಗೆಲಿ ಮಾಡುತ್ತಾನೆ. 'ಸುಖಾಹಾರ ಗೃಹ' ಎಂಬ ಹೋಟೆಲ್ಲಿನಲ್ಲಿ ಊಟ ಮಾಡಿ ಮನೆಗೆ ಹಿಂತಿರುಗುವ ಸಂದರ್ಭದಲ್ಲಿ ಗ್ರಾಮದಲ್ಲಿ ತನ್ನ ಮದುವೆಯಾದ ಸಂದರ್ಭವನ್ನು ಸ್ಮರಿಸಿಕೊಳ್ಳುತ್ತಾನೆ.

'' ಇಷ್ಟಾದರೂ ಮಾವ ಎಂಟು ಮೂಟೆ ಅಕ್ಕಿ ಹೊಂದಿಸಿದ್ದ ಐದು ದಿನ ಒಂದೇ ಸಮನೆ ದಿನಕ್ಕೆ ಇನ್ನೂರಕ್ಕೆ ಕಡಿಮೆ ಇಲ್ಲದಂತೆ ಜನಗಳು ಹೊಟ್ಟೆ ತುಂಬ ಊಟ ಮಾಡಿದರು ಇಷ್ಟೆಂದು ಜನ ಕರೆಸಿ ಯಾಕೆ ದುಂದು ಮಾಡಿದೆ ? ಎಂದು ಸುಬ್ಬು ಕೇಳಿದುದಕ್ಕೆ ಮಾವ ಶಾಂತವಾಗಿ ಕೊಟ್ಟ ಉತ್ತರ ರೂಮಿನಲ್ಲಿದ್ದ ನನ್ನ ಕಿವಿಗೆ ಕೇಳಿತು. ಸುಬ್ಬು ಮದುವೆ ಅಂದ್ರೆ ಏನು ಅಂತ ತಿಳ್ಕಂಡೀದಿಯಾ? ನಾವು ಹೆಣ್ಣಿಗೆ ಗಂಡಿಗೆ ಏನು ಕೊಟ್ಟರೂ ಅವರಿಗೆ ಉಳಿಯೋಲ್ಲ ಅವರವರ ಯೋಗದಲ್ಲಿ ಭಗವಂತ ಬರೆದದ್ದೇ ಅವರಿಗೆ, ಮದುವೆಯಲ್ಲಿ ಎಷ್ಟು ಜನ ಊಟ ಮಾಡಿ ತೃಪ್ತಿಯಿಂದ ಹೋಗುತ್ತಾರೋ ಆ ಶಾಂತಿಯೊಂದೆ ವಧೂವರರಿಗೆ ಆಶೀರ್ವಾದ ಅನ್ನಶಾಂತಿ ನಡೆಯದೆ ಯಾವ ಕಾರ್ಯವೂ ಸಫಲವಾಗೋದಿಲ್ಲ '' (ಜಲಪಾತ, ಪು-೨೪)

ಅನ್ನದ ಮೇಲೆ ತನ್ನ ಮಾವನವರಿಗಿರುವ ಗೌರವವನ್ನು ಶ್ರೀಪತಿ ನೆನಪಿಸಿಕೊಳ್ಳುತ್ತಾನೆ. ಶ್ರೀಪತಿಯ ಮಾವ, ಅತ್ತೆ, ತಂದೆ, ಹೆಂಡತಿ ವಸು ಮತ್ತು ನಾದಿನಿ, ಶ್ರೀಪತಿ, ಬೆಟ್ಟೆಗೌಡರು, ಅಗ್ರಹಾರದ ಶಿವನಂಯ್ಯನವರು ಬೆಟ್ಟೆಗೌಡರು, ಸೂಳೆಯರಾದ ಚಂದ್ರಿ, ದೇವಿ, ಇವರೆಲ್ಲರೂ ಖಲೆದ ತಲೆಮಾರಿನ ಮೌಲ್ಯಗಳ ಪ್ರತೀಕಗಳಾಗುತ್ತಾರೆ. ಸುಬ್ಬು ಮತ್ತು ಅವನ ಹೆಂಡತಿ ಬದಲಾಗುತ್ತಿರುವ ಹೊಸ ಮೌಲ್ಯಗಳಿಗೆ ಪ್ರತಿನಿಧಿಗಳಾಗಿದ್ದಾರೆ.

ಈ ಕಾದಂಬರಿಯಲ್ಲಿ ಬರುವ ನಾಡಗೌಡರ ಪಾತ್ರ ಅತಿವೈಜ್ಞಾನಿಕತೆಯ ದುರಂತಕ್ಕೆ ಪ್ರತೀಕವಾಗಿದೆ. ಅಪ್ಪಟ ಸಂಪ್ರದಾಯವಾದಿ ಮತ್ತು ಭಾರತೀಯ ಸಂಸ್ಕೃತಿಯ ಎರಕದಂತಿರುವ ಅವರ ಪತ್ನಿ ಸುಧಾಬಾಯಿ ನಾಡಗೌಡರ ವಿಚಾರಗಳಿಂದಲೇ ದುರಂತ ಸಾವಿಗೀಡಾಗುತ್ತಾಳೆ.

ಲೈಂಗಿಕ ಸುಖ ಮತ್ತು ಸಂತಾನೋತ್ಪತ್ತಿ ಇವೆರಡು ಪರಸ್ಪರ ಭಿನ್ನವೆಂಬ ವಿಚಾರ ಆತನದು. ಲೈಂಗಿಕ ಆಸೆಯು ಒಂದು ಜೈವಿಕ ಪ್ರವೃತ್ತಿ. ಆದರೆ ಅದರ ಉದ್ದೇಶ ಸಂತಾನೋತ್ಪತ್ತಿಯಲ್ಲ, ಮೇಲ್ಮಟ್ಟದ ಬುದ್ಧಿಶಕ್ತಿಯನ್ನು ಹೊಂದಿ ಶರೀದ ದಾರ್ಢ್ಯದಿಂದ ಇರುವ ಗಂಡಸರು ಹೆಂಗಸರು ಮಾತಾಪಿತೃಗಳಾಗಬೇಕು ಎನ್ನುವ ಅವರು ತಮ್ಮ ಹೆಂಡತಿ ಸುಧಾಬಾಯಿಗೆ ತನ್ನಿಂದ ಮಕ್ಕಳಾಗಬಾರದು ಎಂಬ ನಿರ್ಧಾರಕ್ಕೆ ಬರುತ್ತಾರೆ. ಅಪ್ರೇಶನ್‌ಕೂಡಾ ಮಾಡಿಸಿಕೊಳ್ಳುತ್ತಾರೆ. ತನಗಿರುವ ಸಕ್ಕರೆ ಕಾಯಿಲೆಯಿಂದ ತನ್ನ ಮುಂದಿನ ಸಂತಾನವೂ ತೊಂದರೆಗೆ ಸಿಲುಕಬಾರದೆನ್ನುವ ವಿಪರೀತ ಬುದ್ಧಿ. ಬೇರೆ ಪುರುಷನ ವೀರ್ಯದಿಂದ ಮಕ್ಕಳನ್ನು ಪಡೆಯುವ ಯೋಜನೆಯನ್ನು ತಿಳಿಸಿದಾಗ ಅವಳು ''ಕೆರಳಿದ ಹೆಣ್ಣು ಹುಲಿಯಂತೆ ನನ್ನ ಕೈಲಿ ಜಗಳವಾಡಿದಳು ನಾನು ವಂಶಸ್ಥರ ಮನೆಯ ಮಗಳು ನೀವು ಇಷ್ಟು ನೀಚರು ಅಂತ ಗೊತ್ತಿದ್ರೆ ನಮ್ಮ ಅಣ್ಣ ನಿಮಗೆ ನನ್ನನ್ನು ಕೊಟ್ಟು ಮದುವೆ ಮಾಡುತ್ತಿರಲಿಲ್ಲ ನಾನು ಪತಿವ್ರತೆ.'' (ಜಲಪಾತ, ಪು-೧೪೦) ಎನ್ನುವ ಅವಳು ಚಲಿಸುವ ರೈಲಿಗೆ ಸಿಕ್ಕು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.

ಸುಧಾಬಾಯಿ ತನ್ನ ನಂಬುಗೆಯನ್ನು ಬದಲಾಯಿಸಿಕೊಳ್ಳುವುದಿಲ್ಲ. ದೇವರ ಹೆಸರು ಹೇಳಿ ಬ್ರಹ್ಮಚರ್ಯ ಮಾಡೋಣವೆಂದರೆ ಅವಳು ಒಪ್ಪುತ್ತಾಳೆ. ಮಕ್ಕಳು ಬೇಡವಾದ ಸಂಯೋಗವೆಂದರೆ ಅವಳು

ಒಪ್ಪುವುದಿಲ್ಲ ಈ ನಂಬಿಕೆ ಅವಳಲ್ಲಿ ಶತಮಾನಗಳಿಂದ ಬಂದಿದೆ. ಮಕ್ಕಳು ಹೇಗಿದ್ದರೂ ಸರಿ ಹುಟ್ಟಬೇಕು ಆದರೆ ಹುಟ್ಟದೇ ಇರಬಾರದು ಎನ್ನುವ ಅವಳ ಮನಸ್ಸನ್ನು ಅರಿತುಕೊಂಡ ಅವಳ ಪತಿ ನಾಡಗೌಡ ಆರೋಗ್ಯವಂತ ಪುರುಷನ ವೀರ್ಯದಿಂದ, ಪಶುಗಳಿಗೆ ಗರ್ಭ ಧರಿಸುವ ರೀತಿಯಲ್ಲಿ ಅವಳಿಗೂ ಇಂಜೆಕ್ಷನ್ ಮೂಲಕ ಗರ್ಭಧರಿಸಿಕೊಳ್ಳುವ ಉಪಾಯ ಹೇಳುತ್ತಾನೆ. ಗಂಡ ಅಪರೇಶನ್ ಮಾಡಿಸಿಕೊಂಡ ನಂತರ ಅವಳು ಪತಿಯೊಂದಿಗೆ ಸಂಭೋಗಕ್ಕು ಒಪ್ಪುವುದಿಲ್ಲ ಅವಳಿಗೆ ಗಂಡ ನೀಚ ಪ್ರವೃತ್ತಿಯ ವ್ಯಕ್ತಿ ಎನಿಸುತ್ತದೆ. ಅವನ ವೈಜ್ಞಾನಿಕ ವಿಚಾರಗಳಂತೂ ಅವಳಿಗ ಅರ್ಥವಾಗುವುದಿಲ್ಲ. ಧಾರ್ಮಿಕ ಪ್ರಭಾವದ ಪ್ರೇರಣೆಗಳಲ್ಲಿಯೇ ಚಿಂತಿಸುವ ಅವಳು "ಸುಧಾ ನಿನ್ನ ಹಳೆಯ ನಂಬಿಕೆಯನ್ನು ಬಿಡು, ವಂಶ, ಕುಲ ಇವೆಲ್ಲ ಮೂಢನಂಬಿಕೆ ದೃಢಕಾಯನೂ ದೀರ್ಘಾಯುವೂ........." (ಜಲಪಾತ, ಪು-೧೪೧) ಎಂದು ಹೇಳಲು ಹೊರಟ ಗಂಡನ ಮಾತುಗಳನ್ನು ಅರ್ಧಕ್ಕೆ ತಡೆದು "ನನಗೆ ದೃಢಕಾಯದ ಮಗು ಬ್ಯಾಡ ಅದು ಹುಟ್ಟಿದ ಮೂರು ದಿನಕ್ಕೆ ಸತ್ತರೂ ಸೈ, ಭಗವಂತ ಆಯುಸ್ಸು ಬರೆದದ್ದಕ್ಕೆ ಯಾರೂ ಏನೂ ಮಾಡೂ ಹಂಗಿಲ್ಲ ಅದು ಧರ್ಮದಿಂದ ನಮಗೆ ಹುಟ್ಟಿದ ಮಗು ಆಗಬೇಕು, ನೀವು ಇಂಥ ಚಂಡಾಲರು ಅನ್ನೊದು ತಿಳಿದ ಮ್ಯಾಲ ನಿಮ್ಮ ಕೂಡ ಸಂಸಾರ ಮಾಡಬಾರದು" ಎನ್ನುತ್ತಾಳೆ.

ಹಲವು ಮೌಲ್ಯಗಳಿಗೆ ಬದ್ಧವಾದ ಸಾಮಾಜಿಕ ವ್ಯವಸ್ಥೆಯನ್ನು, ಧಾರ್ಮಿಕವ್ಯವಸ್ಥೆಯನ್ನು ಕೇವಲ ವೈಜ್ಞಾನಿಕ ಸ್ತರದಿಂದ ಬದಲಾಯಿಸುತ್ತೇನೆಂದು ಹೊರಡುವುದು ಮೂರ್ಖತನವಾಗುತ್ತದೆ. ತನ್ನ ಹೆಂಡತಿಯ ಮನಸ್ಸಿನ ಮೇಲೆ ಶತಮಾನದ ನಂಬುಗೆಗಳ ಪ್ರಭಾವವಿರುವುದನ್ನು ನಾಡಗೌಡ ಗುರುತಿಸದೇ ಹೋಗುತ್ತಾನೆ. ದಾಂಪತ್ಯ ಸುಖವೇ ಬೇರೆ, ವಂಶೋತ್ಪತ್ತಿಗೂ ಅದಕ್ಕೂ ಸಂಬಂಧವಿಲ್ಲವೆಂದು ಭಾವಿಸುವ ಆತನ ವಿಚಾರಗಳು ದುರಂತಕ್ಕೆ ಎಡೆಮಾಡಿಕೊಡುತ್ತವೆ. ವ್ಯಕ್ತಿಯ ಮಾನಸಿಕ ಸಂಸ್ಕಾರವನ್ನು ಒಮ್ಮಿಂದೊಮ್ಮಲೇ ಬದಲಾಯಿಸುವುದು ಸಾಧ್ಯವಿಲ್ಲ. ಅಂತೆಯೇ ಸಮಾಜವೂ ಕ್ಷಿಪ್ರವಾಗಿ ಇಂಥ ಬದಲಾವಣೆಗಳನ್ನು ಯಾವ ನೈತಿಕ ಸ್ತರದ ಹಿನ್ನಲೆಯಲ್ಲಿಯೂ ಒಪ್ಪಿಕೊಳ್ಳಲು ಸಾಧ್ಯವಾಗುವುದಿಲ್ಲ. ಮನುಷ್ಯ ಸಮಾಜದ ಬದುಕನ್ನು ಪಶುಗಳ ಬದುಕಿನ ಸ್ತರಮೇಲೆಯೇ ಅರ್ಥೈಸಲು ಹೊರಡುವ ನಾಡಗೌಡನಂಥ ವ್ಯಕ್ತಿಗಳು ಕಾದಂಬರಿಯಲ್ಲಿ ಕಂಡ ದುರಂತವನ್ನು ತಾವಾಗಿಯೇ ಆಹ್ವಾನಿಸುತ್ತಾರೆ.

# ಧಾರ್ಮಿಕ ಹಾಗೂ ತಾತ್ವಿಕ ವಿಚಾರಗಳು

ಮಾನವ ಸಂಸ್ಕೃತಿಯ ಇತಿಹಾಸದಲ್ಲಿ ಧರ್ಮ ಮತ್ತು ತತ್ವಜ್ಞಾನಕ್ಕೆ ಮಹತ್ವದ ಸ್ಥಾನವಿದೆ. ಧರ್ಮ ಮನಷ್ಯನ ಸಂಬಂಧವನ್ನು ದೈವಿಕ ವಿಚಾರಗಳೊಂದಿಗೆ ಸೇರಿಸುವ ಒಂದು ಸಾಧನವಾಗಿದೆ. ಪ್ರಪಂಚದ ಬೇರೆ ಬೇರೆ ಪ್ರದೇಶಗಳಲ್ಲಿ ಮನುಷ್ಯನ ಅನುಭಾವದೊಂದಿಗೆ ಈ ವಿಚಾರ ಬೆಳೆದು ಬಂದಿದೆ ಸರ್ವಶಕ್ತವಾದ ಒಂದು ಶಕ್ತಿಯನ್ನು ನಂಬುವ ಮತ್ತು ಆ ಶಕ್ತಿಯನ್ನು ಆರಾಧಿಸುವ ಕ್ರಿಯೆಯನ್ನು ಪ್ರಪಂಚದಾದ್ಯಂತ ಕಾಣುತ್ತೇವೆ. ಸರ್ವಶಕ್ತನನ್ನು ದೇವರೆಂದು, ಸರ್ವಜ್ಞನೆಂದೂ, ಕಷ್ಟಗಳ ನಿವಾರಕನೆಂದು ಮುಂತಾದ ರೀತಿಯಲ್ಲಿ ಕಲ್ಪಿಸಲಾಗಿದೆ. ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ದೇವರನ್ನು ಕರೆದಿದ್ದರೂ ಅವನ ಗುಣಗಳಲ್ಲಿ, ಶಕ್ತಿಯಲ್ಲಿ ಸಾಮ್ಯತೆ ಕಂಡುಬರುತ್ತದೆ. ಧಾರ್ಮಿಕ ವಿಚಾರಗಳು ಮಾನವ ಸಮುದಾಯ ಉತ್ತಮ ಬದುಕನ್ನು ಬದಕಲು ಸಹಾಯವನ್ನು ಮಾಡಿವೆ. ಧರ್ಮವೆಂಬುದು ಹಲವು ವಿಚಾರಗಳ, ನಂಬಿಕೆಗಳ ಮತ್ತು ಪ್ರವೃತ್ತಿಗಳ ಒಟ್ಟು ಮೊತ್ತವಾಗಿದೆ. ದೇವರನ್ನು ತಿಳಿಯುವ ಹಲವು ವಿಚಾರಗಳು ತಾತ್ವಿಕ ವಿಚಾರಗಳಾಗಿರುತ್ತವೆ. ಜೀವನ ಅನುಕರಣೆಯಲ್ಲಿ ಈ ತಾತ್ವಿಕ ವಿಚಾರಗಳನ್ನು ಅಳವಡಿಸಿಕೊಂಡಾಗ ಮಾನವ ಬದುಕು ಸಾಂಸ್ಕೃತಿಕವಾಗಿ ತುಂಬಾ ಮೇಲ್ಮಟ್ಟಕ್ಕೆ ಏರುವ ಸಾಧ್ಯತೆ ತೋರುತ್ತದೆ.

ಪ್ರಾರ್ಥನೆ, ಪೂಜೆ, ಧ್ಯಾನ ಮುಂತಾದವುಗಳು ಧರ್ಮದ ಅವಿಭಾಜ್ಯ ಅಂಗಗಳೇ ಆಗಿವೆ. ಧರ್ಮದಲ್ಲಿ ವಿಶ್ವಾಸವೇ ಮುಖ್ಯವಾದದು. ದೇವರ ಅಸ್ತಿತ್ವವನ್ನು ಪ್ರತಿಯೊಂದು ಧರ್ಮಗಳು ನಂಬುತ್ತವೆ ಮತ್ತು ಆತನ ಪರಮಾಧಿಕಾರವನ್ನು ಪ್ರಶ್ನಾತೀತವಾಗಿ ಒಪ್ಪಿ ಕೊಳ್ಳುತ್ತವೆ. ಧರ್ಮದ ತಿಳುವಳಿಕೆ ಆಂತರ್ಯದ ತೃಪ್ತಿಗಾಗಿ ಇರುವಂಥಹದು ವೈಜ್ಞಾನಿಕ ತಿಳುವಳಿಕೆಗೂ ಧರ್ಮದ ತಿಳುವಳಿಕೆಗೂ ಸಾಕಷ್ಟು ವ್ಯತ್ಯಾಸಗಳಿವೆ.

'ಧರ್ಮ' ಮಾನವ ಜನಾಂಗದ ಜೀವನ ವಿಧಾನದಲ್ಲಿ ಒಂದು ವಿಶಿಷ್ಟವಾದ ಅಂಶವಾಗಿದೆ ಅವನನ್ನು ಅನಾಗರಿಕತೆಯಿಂದ, ನಾಗರಿಕ ಜೀವನಕ್ಕೆ ಕರೆದು ತಂದ, ಪ್ರಾಣಿ ಸಮುದಾಯದಿಂದ ಬೇರ್ಪಡಿಸಿದಂಥ ವಿಚಾರಗಳಲ್ಲಿ ಧರ್ಮದ ಪಾತ್ರ ಅಪಾರವಾದುದಾಗಿದೆ.

'ಧರ್ಮ' ಎಂಬ ಪದವು ಸಂಸ್ಕೃತದ ಮೂಲಧಾತು 'ಧೃ' ಎಂಬುದರಿಂದ ಬಂದಿದೆ. 'ಧೃ' ಎಂದರೆ ಸಂಸ್ಕೃತದಲ್ಲಿ 'ಧರಿಸು' (Hold), ಎತ್ತಿಹಿಡಿ (Uphold) ಅಥವಾ ಬೆಂಬಲಿಸು (Support) ಎಂದು ಅರ್ಥವಾಗುತ್ತದೆ.

'' ಧರ್ಮೋ ರಕ್ಷತಿ ರಕ್ಷಿತಃ'' (ಧರ್ಮವನ್ನು ರಕ್ಷಿಸುವವರನ್ನು ಧರ್ಮವು ರಕ್ಷಿಸುತ್ತದೆ) ''ಧಾರಣಾತ್ ಧರ್ಮ ಇತ್ಯಾಹುಃ ಧರ್ಮೋ ಧಾರಯತಿ ಪ್ರಜಾಃ '' (ಮಹಾಭಾರತ : ಕರ್ಣಪರ್ವ, ೪೯-೫೦) ಯಾವುದು ಮತ್ತೊಂದನ್ನು ಎತ್ತಿಹಿಡಿಯುವದೋ ಅಥವಾ ಇನ್ನೊಂದಕ್ಕೆ ಅಧಾರವಾಗಿ ಅದನ್ನು ರಕ್ಷಿಸುವುದೋ, ಅದು ಧರ್ಮ ಎಂದೆನಿಸಿಕೊಳ್ಳುತ್ತದೆ. ಇಷ್ಟೇ ಅಲ್ಲದೇ ಸಂಸ್ಕೃತದಲ್ಲಿ 'ಧರ್ಮ' ಶಬ್ದಕ್ಕೆ ಇನ್ನು ಹಲವು ಅರ್ಥಗಳು ಕಂಡು ಬರುತ್ತವೆ.

೧. ಮತಧರ್ಮ (Religion)ಸಾಂಪ್ರಾದಾಯಿಕ ಆಚರಣೆಗಳು
೨. ಕಾನೂನು (Law) ರೂಢಿ, ರೂಢಿಯ ಆಚರಣೆ, ಪದ್ಧತಿ, ನಿಬಂಧನೆ
೩. ಧಾರ್ಮಿಕ ಅಥವಾ ನೈತಿಕ ಪುಣ್ಯ, ಸದ್ಗುಣ, ಒಳ್ಳೆಯ ಕಾರ್ಯಗಳು
೪. ಕರ್ತವ್ಯ (Dute), ನಿಯಮಿತವಾದ ಕಾರ್ಯಶೀಲತೆ
೫. ಋಜುತ್ವ (Right) ನ್ಯಾಯ (Justice) ಧರ್ಮಶ್ರದ್ಧೆ (Piety)ಸರ್ವಸಮತೆ, ಸಮಸೃಷ್ಟಿ
೬. ಶಿಷ್ಟಾಚಾರ (Decorum) ನೈತಿಕತೆ
೭. ಸ್ವರೂಪ (Nature)
೮. ಪ್ರವೃತ್ತಿ (Dispostion)
೯. ಚಾರಿತ್ರ್ಯ, ಮೂಲಭೂತ ಲಕ್ಷಣ ಗುಣ
೧೦. ಯಜ್ಞ
೧೧. ವರ್ತನೆ (Manner)
೧೨. ಪುರುಷಾರ್ಥ (Value)

ಹೀಗೆ ಸಂಸ್ಕೃತದ 'ಧರ್ಮ' ಪದಕ್ಕೆ ವಿವಿಧ ಒಳಾರ್ಥಗಳು ಇವೆ. ಧರ್ಮ ಎಂಬ ಪದಕ್ಕೆ ಇಂಗ್ಲಿಷಿನ 'ರಿಲಿಜನ್' ಎಂಬ ಪದವನ್ನು ನಾವು ಬಳಸುತ್ತಿದ್ದರೂ ಧರ್ಮ ಎಂಬ ಪದದ ವ್ಯಾಪ್ತಿಯನ್ನಾಗಲಿ ಮತ್ತು ಅದರ ಎಲ್ಲ ಒಳಾರ್ಥಗಳನ್ನಾಗಲಿ ಈ ಪದ ನಿರ್ದೇಶಿಸುವುದಿಲ್ಲ. ಧರ್ಮ ಎಂಬ ಪದ ಭಾರತೀಯ ಸಾಮಾಜಿಕ ಬದುಕಿಗೆ ಮತ್ತು ನೀತಿ, ದರ್ಶನಗಳಿಗೆ ತೀರ ಹತ್ತಿರದ ಸಂಬಂಧವನ್ನು ಹೊಂದಿದೆ.

ಈ ಮೇಲಿನ ಅರ್ಥವನ್ನು ಒಳಗೊಂಡಂತೆ, ಪ್ರಪಂಚದ ಮುಖ್ಯ ಧರ್ಮಗಳಾದ ಹಿಂದೂ, ಇಸ್ಲಾಮ್, ಕ್ರೈಸ್ತ, ಜೈನ, ಬೌದ್ಧ, ಯಹೂದ್ಯ ಮುಂತಾದ ಧರ್ಮಗಳು ತಮ್ಮ ತಮ್ಮ ಸಿದ್ಧಾಂತಗಳನ್ನು, ಆಚರಣೆಗಳನ್ನು ಪಡೆದುಕೊಂಡಿವೆ. ಪ್ರತಿಯೊಂದು ಧರ್ಮಕ್ಕೆ ಆಯಾ ಧರ್ಮದ ವಿಚಾರಗಳನ್ನು ತಿಳಿಸುವ ಗ್ರಂಥಗಳು ರಚನೆಯಾಗಿವೆ. ಈ ಗ್ರಂಥಗಳು ಮನುಷ್ಯರಿಂದಲೇ ರಚಿತವಾಗಿದ್ದರೂ, ಅವಗಳಿಗೂ ಮಹತ್ವ

ದೈವತ್ವದ ಪ್ರಾಪ್ತಿಗಾಗಿ ಅವು ದೇವರಿಂದಲೇ ರಚಿತವಾಗಿವೇ ಎಂಬ ಮಾತನ್ನು ನಂತರ ಯಾವುದೋ ಒಂದು ಕಾಲ ಘಟ್ಟದಲ್ಲಿ ಸೇರಿಸಿರಬಹುದು.

ಆಧುನಿಕ ಯುಗದಲ್ಲಿ 'ಧರ್ಮ' ತನ್ನ ನಿಜವಾದ ಅರ್ಥವನ್ನು ಕಳೆದುಕೊಂಡು ಶೋಷಣೆಯ ಸಾಧನವಾಗಿರುವುದರಿಂದ ರಾಜಕಾರಣಕ್ಕೆ ಸಮಾನಂತರವಾಗಿ 'ಧರ್ಮಕಾರಣ'ವಾಗಿ ನಿಂತಿದೆ ಎನ್ನುವ ಅಭಿಪ್ರಾಯವಿದೆ.

ಏನೇ ಅಭಿಪ್ರಾಯಗಳಿದ್ದರೂ 'ಧರ್ಮ' ಮಾನವರಿಗೆ ದೊರೆತ ಅಮೂಲ್ಯ ವಸ್ತುವಾಗಿದೆ ಅವನ ಮನೋಭೂಮಿಕೆಯನ್ನು ಹದಗೊಳಿಸುವಲ್ಲಿ, ಸಂಸ್ಕಾರಗೊಳಿಸುವಲ್ಲಿ ಧರ್ಮ ನಿರ್ವಹಿಸಿದ ಪಾತ್ರ ಶ್ರೇಷ್ಠವಾದುದು.

ಭಾರತೀಯರನ್ನು ಮತ್ತು ಅವರ ಬದುಕನ್ನು ಹಲವು ಧಾರ್ಮಿಕ ಕೃತಿಗಳು ಸದಾ ಪ್ರೇರೆಪಿಸುತ್ತ ಬಂದಿವೆ. ವೇದಗಳು, ಉಪನಿಷತ್ತುಗಳು, ರಾಮಾಯಣ, ಮಹಾಭಾರತ, ಭಗವದ್ಗೀತೆ, ಶರಣರ ವಚನ ಸಾಹಿತ್ಯ, ಭಕ್ತಿ ಪಂಥದ ಭಕ್ತಿ, ಸಾಹಿತ್ಯ, ಪುರಾಣ, ದರ್ಶನಗಳು ನಮ್ಮ ಪರಂಪರೆಯನ್ನು ಶ್ರೀಮಂತಗೊಳಿಸಿವೆ ಋಷಿಗಳು, ಗೌತಮ ಬುದ್ಧ, ಮಹಾವೀರ, ಅಲ್ಲಮ, ಬಸವ, ಅರವಿಂದ ಮುಂತಾದವರು 'ಧರ್ಮ'ದ ಅರ್ಥವಾಪ್ತಿಯನ್ನು ತಮ್ಮದೇ ಆದ ಚಿಂತನೆಗಳಿಂದ ವಿಸ್ತರಿಸಿದ್ದಾರೆ. ಏಸು, ಪೈಗಂಬರ ಮುಂತಾದವರು ಈ ದಿಸೆಯಲ್ಲಿ ಮಹತ್ತಾದ ಸಾಧನೆಯನ್ನು ಮಾಡಿ ವಿಶ್ವ ಪರಂಪರೆಗೆ ಚಲನೆಯನ್ನು ಕೊಟ್ಟರು. ಬೈಬಲ್, ಕುರಾನ್ ಮುಂತಾದ ಧಾರ್ಮಿಕ ಗ್ರಂಥಗಳು ಧರ್ಮದ ಸ್ವರೂಪವನ್ನು ತಿಳಿಸಿದವು.

## ಭೈರಪ್ಪನವರ ಕಾದಂಬರಿಗಳಲ್ಲಿ ಧಾರ್ಮಿಕ ಹಾಗೂ ತಾತ್ವಿಕ ವಿಚಾರಗಳು

ವೈದಿಕ ಹಿಂದೂ ಧರ್ಮದಲ್ಲಿ 'ಪುನರ್ಜನ್ಮ'ದ ಬಗ್ಗೆ ಚಿಂತನೆ ಇದೆ. ಆತ್ಮವು ಕರ್ಮಾನುಸಾರ ಹುಟ್ಟು ಸಾವಿನಿಂದ ಕೂಡಿದ ಈ ಸಂಸಾರ ಚಕ್ರದಲ್ಲಿ ಬಂಧಿತನಾಗುತ್ತಾನೆ. ಆತ್ಮವು ಒಂದು ಶರೀರದಿಂದ ಮತ್ತೊಂದು ಶರೀರಕ್ಕೆ ಹೋಗುವುದನ್ನು ಪುನರ್ಜನ್ಮ ಎನ್ನುತ್ತಾರೆ.

'ಭಗವದ್ಗಿತೆ'ಯಲ್ಲಿ ಪುನರ್ಜನ್ಮ ಕುರಿತು ಈ ರೀತಿ ಇದೆ. ''ದೇಹವುಳ್ಳ ಆತ್ಮನಿಗೆ ಈ ದೇಹದಲ್ಲಿ ಬಾಲ್ಯ, ಯೌವ್ವನ, ಜರಾವಸ್ಥೆಗಳು ಹೇಗೆ ಉಂಟಾಗುವವೋ ಹಾಗೆಯೇ ಬೇರೆ ದೇಹದ ಪ್ರಾಪ್ತಿಯೂ ಉಂಟಾಗುತ್ತದೆ (೨:೧೨.೧೩) ಗೀತೆಯ ಪ್ರಕಾರ ಪುನರ್ಜನ್ಮ ಸಹಜವಾಗಿದೆ.''

''ಮನುಷ್ಯನು ಹಳೆಯ ಬಟ್ಟೆಯನ್ನು ಹೇಗೆ ಬಿಟ್ಟು ಬೇರೆ ಹೊಸ ವಸ್ತ್ರಗಳನ್ನು ತೆಗೆದುಕೊಳ್ಳುತ್ತಾನೋ ಹಾಗೆಯೇ ದೇಹವನ್ನು ಹೊಂದಿರುವ ಆತ್ಮವು ಜೀರ್ಣವಾದ ಶರೀರಗಳನ್ನು ಬಿಟ್ಟು ಬೇರೆ ಹೊಸ ಶರೀರಗಳನ್ನು ಹೊಂದುತ್ತವೆ.'' (೨:೨೨)

ಕರ್ಮಫಲವನ್ನು ಅನುಭವಿಸಿ ಮುಕ್ತಿಯನ್ನು ಪಡೆಯುವವರೆಗೂ ಪನರ್ಜನ್ಮಗಳನ್ನು ಆತ್ಮನು ಹೊಂದುತ್ತಾಲೇ ಇರುತ್ತಾನೆ.

ಹಿಂದೂ ಧರ್ಮದ ಈ ಪುನರ್ಜನ್ಮದ ವಿಚಾರ ನಾಯಿ ನೆರಳು ಕಾದಂಬರಿಯಲ್ಲಿ ಮೂಡಿ ಬಂದಿದೆ.

'ಪುನರ್ಜನ್ಮ'ದ ವಿಚಾರವನ್ನು ಒಂದು 'ಧಾರ್ಮಿಕ''ತಾತ್ವಿಕ' ವಿಚಾರವಾಗಿ ನಂಬಿದಾಗ ಅಂಥ ಸಮಸ್ಯೆಗಳೇನೂ ಉದ್ಭವಿಸುವುದಿಲ್ಲ ಅದಕ್ಕೆ ಬದಲಾಗಿ 'ಸಾವಿ'ನ ಭಯ ಕಡಿಮೆಯಾಗಬಹುದು. ಮರಣದ ನಂತರ ಮತ್ತೊಂದು ಜನ್ಮವಿದೆ ಎಂಬ ಸಮಾಧಾನವಾಗಬಹುದು. ಆದರೆ ಪುನರ್ಜನ್ಮ ಹೊಂದಿದ ವ್ಯಕ್ತಿ ಹಿಂದಿನ ಜನ್ಮದ ಎಲ್ಲ ಸಂಬಂಧಗಳೊಂದಿಗೆ ಬೆರೆತು ಕೊಳ್ಳುವಂತಾದರೆ ಹಲವಾರು ಸಮಸ್ಯೆಗಳು ಎದುರಾಗುತ್ತವೆ ಮುಖ್ಯವಾಗಿ ವಯಸ್ಸಿನ ಅಂತರ ಈ ನಂಬಿಕೆಗೆ ಆಧಾರಗಳು ದೊರೆಯದೇ ಹೋಗುವ ಸಂಭವ, ಇದರಿಂದ ಹೊಸದೊಂದು ಮಾನಸಿಕ ತೊಳಲಾಟವೂ ಉಂಟಾಗುತ್ತದೆ.

ಧಾರ್ಮಿಕ ನಂಬಿಕೆಗಳನ್ನು ಬದುಕಿನಲ್ಲಿ ಪ್ರಯೊಗಕ್ಕೆ ಒಳಪಡಿಸಿದಾಗ ಉಂಟಾಗಬಹುದಾದ ಸನ್ನಿವೇಶಗಳು ಈ ಕಾದಂಬರಿಯಲ್ಲಿ ಕಂಡು ಬರುತ್ತವೆ.

'ಧರ್ಮಶ್ರೀ' ಹಿಂದೂ ಧರ್ಮ ಸಂಸ್ಕೃತಿಯ ಬಗ್ಗೆ ವ್ಯಾಪಕವಾದ ಚರ್ಚೆಯನ್ನು ಒಳಗೊಂಡಿದೆ. ಪ್ರಚಲಿತ ಸಮಾಜದಲ್ಲಿ ಹಿಂದೂ ಧರ್ಮದ ಅನೇಕ ಮಹತ್ವದ ವಿಷಯಗಳು ಜನರಿಗೆ ತಿಳಿದಿಲ್ಲ. ಕೇವಲ ಆಚಾರದಲ್ಲಿಯೇ ಮುಳುಗಿದ ಸಾಮಾನ್ಯ ಜನತೆ ಅಂಥ ಗಹನ ತತ್ವಗಳನ್ನು ತಿಳಿದುಕೊಳ್ಳುವ ಗೋಜಿಗೂ ಹೋಗುವುದಿಲ್ಲ ಎಂಬ ಅಭಿಪ್ರಾಯವಿದೆ.

ಭಾರತೀಯ ಸಾಮಾಜಿಕ, ಧಾರ್ಮಿಕ, ರಾಜಕೀಯ ಕ್ಷೇತ್ರಗಳಲ್ಲಿ ಇಂಗ್ಲಿಷರ ಆಗಮನದಿಂದ ಮಹತ್ವದ ಬದಲಾವಣೆಗಳು ಉಂಟಾದವು. ಹೊಸ ಚರ್ಚೆಗೆ ಗ್ರಾಸವಾಯಿತು. ಕ್ರಿಶ್ಚಿಯನ್ ಧರ್ಮದ ಪಾದ್ರಿಗಳು ಮತಾಂತರ ಕ್ರಿಯೆಗೆ ತೊಡಗಿದರು. ಅವರೆಂದೂ ಹಿಂಸೆಯಿಂದ ಮತಾಂತರ ಕ್ರಿಯೆಗೆ ತೊಡಗಿದ ಬಗ್ಗೆ ತಿಳಿದು ಬರುವುದಿಲ್ಲ ' ಇಸ್ಲಾಂ' ಧರ್ಮದ ರಾಜರ ಆಳ್ವಿಕೆ ಕಾಲದಲ್ಲಿಯೂ ಭಾರತೀಯ ಸಮಾಜ ಮತಾಂತರಕ್ಕೆ ಒಳಗಾಯಿತು. ಮುಖ್ಯವಾಗಿ ಮತಾಂತರ ಮಾಡುವ ಧರ್ಮಗುರುಗಳು ವ್ಯಕ್ತಿಯ ಬಡತನವನ್ನು, ಅನಾರೋಗ್ಯವನ್ನು, ಅಸಹಾಯಕತೆಯನ್ನು ಉಪಯೋಗಿಸಿಕೊಂಡು ಮತಾಂತರ ಕ್ರಿಯೆಗೆ ತೊಡಗಿರುವದನ್ನು ನಾವು ಇಂದೂ ಕಾಣಬಹುದು.

ಹಿಂದೂ ಧರ್ಮದಲ್ಲಿ ಪುರೋಹಿತಶಾಯಿ ವ್ಯವಸ್ಥೆ ಬಲಗೊಳ್ಳುತ್ತ ಹೋಯಿತು. ಅದೇ ಧರ್ಮದ ಶೂದ್ರರನ್ನು ಅತ್ಯಂತ ಕೀಳು ಮನೋಭಾವದಿಂದ ನೋಡಲು ಪ್ರಾರಂಭಿಸಿದರು. ಸ್ವಧರ್ಮದ ದೇವಸ್ಥಾನಗಳನ್ನು ದೇವರನ್ನು ದೂರದಿಂದ ನಿಂತು ನೋಡುವ ದೌರ್ಭಾಗ್ಯ ಇವರದಾಯಿತು, ಒಂದೇ ಧರ್ಮದಲ್ಲಿ ಇಂಥ ಹೀನ ಸ್ಥಿತಿಯನ್ನು ತಾಳಿದ ಜನತೆ ಬೇರೆ ಧರ್ಮದಲ್ಲಿ ಗೌರವ ಸಿಗುವ ಕಾರಣ ಸ್ವಧರ್ಮವನ್ನು ತ್ಯಜಿಸಿ ಅನ್ಯಧರ್ಮವನ್ನು ಅಪ್ಪಿಕೊಳ್ಳಲು ಮುಂದಾದರು. ಮುಖ್ಯವಾಗಿ ಅಂಬೇಡ್ಕರಂಥವರು ಬೌದ್ಧ ಧರ್ಮಕ್ಕೆ ಮತಾಂತರವಾದುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಹೀಗೆ ವ್ಯಾಪಕವಾಗಿ ಮತಾಂತರವಾಗುತ್ತಿರುವ ಸಂದರ್ಭದಲ್ಲಿ 'ಆರ್ಯಸಮಾಜ' ಉತ್ತಮ ಕಾರ್ಯವನ್ನು ಕೈಗೊಂಡಿತು ಹಿಂದೂ ಧರ್ಮದ ಅನೇಕ ಲೋಪ ದೋಷಗಳನ್ನು ಎತ್ತಿ ತೋರಿಸಿತು. ಮೂರ್ತಿ ಪೂಜೆ, ಅವತಾರವಾದ, ಬಹುದೇವತೋಪಾಸನೆಗಳನ್ನು ಖಂಡಿಸಿ ಅಸ್ಪೃಶ್ಯತೆಯು ವೇದ ವಿರುದ್ಧವೆಂದು ದಯಾನಂದ ಸರಸ್ವತಿಯವರು ಸಾರಿದರು.

ಮತಾಂತರ ಗೊಂಡವರನ್ನು ಮರಳಿ ಹಿಂದೂ ಧರ್ಮಕ್ಕೆ ಸೇರಿಸಲು ಸಾಧ್ಯವೆಂದು ಹೇಳಿ 'ಶುದ್ಧಿ' ಕಾರ್ಯಕ್ರಮಗಳನ್ನು ಪ್ರೋತ್ಸಾಹಿಸಿ ಪುನಃ ಹಿಂದೂ ಧರ್ಮಕ್ಕೆ ಸೇರಿಸಿಕೊಳ್ಳಲಾಯಿತು. ೧೮೭೫ರಲ್ಲಿ ದಯಾನಂದ ಸರಸ್ವತಿಯವರು ಹಿಂದೂ ಧರ್ಮದ ಸಂರಕ್ಷಣೆಗಾಗಿಯೇ ಆರ್ಯಸಮಾಜವನ್ನು ಸ್ಥಾಪಿಸಿದರು.

ಆರ್ಯಸಮಾಜ, ಬ್ರಹ್ಮಸಮಾಜ ಏಕದೇವೋಪಾಸನೆಯನ್ನು ಒಪ್ಪಿಕೊಂಡವು. ರಾಜಾರಾಮ್ ಮೋಹನರಾಯ್‌ರವರು ೧೮೨೮ರಲ್ಲಿ ಬ್ರಹ್ಮಸಮಾಜವನ್ನು ಸ್ಥಾಪಿಸುವ ಮೂಲಕ ಹಿಂದೂ ಧರ್ಮದಲ್ಲಿ ವ್ಯಾಪಕ ಬದಲಾವಣೆಗಳನ್ನು ತಂದರು. ೧೮೨೯ರಲ್ಲಿ ಸತಿಪದ್ಧತಿಯಂಥ ಅಮಾನುಷ ಪದ್ಧತಿಯ ಆಚರಣೆಗೆ ಕಾನೂನು ಜಾರಿಯಾಯಿತು. ಆಧುನಿಕ ವಿಚಾರಧಾರೆಯ ವಿಚಾರಧಾರೆಯ ಮೋಹನರಾಯರ ಹೋರಾಟ ಸಿಂಹಪಾಲು ಈ ಕಾರ್ಯದಲ್ಲಿತ್ತು.

ಈ ಎಲ್ಲ ವಿಚಾರ ಧಾರೆಗಳಿಂದ ಹಿಂದೂ ಧರ್ಮದಲ್ಲಿ ಬದಲಾವಣೆ ಕಂಡು ಬಂದರೂ 'ಅಸ್ಪೃಶ್ಯರ' ಸಮಸ್ಯೆಗಳು ಅದೇ ರೀತಿ ಮುಂದುವರೆದುಕೊಂಡು ಬಂದವು. ಕಾರಣ ಮತಾಂತರವೂ ನಿಲ್ಲಲಿಲ್ಲ.

ಹಿಂದೂ ಧರ್ಮದ ಕುರಿತು ವ್ಯಾಪಕ ಚರ್ಚೆಯನ್ನು ಈ ಕಾದಂಬರಿಯಲ್ಲಿ ಎತ್ತಿಕೊಳ್ಳಲಾಗಿದೆ. ಸತ್ಯನಾರಾಯಣ ಬ್ರಾಹ್ಮಣ ಅನಾಥಾಲಯದಲ್ಲಿ ಇರುವಾಗ ಊಟದ ವೇಳೆಯಲ್ಲಿ ವಿದ್ಯಾರ್ಥಿಗಳು ಇಂಥ ಚರ್ಚೆಗೆ ತೊಡುಗುವುದನ್ನು ಇಲ್ಲಿ ಗುರುತಿಸಬಹುದು.

''ವಿಗ್ರಹಾರಾಧನೆಯಿಂದ ತುಂಬಿರುವ ಧರ್ಮವೆಂದರೆ ಹಿಂದೂ ಧರ್ಮ ಬೀದಿಯಲ್ಲಿ ಹೋಗುತ್ತಿರುವಾಗ ಯಾವುದಾದರು ಒಂದು ಕರಿಯ ಕಲ್ಲನ್ನು ಕಂಡರೆ, ಯಾವನಾದರೊಬ್ಬ ಅದನ್ನೇ ದೇವರೆಂದು ತಿಳಿದು ಅದರ ಮೇಲೆ ಒಂದು ಪುಟ್ಟ ದೇವಸ್ಥಾನ ಕಟ್ಟುತ್ತಾನೆ. ತುಂಬ ದುಡ್ಡಿದ್ದವನಿಗೆ ಹೊಟ್ಟೆ ನೋವು ಬಂದರೆ ಗುಡಿ ಕಟ್ಟಿಸ್‌ತೀನಿ ಅಂತ ಹರಕೆ ಮಾಡ್ಕತ್ತಾನೆ. ಕಲ್ಲನ್ನು ಪೂಜೆ ಮಾಡುವಂಥ ಮೂಢನಂಬಿಕೆ ನಮ್ಮ ಧರ್ಮದಲ್ಲಿ ತುಂಬಿದೆ. ಇತರ ಧರ್ಮಗಳ ವಿಷಯ ಹಾಗಲ್ಲ ಇಂತಹ ಧರ್ಮ ನಮ್ಮದು ಅಂತ ಹೇಳ್ಕಳಕ್ಕೆ ನಾಚಿಕೆಯಾಗುತ್ತೆ.''

ಈ ಮಾತುಗಳಿಗೆ ಹಿಂದೂ ಧರ್ಮದ ಅನೇಕ ವಿಷಯಗಳನ್ನು ತಿಳಿದ ಶಂಕರರಾವ್ ಈ ರೀತಿ ಉತ್ತರ ಕೊಡುತ್ತಾನೆ.

''ನಮ್ಮದು ಹಿಂದೂ ಧರ್ಮ ಅಂತ ಹೇಳ್ಕಳೂದರಲ್ಲಿ ನಾಚಿಕೆಪಡಬೇಕಾದದುದೇನೂ ಇಲ್ಲ. ನಾನು ಹಿಂದೂ ಎನ್ನುವುದಕ್ಕೆ ನನಗೆ ಅತ್ಯಂತ ಹೆಮ್ಮೆ ಇದೆ. ವಿಗ್ರಹಾರಾಧನೆಯ ಉಪಯುಕ್ತತೆಯನ್ನು ಕುರಿತು ಯೋಚಿಸಿ ತಿಳಿದುಕೊಂಡುವರು ಈ ಮಾತಾಡುಲ್ಲ'' ಎಂದು ಹೇಳುತ್ತಾ ವಿಗ್ರಹಾರಾಧನೆಯ ಮಹತ್ವವನ್ನು ವಿವೇಕಾನಂದರ ಮಾತಿನಲ್ಲಿಯೇ ವಿಶದ ಪಡಿಸುತ್ತಾನೆ.

ಭಗವಂತನನ್ನು ಯಾವ ವಿಗ್ರಹದಿಂದಲೂ ಅಥವಾ ಆಕಾರದಿಂದಲೂ ಮಿತಗೊಳಿಸುವುದು ಸಾಧ್ಯವಿಲ್ಲ. ಅವನು ಅನಂತ, ನಿರಾಕಾರ, ನಿರ್ಗುಣ ; ರೂಪ ಕಾಲ, ದೇಶಗಳಿಗೆ ಅತೀತ. ಆದರೆ ಜ್ಞಾನಮಾರ್ಗದಲ್ಲಿ ಒಂದು ಹೆಜ್ಜೆ ಮುಂದೆ ಸಾಗಿ ವಿಚಾರ ಮಾಡುವವನು ಮಾತ್ರ ಈ ಮಾತನ್ನು ಹೇಳಬೇಕು. ಜ್ಞಾನವೇ ಮುಕ್ತಿಯ ಏಕೈಕ ಮಾರ್ಗವಲ್ಲ ಆಧ್ಯಾತ್ಮಿಕ ಜೀವನದ ಆರಂಭ ದಶೆಯಲ್ಲಿಯೇ ಇಷ್ಟೆಲ್ಲ

ಗಹನವಾದ ಕಲ್ಪನೆಯು ಯಾರಿಗೂ ಬರುವುದಿಲ್ಲ. ಭಗವಂತನನ್ನು ನಿರ್ಗುಣ, ನಿರಾಕಾರನೆನ್ನುವುದು ಸುಲಭ, ಆದರೆ ಹಾಗೆ ಭಾವಿಸಿ ಆರಾಧಿಸುವುದು ಸಾಮಾನ್ಯನಿಗೆ ಮೀರಿದ ವಿಷಯ.

ಸಾಮಾನ್ಯ ದೃಷ್ಟಿಗೆ ಆಧ್ಯಾತ್ಮ ವಿಚಾರಗಳು ಸ್ವಯಂ ವಿರೋಧವಾಗಿ ಕಾಣುತ್ತವೆ. ಸಾಮಾನ್ಯ ಮನುಷ್ಯನ ಚಿತ್ತವನ್ನು ಕೇಂದ್ರೀಕರಿಸಲು ವಿಗ್ರಹವು ಒಂದು ಮಹತ್ತರವಾದ ಸಾಧನ. ಸಾಧಕನ ಊರ್ಧ್ವಮುಖ ಮಾರ್ಗದಲ್ಲಿ ಇರುವ ಸಹಾಯಕ ಏಣಿ ವಿಗ್ರಹ. ಹಾಗೆ ನೋಡಿದರೆ ನಿರಾಕಾರ ತತ್ವವನ್ನು ತರ್ಕದ ಪರಮಾವಧಿಗೆ ನಮ್ಮಷ್ಟು ಒಯ್ದವರೇ ಇಲ್ಲ ಹಾಗಿದ್ದು ನಾವು ಸಾಕಾರಕ್ಕೆ ಪೂರ್ಣ ಪ್ರಾಶಸ್ತ್ಯ ಕೊಟ್ಟಿದ್ದೇವೆ ಹಿಂದೂ ಧರ್ಮದ ವೈಶಾಲ್ಯ ಇರುವುದೇ ಇಲ್ಲಿ.

ಆರ್. ಎಸ್. ಎಸ್.ನ ಸಕ್ರಿಯ ಕಾರ್ಯಕರ್ತನಾದ ಶಂಕರ ಹಿಂದೂ ಧರ್ಮವನ್ನು ಮೇಲಿನ ತನ್ನ ಅಭಿಪ್ರಾಯಗಳಲ್ಲಿ ಸಮರ್ಥಿಸಿಕೊಳ್ಳುತ್ತಾನೆ. ಭಾರತದಲ್ಲಿ ಏಕದೇವೋಪಾಸನೆಯನ್ನು ಒಪ್ಪಿದ ಇಸ್ಲಾಂ, ಮತ್ತು ಕ್ರಿಶ್ಚಿಯನ್ ಧರ್ಮಗಳ ಆಗಮನದ ನಂತರ ಹಿಂದೂ ಸಮಾಜದಲ್ಲಿ ಈ ತರದ ಗೊಂದಲಗಳು ಪ್ರಾರಂಭವಾದ ಸೂಚನೆ ಕಾದಂಬರಿಯಲ್ಲಿ ದೊರೆಯುತ್ತದೆ. ಮುಖ್ಯವಾಗಿ ಈ ಎರಡು ಧರ್ಮಗಳು ವಿಗ್ರಹಾರಾಧನೆಯನ್ನು ನಿರಾಕರಿಸುತ್ತವೆ. ನಿರಾಕಾರ ತತ್ವವನ್ನೇ ಅವು ಸ್ವಿಕರಿಸಿವೆ. (ಧರ್ಮಶ್ರೀ ಪು.೪೫.೪೬)

ಹಿಂದೂ ಧರ್ಮ ಮೂರ್ತಿ ಪೂಜೆಯನ್ನು ಒಪ್ಪಿಕೊಂಡಿದ್ದರಿಂದ ವಿಗ್ರಹಗಳನ್ನು ನಿರ್ಮಿಸುವ ಕಲೆ ಭಾರತದಲ್ಲಿ ಬೆಳೆದು ಬಂದಿದೆ ಎನ್ನುವ ಅಭಿಪ್ರಾಯ ಇಲ್ಲಿ ವ್ಯಕ್ತವಾಗಿದೆ.

ಸತ್ಯನಾರಾಯಣನಿಗೆ 'ಭಾರತೀಯ ಸಂಸ್ಕೃತಿಯ' ಬಗ್ಗೆ ಗೌರವವಿದೆ. ಶಂಕರನಂಥವರ ಸಂಗದಿಂದ ಈ ಅಭಿಮಾನ ಇನ್ನೂ ಹೆಚ್ಚಾಗುತ್ತದೆ. '' ಕ್ರಿಶ್ಚಿಯನ್ನರಲ್ಲಿ ಉತ್ತಮ ಸಂಘಟನೆ ಇದೆ. ಮುಸಾಲ್ಮಾನರಲ್ಲಿ ಒಗ್ಗಟ್ಟು ಮೊದಲಿನಿಂದಲೂ ಇದೆ. ಈ ಜನರು ಧರ್ಮದ ಪ್ರಶ್ನೆ ಬಂದಾಗ ಮೆಕ್ಕಾ ಅಥವಾ ಜೆರೂಸಲೇಮಿನ ಮೇಲೆಯೇ ನಿಷ್ಠೆ ತೋರುತ್ತಾರೆ. ಧರ್ಮದ ಮತ್ತು ರಾಷ್ಟ್ರದ ಆದರ್ಶಗಳಿಗೆ ತಿಕ್ಕಾಟ ಬಂದರೆ ಅವರ ನಿಷ್ಠೆ ಯಾವ ಕಡೆಗೆ ಓಲುತ್ತದೆ ಎನ್ನುವುದು ಸಂದೇಹಾಸ್ಪದ ವಿಷಯವೇ. ಆದರೆ ಹಿಂದೂವಿನ ಪ್ರಶ್ನೆ ಹಾಗಲ್ಲ ಅವನ ದೆಹಲಿ, ಕಾಶಿ, ಎರಡೂ ಈ ದೇಶದಲ್ಲಿಯೇ ಇವೆ. '' ಎನ್ನುವ ವಿಚಾರ ಶಂಕರನದು.

ಹಿಂದೂಗಳಲ್ಲಿ ಉತ್ತಮ ಸಂಘಟನೆಯಿಲ್ಲ. ಉತ್ತಮ ಸಂಘಟನೆ ಇರುವ ಕ್ರಿಶ್ಚಿಯನ್ ಮತ್ತು ಇಸ್ಲಾಂ ಧರ್ಮಿಯರು ಭಾರತದಲ್ಲಿ 'ಮತಾಂತರ'ವನ್ನು ವ್ಯವಸ್ಥಿತವಾಗಿ ಮಾಡಿಕೊಂಡು ಬರುತ್ತಿದ್ದಾರೆ. ಬುಡಕಟ್ಟು ಜನಾಂಗಗಳು ಭಾರತದ ಅಸ್ಪೃಶ್ಯ ಜನಾಂಗ ಮುಂತಾದವರು ಈ ಮತಾಂತರಕ್ಕೆ ಒಳಗಾಗುತ್ತಿದ್ದಾರೆ ಎನ್ನುವ ತಲ್ಲಣ ಶಂಕರನದು. ಭಾರತ ಮತ್ತು ಪಾಕಿಸ್ತಾನಗಳು ಬೇರೆ ಬೇರೆಯಾದದ್ದು ಮತಧರ್ಮ ಶಕ್ತಿಯಿಂದ ಎನ್ನುವುದು ಅವನ ನಂಬಿಕೆಯಾಗಿದೆ. ಈ ವಿಷಯವಾಗಿ ಹೆಚ್ಚಿನ ಅಭ್ಯಾಸವನ್ನು ಭಾರತೀಯ ಸಂಸ್ಕೃತಿಯ ವಿಷಯದಲ್ಲಿ ಅಭ್ಯಾಸವನ್ನು ಮಾಡಬೇಕೆಂದು ಸತ್ಯನಾರಾಯಣ ಮುಂದಾಗುತ್ತಾನೆ.

ಉಪನಯನವಾಗಲಿಲ್ಲ ಎಂಬ ಕಾರಣಕ್ಕೆ ವಾರಾನ್ನವನ್ನು ನಿಲ್ಲಿಸುವ ಬ್ರಾಹ್ಮಣರು, ಬ್ರಾಹ್ಮಣ ಹುಡುಗನೆಂದು ನೋಡುವ ಲಿಂಗಾಯತರು, ಹಿಂದೂ ಧರ್ಮದಲ್ಲಿಯೇ ಇರುವ ಒಡಕು, ಈ ಎಲ್ಲದರಿಂದ ಅವನು ಬೇಸರಗೊಳ್ಳುತ್ತಾನೆ.

ಮತಾಂತರ ಕ್ರಿಯೆಯಿಂದ ಭಾರತ ಸಂಸ್ಕೃತಿಯೇ ಅಳಿದು ಹೋಗುತ್ತಿದೆಯೆಂಬ ಭಯವೂ ಅವನನ್ನು ಕಾಡುತ್ತದೆ.

'' ಇಡೀ ಭಾರತವು ಕ್ರೈಸ್ತ ಮತಕ್ಕೆ ಪರಿವರ್ತಿಸಲ್ಪಡುತ್ತದೆಂದು ಭಾವಿಸುತ್ತಾನೆ ಆಗ ಉಳಿಯುವುದೇನು ಎಂದು ಪ್ರಶ್ನಿಸಿಕೊಳ್ಳುತ್ತಾ, ನಮ್ಮ ವೇದ ಉಪನಿಷತ್ತಗಳು, ನಮ್ಮ ದೇವಲಾಯಗಳು, ಇತರ ಪ್ರಕಾರಗಳ ಕಲೆಗಳು, ನಮ್ಮ ಸಂಸ್ಕೃತಿ ಇವೆಲ್ಲ ನಿರ್ನಾಮವಾದಂತೆ, ಇದು ಎರಡು ಧರ್ಮಗಳ ನಡುವಿನ ತತ್ವಗಳ ಪ್ರಶ್ನೆಯಲ್ಲ, ಎರಡು ಸಂಸ್ಕೃತಿಗಳ ಪ್ರಶ್ನೆ, ಭಾರತೀಯ ಸಂಸ್ಕೃತಿಯ ಚೈತನ್ಯ ಹಿಂದೂ ಧರ್ಮವೇ ಈ ಧರ್ಮದ ಜೀವನದಿ ಬತ್ತಿದ ನಂತರ ಉಳಿಯುವುದು ಮೃತ ಸಂಸ್ಕೃತಿಯ ಶವಸದೃಶ ಅವಶೇಷಗಳೇ ವಿನಾ ಜೀವಂತ ಸಂಸ್ಕೃತಿಯಲ್ಲ. '' (ಧರ್ಮಶ್ರೀ, ಪು-೯೩) ರಾಚಮ್ಮನ ಜೊತೆ ನಡೆಯುವ ಈ ಚರ್ಚೆ ನಡೆಯುವ ಸಂದರ್ಭದಲ್ಲಿ ಈ ಮೇಲಿನ ಮಾತುಗಳು ಆವೇಶಪೂರ್ಣವಾಗಿ ಸತ್ಯನಾರಾಯಣನ ಬಾಯಿಂದ ಬರುತ್ತವೆ. ಕಾದಂಬರಿಯಲ್ಲಿ ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರ ನಡೆಯುವ ಕ್ರಿಯೆಗೆ ಅನುಸಾರವಾಗಿಯೇ ವಿಷಯದ ಬೆಳವಣಿಗೆ ಸಾಗುತ್ತದೆ.

ಸತ್ಯನಾರಯಣನ ಮಾತಿನಲ್ಲಿ ಕೆಲವು ವಾಸ್ತವಾಂಶಗಳು ಇದ್ದರೂ ಈ ವಿಚಾರಗಳು ಬಾವೋದ್ರೇಕದಿಂದ ವ್ಯಕ್ತಪಡಿಸಿದಂಥವುಗಳಾಗಿವೆ. ನೂರಾರು ವರ್ಷಗಳು ಬ್ರಿಟಿಷರ ಅಧಿಪತ್ಯಕ್ಕೆ ಭಾರತ ಒಳಗಾಗಿದ್ದರೂ ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರವಾದವರ ಸಂಖ್ಯೆ ಕಡಿಮೆ. ಮುಸ್ಲಿಂ ಧರ್ಮಕ್ಕೆ ಮತಾಂತರವಾದವರ ಸಂಖ್ಯೆ ಇದಕ್ಕಿಂತ ಹೆಚ್ಚು ಆದರೆ ಈ ಪ್ರಸ್ತಾಪ ಕಾದಂಬರಿಯಲ್ಲಿ ಬರುವುದಿಲ್ಲ. ಮತಾಂತರ ವಾದವರೆಲ್ಲ ದೇಶಕ್ಕೆ ನಿಷ್ಠರಾಗಿರುವುದಿಲ್ಲ ಎನ್ನುವ ವಿಚಾರವೂ ಒಪ್ಪುವಂತಹದಲ್ಲ ಭಾರತದ ಸೇನೆಯಲ್ಲಿ ಪ್ರಾಣಾರ್ಪಣೆ ಮಾಡುವವರು ಹಿಂದೂ, ಕ್ರಿಶ್ಚಯನ್, ಮುಸ್ಲಿಂ ಮುಂತಾದ ಎಲ್ಲ ಧರ್ಮಿಯರೂ ಆಗಿದ್ದಾರೆ.

ಬೌದ್ಧ, ಜೈನ ಧರ್ಮಗಳು ಭಾರತದಲ್ಲಿ ಜನ್ಮ ತಳೆದ ಧರ್ಮಗಳು. ಅಶೋಕನ ಪ್ರಯತ್ನದಿಂದ ಇಂದು ಬೌದ್ಧ ಧರ್ಮ ಪ್ರಪಂಚದ ಬೇರೆ ಬೇರೆ ದೇಶಗಳಲ್ಲಿ ಆಚರಣೆಯಲ್ಲಿದೆ. ಅವರ ನಿಷ್ಠೆಯನ್ನು ಬಹುಶಃ ಆದೇಶಗಳಲ್ಲಿ ಪ್ರಶ್ನಿಸಲು ಸಾಧ್ಯವೇ ಇಲ್ಲ. ಮತ್ತು ಇದಕ್ಕಿಂತ ಮುಖ್ಯವಾಗಿ ಮತಾಧಾರಿತ, ಧರ್ಮಧಾರಿತ ರಾಷ್ಟ್ರಗಳಲ್ಲಿ ಇಂದು ನೆಮ್ಮದಿಯೇ ಇಲ್ಲ. ತೀವ್ರವಾದ ಮತ ಧರ್ಮದ ನಿಷ್ಠೆ ಹೊಂದಿದ ತಾಲಿಬಾನ್ ಸರಕಾರ ಅಪಘಾನಿಸ್ಥಾನದಲ್ಲಿ ಮಾಡಿದ ಅನಾಹುತವನ್ನು ಮಾಡಬಹುದಾಗಿದೆ.

ಸತ್ಯನಾರಾಯಣ ಲಿಲ್ಲಿಯನ್ನು ಮದುವೆಯಾಗಿ ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರವಾದ ನಂತರ ತೀವ್ರವಾದ ಮಾನಸಿಕ ತಲ್ಲಣಕ್ಕೆ ಒಳಗಾಗುತ್ತಾನೆ ಬ್ರಿಟಿಷರ ಶಾಲೆಯ ಎಲ್ಲ ವಿದ್ಯಾರ್ಥಿಗಳಿಗೆ ಬೈಬಲ್ ಪ್ರಾರ್ಥನೆಯನ್ನು ಕಡ್ಡಾಯ ಮಾಡುವುದು ಸರಿಕಾಣುವುದಿಲ್ಲ. ವಿವೇಕಾನಂದರ ಭಾವಚಿತ್ರ ಮತ್ತು ಅವರು ಹಿಂದೂ ಧರ್ಮದ ಬಗ್ಗೆ ಮಾಡಿದ ವ್ಯಾಖ್ಯಾನ, ಪಾಶ್ಚಾತ್ಯರಲ್ಲೂ ಶಿಷ್ಯರನ್ನು ದೊರಕಿಸಿಕೊಂಡು ಪ್ರಚಂಡ ಶಕ್ತಿ ಮುಂತಾದವುಗಳು ಸತ್ಯನಾರಾಯಣನ್ನು ದ್ವಂದಕ್ಕೆ ಈಡು ಮಾಡುತ್ತವೆ. ಭಾರತೀಯನಾದ ತನಗೆ ಕ್ರಿಶ್ಚಿಯನ್ ಸಂಸ್ಕೃತಿ ಒಗ್ಗುವುದೇ ಇಲ್ಲ ಎಂಬ ತೀರ್ಮಾನಕ್ಕೆ ಬರುತ್ತಾನೆ. ದೇವದಾಸನ ಜೊತೆಗೆ ನಡೆಯುವ ಸಂಭಾಷಣೆಯೂ ಅವನಿಗೆ ತಾನೂ ಮತಾಂತರವಾದುದು ತಪ್ಪು ಎಂದು ಅನಿಸಲು ಕಾರಣವಾಗುತ್ತದೆ. ನಂತರ

ಸ್ವಧರ್ಮಕ್ಕೆ ಹಿಂದಿರುಗುತ್ತಾನೆ 'ಸ್ವಧರ್ಮೇ ನಿಧನ ಶ್ರೇಯ' ಎನ್ನುವ ತತ್ವಕ್ಕೆ ಅವನು ಮರುಳುತ್ತಾನೆ.

ಧರ್ಮಶ್ರೀಯಲ್ಲಿ ಹಿಂದೂ ಧರ್ಮಿಯರು ಮತಾಂತರವಾದರೆ ದೇಶದ ಸಂಸ್ಕೃತಿಯೇ ನಾಶವಾಗುತ್ತದೆ ಎನ್ನುವ ವಿಚಾರ ಸಾಕಷ್ಟು ಸಶಕ್ತವಾಗಿಯೇ ಮೂಡಿ ಬರಲು ಲೇಖಕರು ಪ್ರಯತ್ನಿಸಿದ್ದಾರೆ ಅದೇ 'ದಾಟು'ಕಾದಂಬರಿಯಲ್ಲಿ ಒಂದೇ ಧರ್ಮದಲ್ಲಿ ಜನಿಸಿ ಸಾಮಾಜಿಕ, ರಾಜಕೀಯ, ಧಾರ್ಮಿಕ ಶೋಷಣೆಗೆ ಒಳಗಾದ ಜನತೆಯ ಚಿತ್ರಣವೂ ಸಿಗುತ್ತದೆ. ಬೆಟ್ಟಯ್ಯನಂತವರು ಉದ್ದಕ್ಕೆ ಮೀಸೆ ಬಿಡಲೂ ಸಾಧ್ಯವಾಗದ ಪಾಳೆಯಗಾರಿಕೆ. ದಲಿತರು ದೇವಾಲಯ ಪ್ರವೇಶ ಮಾಡಿದ ನಂತರ ಅದನ್ನು ಶುದ್ಧಗೊಳಿಸುವುದು ಕೇವಲ ರಾಜಕೀಯ ಕಾರಣಕ್ಕಾಗಿ ದೇವಾಲಯ ಪ್ರವೇಶವನ್ನು ಮಾಡಿಸುವ ಮೇಲುಗಿರಿಗೌಡರು ಸಾಮಾಜಿಕವಾಗಿ ಯಾವುದೇ ಬದಲಾವಣೆಯನ್ನು ತರುವಲ್ಲಿ ಸೋಲುತ್ತಾರೆ.

ಧರ್ಮಶ್ರೀಯಲ್ಲಿ ಸತ್ಯನಂತವರು ಹಿಂದೂ ಧರ್ಮ ಸಂಸ್ಕೃತಿಯೆಂದು ಅಭಿಮಾನದಿಂದ ಮಾತನಾಡುವುದು ಅದೇ ದಾಟು ಕಾದಂಬರಿಯಲ್ಲಿ ತಾವಿರುವ ಸ್ಥಿತಿಯನ್ನು ನೆನೆದು ಅದೇ ಸಂಸ್ಕೃತಿಯ ವಿರುದ್ಧ ಮೋಹನದಾಸನಂಥ ಯುವಕರು ಹೋರಾಟ ಮಾಡುವ ದಂದ್ವವನ್ನು ಕಾಣುತ್ತೇವೆ. ತಮ್ಮ ಸಾಮಾಜಕ ಅಧೋಗತಿಗೆ 'ಹಿಂದೂ' ಧರ್ಮವೇ ಕಾರಣವೆಂದು ಭಾವಿಸುವ ಮೋಹನದಾಸ ಇಡೀ ವ್ಯವಸ್ಥೆಯ ವಿರುದ್ಧವೇ ಸಿಡಿದು ಡೈನಮೈಟ್ ಇಟ್ಟು ಸ್ಫೋಟಿಸಿ ಹೊಸ ವ್ಯವಸ್ಥೆಯ ಆಗಮನಕ್ಕಾಗಿ ಪ್ರಾಣತ್ಯಾಗ ಮಾಡುತ್ತಾನೆ. ಸ್ವಧರ್ಮದಲ್ಲಿ ಜಾತಿ ವ್ಯವಸ್ಥೆ ಎಂಥ ಅಘಾತ ಸ್ಥಿತಿಯನ್ನುಂಟು ಮಾಡುತ್ತದೆ ಎಂದರೆ ಸತ್ಯಭಾಮೆ ಆಧುನಿಕ ಮನೋಭಾವ ಹೊಂದಿದ್ದರೂ ಸಂಪ್ರದಾಯಗಳು, ಧಾರ್ಮಿಕ ವ್ಯವಸ್ಥೆ ಅವಳನ್ನು ಶ್ರೀನಿವಾಸನ ಜೊತೆ ಮದುವೆಯಾಗಲು ಬಿಡುವುದೇ ಇಲ್ಲ.

ಮಾದಿಗ ಹೊಲೆಯ ಜನಾಂಗ ಎಡಗೈ ಎಂದು ಹೋರಾಟಕ್ಕಿಳಿಯುವದು ಒಕ್ಕಲಿಗ ಜನಾಂಗ ಬ್ರಾಹ್ಮಣ ಹುಡುಗಿಯನ್ನು ತಂದರೆ ತಮ್ಮ ಮನೆಗೆ ಕೇಡು ಎಂದು ಭಾವಿಸುವುದು. ಮೀರಾಳಂಥ ಸೂಕ್ಷ್ಮ ಮನಸ್ಸಿನ ಹುಡುಗಿಯನ್ನು ದೇಹದ ತೆವಲಿಗಾಗಿ ಮಾತ್ರ ಬಳಸಿಕೊಳ್ಳುವ ಶ್ರೀನಿವಾಸ. ಮುಂತಾದ ವಿಷಯಗಳೂ ಹಿಂದೂ ಸಮಾಜದಲ್ಲಿಯೇ ಎಂಥ ಬಿರುಕಗಳಿವೆ ಎಂಬುದನ್ನು ತೋರುತ್ತದೆ. ದೇವಾಲಯ ಪ್ರವೇಶ 'ದಾಟು' ಕಾದಂಬರಿಯಲ್ಲಿ ಎರಡು ಸಂದರ್ಭದಲ್ಲಿ ನಡೆಯುತ್ತದೆ. ಹರಿಜನರಿಗೆ ದೇವಾಲಯ ಪ್ರವೇಶವನ್ನು ರಾಜಕೀಯ ಕಾರಣಕ್ಕಾಗಿ ಮೇಲಗಿರಿಗೌಡ ಏರ್ಪಡಿಸುತ್ತಾನೆ. ಹರಿಜನರ ದೇವಾಲಯ ಪ್ರವೇಶವನ್ನು ಅನಂತಮೂರ್ತಿಯವರ ಭಾರತಿಪುರ ಕಾದಂಬರಿಯಲ್ಲಿಯೂ ಜಗನ್ನಾಥ ಸಾಧಿಸಬೇಕೆಂದು ಹೋರಾಡುವ ಸಂದರ್ಭದಲ್ಲಿ ಪಿಳ್ಳನನ್ನು ಯಾವುದೋ ನೆಪ ಮಾಡಿಕೊಂಡು ಪೋಲಿಸರಿಗೊಪ್ಪಿಸುವುದು ಒಟ್ಟಾರೆ ಈ ಕ್ರಿಯೆಯನ್ನು ವಿಫಲಗೊಳಿಸಬೇಕೆಂದು ಮೇಲುವರ್ಗದವರು ಮಾಡುವ ಸಂಚು ಇದೆಲ್ಲ ಹರಿಜನರಿಗೆ ದೇವಾಲಯ ಪ್ರವೇಶ ಸಮಾಜದಲ್ಲಿ ಇನ್ನೂ ಮುಕ್ತವಾಗಿಲ್ಲ ಎಂಬುದನ್ನು ತಿಳಿಸುತ್ತದೆ. ಭಾರತಿಪುರದಲ್ಲಿ ಮಂಜುನಾಥನ ವಿಗ್ರಹವನ್ನೆ ಗಣೇಶ ಕಿತ್ತು ಎಸೆದು ಬರುವುದು ಮತ್ತು ಜನತೆಯ ಕಣ್ಣಲ್ಲಿ ಅವನೇ ಪವಿತ್ರಕಾರ್ಯ ಮಾಡಿದ ವ್ಯಕ್ತಿಯಂತೆ ತೊರುವುದು ನಮ್ಮ ಸಮಾಜಕ್ಕೆ ಇರುವ ಒಂದು ವಿಚಿತ್ರ ಮುಖವನ್ನು ದರ್ಶನ ಮಾಡಿಸುತ್ತದೆ.

ತಬ್ಬಲಿಯು ನೀನಾದೆ ಮಗನೆ ಕಾದಂಬರಿಯಲ್ಲಿ 'ಗೋವು'ಕೇಂದ್ರ ಸ್ಥಾನವನ್ನು

ಪಡೆದುಕೊಂಡಿದೆ ಎಲ್ಲ ಪಾತ್ರಗಳು ಈ ಗೋವಿನ ವಿಚಾರದ ಸುತ್ತ ತಿರುಗತ್ತವೆ. ಹಿಂದೂ ಧರ್ಮದಲ್ಲಿ ಬೇರೆ ಯಾವ ಪ್ರಾಣಿಗಳಿಗೂ ದೊರಕದ ದೈವತ್ವ ಈ ಗೋವಿಗೆ ಪ್ರಾಪ್ತವಾಗಿದೆ ಸರ್ವವೂ ಚೈತನ್ಯಮಯವಾಗಿದೆ ಎಂಬ ಧಾರ್ಮಿಕ ನಂಬಿಕೆಯಿಂದ ಆದಿಮಾನವರು ಕಲ್ಲು, ಪರ್ವತ, ಮರ, ನದಿ ಮುಂತಾದವುಗಳನ್ನು ಆರಾಧಿಸಲು ಪ್ರಾರಂಭಿಸುದುದನ್ನು ಧಾರ್ಮಿಕ ಇತಿಹಾಸ ತಿಳಿಸುತ್ತದೆ. '' ಆದಿಕಾಲದ ಎಲ್ಲಾ ಹಂತಗಳ ಧಾರ್ಮಿಕ ಹುಟ್ಟು ಬೆಳವಣಿಗೆಯಲ್ಲಿ ಮಂತ್ರವಿದ್ಯೆ ಪ್ರಮುಖ ಪಾತ್ರವನ್ನು ವಹಿಸುವಂತೆ ಪಶು ಪೂಜಾ ಧಾರ್ಮಿಕ ಪದ್ಧತಿಯು ಮಹತ್ವದ ಪಾತ್ರ ವಹಿಸುತ್ತದೆ.'' (ಧರ್ಮ,ಕ.ವಿ.ವಿಶ್ವಕೋಶ -೩,ಪು-೧೫೫) ಕಾರಣ ಧರ್ಮದಲ್ಲಿ ಪಿತೃಪೂಜೆ, ನಿಸರ್ಗಪೂಜೆಯಂತೆ ಪಶು ಪೂಜೆಯು ಒಂದು ವಿಧಾನವಾಗಿ ಬೆಳೆದು ಕೊಂಡು ಬಂದಿದೆ. ದಶಾವತಾರಗಳಲ್ಲಿ ಮತ್ಸ್ಯಾವತಾರ, ವರಾಹವತಾರಗಳನ್ನು ಇಲ್ಲಿ ಸ್ಮರಿಸಬಹುದು. ಪ್ರಾಣಿಗಳನ್ನು ದೇವರೆಂದು ಪೂಜಿಸುವುದು ಅವು ದೇವರುಗಳ ಅವಾಸಸ್ಥಾನವಾಗಿವೆ ಎಂದು ನಂಬುವುದನ್ನು ಧಾರ್ಮಿಕ ಪರಿಕಲ್ಪನೆಗಳಲ್ಲಿ ಗುರುತಿಸಬಹುದು. ಹಿಂದೂ ಧರ್ಮದ ನಂಬಿಕೆಗಳಲ್ಲಿ ಗೋವಿಗೆ ಪವಿತ್ರ ಸ್ಥಾನವಿದೆ. ಇದೇ ರೀತಿ ' ಎತ್ತನ್ನು' ಬಸವನೆಂದೂ, ನಂದಿ ಎಂದು ಪೂಜಿಸುವುದನ್ನು ನೋಡಬಹುದು. ಶೈವದೇವಾಯಗಳಲ್ಲಿ ಈಶ್ವರನಿಗೆದುರಾಗಿ ಈ ಬಸವನ ಪ್ರತಿಮೆ ಇದ್ದೇ ಇರುವುದು ಇದೇ ನಂಬಿಕೆಯಿಂದ. ಆದರೆ ವೈದಿಕ ವಿಚಾರಗಳಲ್ಲಿ ಗೋವು ಅತ್ಯಂತ ಪೂಜನೀಯವಾದ ಸ್ಥಾನವನ್ನು ಪಡೆದುಕೊಂಡಿದೆ ಅದು ಸತ್ಯದ ಪ್ರತೀಕವಾಗಿದೆ ಕರುಣೆ, ತ್ಯಾಗ, ಪರೋಪಕಾರ ಮುಂತಾದವುಗಳಿಗೆ ಸಂಕೇತವಾಗಿದೆ ಗೋವು ದೇವತೆಗಳ ಆವಾಸ ಸ್ಥಾನವಾಗಿದೆ. ಗೋಮಾತೆಯನ್ನು ಸರಂಕ್ಷಣೆ ಮಾಡುವುದು ಧಾರ್ಮಿಕವಾಗಿ ಪುಣ್ಯದ ಕಾರ್ಯವಾಗಿದೆ.

'' ಗವಾರ್ಥೇ ಬ್ರಹ್ಮಣಾರ್ಥೇ ವಾ ವರ್ಣಾನಾಂ ವಾಪಿ ಸಂಕರೇ ।
ಗೃಹ್ಣೀಯತಾಂ ವಿಪ್ರವಿಶಾ ಶಾಸ್ತ್ರಂ ಧರ್ಮ ವ್ಯಪೇಕ್ಷಯಾ ''

ಗೋವಿನ ಸಂರಕ್ಷಣೆಗಾಗಿ ಬ್ರಾಹ್ಮಣನಾಗಲಿ ವೈಶ್ಯನಾಗಲಿ ಶಸ್ತ್ರಧಾರಣೆ ಮಾಡಬೇಕು. (ತ.ನೀ.ಮ. ಪು-೨೫) ಗೋವನ್ನು ತೊಂದರೆಗೆ ಒಳಪಡಿಸುವದು ಹಿಂಸಿಸುವುದು ಪಾಪಕರವಾದ ಕಾರ್ಯ ಅದಕ್ಕೆ

'ಯದ್‌ಗೃಹೇ ದುಃಖಿತಾ ಗಾವಃ ಸ ಯಾತಿ ನರಕೇ ನರಃ'

ಯಾರ ಮನೆಯಲ್ಲಿ ಹಸು ದುಃಖ ಪಡುತ್ತೋ ಅವನು ನರಕಕ್ಕೆ ಹೋಗುತ್ತಾನೆ (ತ.ನೀ.ಮ. ಪು-೨೫) ಹಸುವಿನ ಪಾವಿತ್ರತೆಯನ್ನು ಹಿಂದೂ ಧರ್ಮದಲ್ಲಿ ಅದಕ್ಕಿರುವ ಧಾರ್ಮಿಕ ಸ್ಥಾನವನ್ನು ಕಾದಂಬರಿಯ ಪ್ರತಿಯೊಂದು ಬೆಳವಣಿಗೆಯಲ್ಲೂ ಗುರುತಿಸಬಹುದು. ಅದು ಚ್ಯವನ ಋಷಿಗೆ ಸಮಾನವಾದುದು ಅದಕ್ಕು ಮಿಗಿಲಾದ ಕೋಟಿ ಕೋಟಿ ಋಷಿಗಳ ಯೋಗ್ಯತೆ ಒಂದು ಹಸುವಿನ ಬೆಲೆ ಆಗುವುದಿಲ್ಲ ಹಸು ಎಂದರೆ ಬ್ರಹ್ಮಾಂಡಕ್ಕೆ ಸಮ.(ತ.ನೀ.ಮ. ಪು-೨೫)

ಕನ್ನಡದ ಪ್ರಾಚೀನ ಕಾವ್ಯಗಳಲ್ಲಿಯೂ 'ಹಸು'ವನ್ನು ರಕ್ಷಿಸುವದು ಪವಿತ್ರ ಕಾರ್ಯವೆಂದು ಭಾವಿಸಲಾಗಿದೆ ರನ್ನನಂಥ ಕವಿಯೂ ಕೂಡಾ ಸ್ತ್ರೀಯರನ್ನು ಹಸುವನ್ನು ಕಷ್ಟದ ಕಾಲದಲ್ಲಿ ರಕ್ಷಿಸದವರು ವೀರರೇ ಅಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತ ಪಡಿಸುತ್ತಾನೆ. ಕೃಷಿ ಕಾರ್ಯದಲ್ಲಿ ತುಂಬಾ ಮಹತ್ವದ ಸ್ಥಾನವನ್ನು ಪಡೆದುಕೊಂಡ 'ಹಸು'ಬರುಬರುತ್ತಾ ದೈವತ್ವಕ್ಕೇರಿ ಅದಕ್ಕೆ ಅದರ ಮಹತ್ವವನ್ನು ಸಾರುವ ಶಾಸ್ತ್ರಗಳು ಕೂಡಾ ರಚಿತವಾದಂತೆ ತೋರುತ್ತದೆ.

ಗೋವನ್ನು ಚೆನ್ನಾಗಿ ಸಾಕಬೇಕು. ಅದನ್ನು ಸರಂಕ್ಷಣೆಮಾಡುವುದಕ್ಕಾಗಿ, ಅದಕ್ಕೆ ಉತ್ತಮ ಮೇವು ದೊರುಕುವದಕ್ಕಾಗಿ ವ್ಯವಸ್ಥೆ ಇರಬೇಕು ಎನ್ನುವ ಸಂಪ್ರದಾಯವೂ ಬೆಳೆದು ಬಂದಿದೆ. ಅದಕ್ಕಾಗಿ ಗ್ರಾಮದ, ಪಟ್ಟಣದ ಹೊರಹೊಲಯದಲ್ಲಿ ಗೋಮಾಳಗಳು ಇರುತ್ತಿದ್ದವು.

ಗೋವು ಎಂದರೆ ಅದೊಂದು ಯಕಶ್ಚಿತ್ ಪ್ರಾಣಿಯಲ್ಲ. ಹಿಂದೂ ಧರ್ಮದ ನಂಬಿಕೆಯಂತೆ ಗೋವು " ವಿಶ್ವದ ಪ್ರತೀಕ. ವಿಶ್ವದ ಸಮಸ್ತ ಕ್ರಿಯೆಗಳನ್ನು ಗೈಯಲು ಇರುವ ಬೇರೆ ದೇವತೆಗಳೆಲ್ಲರೂ ಗೋವಿನಲ್ಲಿ ವಾಸಿಸುತ್ತಾರೆ. ಅದರ ಕೋಡುಗಳ ಬುಡದಲ್ಲಿ ಬ್ರಹ್ಮ ವಿಷ್ಣುಗಳಿದ್ದಾರೆ, ಕೋಡುಗಳ ತುದಿಯಲ್ಲಿ ಸರ್ವ ತೀರ್ಥಗಳು ಇವೆ. ಎರಡು ಕಣ್ಣುಗಳಲ್ಲಿ ಸೂರ್ಯ ಚಂದ್ರರು, ದಂತಗಳಲ್ಲಿ ವಾಯು, ನಾಲಿಗೆಯಲ್ಲಿ ವರುಣ, ಹುಂಕಾರದಲ್ಲಿ ವಿದ್ಯಾಧಿದೇವತೆ ಸರಸ್ವತಿ, ಎರಡು ತುಟಿಗಳಲ್ಲಿ ಪ್ರಾತಃ ಸಂಧ್ಯೆರು, ನಾಲ್ಕು ಪಾದಗಳಲ್ಲಿ ನಾಲ್ಕು ಧರ್ಮಗಳು, ಗೋಮೂತ್ರದಲ್ಲಿ ಗಂಗೆ, ಮೊಲೆಗಳಲ್ಲಿ ನಾಲ್ಕು ಸಾಗರಗಳು, ಒಂದೊಂದು ರೋಮದಲ್ಲಿಯೂ ಒಬ್ಬಬ್ಬ ದೇವತೆಯಂತೆ ಒಟ್ಟು ಮೂವತ್ತುಮೂರು ಕೋಟಿ ದೇವತೆಗಳಿದ್ದಾರೆ." (ತ.ನೀ.ಮ. ಪು-೧೮೩)

ಈ ಕಾರಣ ಗೋವನ್ನು ಪೂಜಿಸುವದೆಂದರೆ ಸಕಲ ದೇವತೆಗಳನ್ನು ಪೂಜಿಸಿದಂತೆ ಎನ್ನುವುದು ವೆಂಕಟರಮಣನ ಅಭಿಪ್ರಾಯ ಮತ್ತು ಧರ್ಮದ, ನಮ್ಮ ಸಂಸ್ಕೃತಿಯ ವಿಚಾರವೂ ಆಗಿದೆ. ಧರ್ಮ ನಂಬಿಕೆಗಳ ಆದಾರದ ಮೆಲೆ ಕಟ್ಟಲ್ಪಡುತ್ತದೆ. ಭಾರತೀಯ ಸಂಸ್ಕೃತಿಯಲ್ಲಿ 'ಗೋವಿಗೆ' ಇರುವ ಪೂಜ್ಯತೆ ಬೇರೆ ಪ್ರಾಣಿಗಳಿಗಿಲ್ಲ. ಹಂದಿ, ನಾಯಿ,ಕೋಣಕ್ಕೆ ಈ ಸ್ಥಾನಗಳು ಇಲ್ಲ. ಕೋಣವನ್ನಂತೂ ನಿರ್ದಯವಾಗಿ ಬಲಿಕೊಡಲಾಗುತ್ತದೆ. ಈ ಕೋಣದ ಬಲಿಯ ಪ್ರಸಂಗ 'ದಾಟು' ಕಾದಂಬರಿಯಲ್ಲಿ ಮತ್ತು ತಬ್ಬಲಿಯು ನೀನಾದೆ ಮಗನೆ ಕಾದಂಬರಿಯಲ್ಲೂ ಬರುತ್ತದೆ. ದಾಟು ಕಾದಂಬರಿಯಲ್ಲಿ 'ಕೋಣ'ದ ಬಲಿ ಬ್ರಾಹ್ಮಣ ಕನ್ಯೆಯನ್ನು ಮದುವೆಯಾದ ದಲಿತನ ಪ್ರತೀಕವಾಗಿ ಬಲೀ ಕೊಡುವಂತ ವಿಚಾರ ಪ್ರಸ್ತಾಪವಾಗಿದೆ. ದಲಿತನನ್ನು ಮದುವೆಯಾಗಿ ದಲಿತನ ಕುಟಂಬವನ್ನೆ ಆಹುತಿ ತೆಗೆದುಕೊಳ್ಳುವ ಬ್ರಾಹ್ಮಣ ಸ್ತ್ರೀ ಮಾರಿಯ ಸಂಕೇತವಾಗಿಯೂ ಇರುವುದನ್ನು ಕಾದಂಬರಿಕಾರರು ಗುರುತಿಸಿದ್ದಾರೆ. ಒಟ್ಟಿನಲ್ಲಿ ಗೋವನ್ನು 'ನಂದಿ'ಯನ್ನು ಹೊರತು ಪಡಿಸಿ ಇತರ ಪ್ರಾಣಿಗಳಿಗೆ ಪೂಜೆ ಸಲ್ಲಿಸುವುದಿಲ್ಲ.

ಗೋವನ್ನು ಕೊಲ್ಲುವುದು ಮತ್ತು ಅದರ ಮಾಂಸವನ್ನು ತಿನ್ನುವುದು ರೌರವ ನರಕಕ್ಕೆ ಸಮಾನವಾದದು ಎಂಬ ಅಭಿಪ್ರಾಯ ಕಾದಂಬರಿಯಲ್ಲಿ ಮೂಡಿಬಂದಿದೆ. ಈ ಕಾರಣದಿಂದ ಭಾರತಕ್ಕೆ ಅನ್ಯ ಸಂಸ್ಕೃತಿಗಳ ಆಗಮನದಿಂದ ಒಂದು ವಿಧದ ಸಂಘರ್ಷ ಪ್ರಾರಂಭವಾಯಿತು. ಕ್ರಿಶ್ಚಿಯನ್ ಮತ್ತು ಮುಸ್ಲಿಮ ಧರ್ಮದಲ್ಲಿ ಮಾಂಸಹಾರ ಸಹಜವಾದ ಪದ್ಧತಿಯಾಗಿದೆ ಅಲ್ಲಿ ಗೋಮಾಂಸವು ವರ್ಜ್ಯವಲ್ಲ. ಆದರೆ

ಹಿಂದೂಗಳಲ್ಲಿ ಗೋವನ್ನು ಹಿಂಸುವುದೇ ಪಾಪಕಾರ್ಯವೆಂದು ತಿಳಿಯುವಾಗ ಅದರ ಮಾಂಸವನ್ನು ತಿನ್ನುವುದು ಕಲ್ಪಿಸಿಕೊಳ್ಳಲು ಅಸಾಧ್ಯವಾದ ಪರಿಣಾಮವನ್ನುಂಟು ಮಾಡುತ್ತದೆ. ಈ ವಿಚಾರ 'ತಂತು' ಕಾದಂಬರಿಯಲ್ಲಿಯೂ ವ್ಯಕ್ತವಾಗಿದೆ. ಆದುನಿಕ ವಿಚಾರಗಳು ಮತ್ತು ಮಿಶ್ರ ಸಂಸ್ಕೃತಿಯ ಪ್ರಭಾವ ಮಾಂಸಹಾರಕ್ಕೆ ಹೇಗೆ ನಿಧಾನವಾಗಿ 'ಅನೂಪ'ನಂತ ಯುವ ಪೀಳಿಗೆಯನ್ನು ಸೆಳೆಯುತ್ತದೆ. ಅನೂಪನ ತಂದೆಗೆ ಸಿಕ್ಕ ಸಂಸ್ಕಾರ ಅನೂಪನಿಗೆ ದೊರೆಯದೇ ಇರುವ ವಾತಾವರಣ ಭಾರತದ ಕೌಟುಂಬಿಕ ಬದುಕಿನಲ್ಲಿ ನಿರ್ಮಾಣವಾಗಿರುವುದು. ಈ ಎಲ್ಲ ಬದಲಾವಣೆಗಳಿಗೆ ಕಾರಣವಾಗಿದೆ. ಆದ್ದರಿಂದ ಅನೂಪನಂಥವರಿಗೆ ಎಲ್ಲಾ ಪ್ರಾಣಿಗಳ ಮಾಂಸವು ಒಂದೇ. ಅದು ಆಹಾರ, ಅದರಲ್ಲಿ ಅಂತಹ ಪಾವಿತ್ರ್ಯದ ಸ್ಮರಣಿಕೆಗಳು ಬರುವುದೇ ಇಲ್ಲ ಆದರೆ ತಬ್ಬಲಿಯು ನೀನಾದೆ ಮಗನೇ ಕಾದಂಬರಿಯಲ್ಲಿ 'ಹಿಲ್ಡಾ' ಗೋವನ್ನು ಕೊಂದು ಅದರಲ್ಲಿರುವ ದೇವತೆಗಳ ದರ್ಶನವನ್ನು ಮಾಡಿಕೊಳ್ಳುವ ಸಂದರ್ಭದಲ್ಲಿ ಗೋವನ್ನು ಕೊಲ್ಲಲು ಜಮಾಲನಿಗೆ ತಿಳಿಸುತ್ತಾಳೆ ಆಗ ಜಮಾಲನು ಸಹಿತ ಗೋವು ಎಂದರೆ ಹಿಂದೂಗಳ ಭಾವನೆ ಎಂಥದು ಎಂಬುದನ್ನು ಹೀಗೆ ತಿಳಿಸುತ್ತಾನೆ.

'' ಹಿಂದೂ ಜನಗಳ ಸಹವಾಸ ನಿಮಗೆ ಗೊತ್ತಿಲ್ಲ, ಅವರ ಪೈಕಿಯಾವನನ್ನಾದರೂ ಕೊಂದರೆ ಸುಮ್ಮನಿದ್ದಾರು, ಗೋ ಹಸು ಕೊಂದರೆ ಮ್ಯಾಲೆ ಬೀಳುತ್ತಾರೆ. ನಮಗೆ ಮಾಂಸ ಸಪ್ಲೈ ಮಾಡ್ತನಲ್ಲ ಕರೀಂ ಅವನು ಒಂದು ಸಲ ರಮ್‌ಜಾನ ಹಬ್ಬಾದಾಗೆ ಒಂದು ಹಸು ಕೊಂದ ಸಮಾಚಾರ ಎಂಟು ದಿನದ ಮ್ಯಾಲೆ ಊರಿನಲ್ಲಿ ಗೊತ್ತಾಯಿತು. ಗಂಡಾಳುಗಳೆಲ್ಲ ನುಗ್ಗಿ ಬಂದು ಅವನ ಮನೆ ಸುಟ್ಟು ಹಾಕಿದ್ರು. ಅವನು ಕದ್ದ್ ವಾಟ್ ಹ್ವಡಿದಿದ್ರೆ ಅವನನ್ನು ಮುಗಿಸ್ತಾ ಇದ್ರು. '' (ತ.ನೀ.ಮ. ಪು-೧೮೯)

ಗೋವಿನ ಬಗ್ಗೆ ತೀವ್ರವಾದ ಭಾವುಕತೆಯನ್ನು ಈಗಲೂ ಭಾರತೀಯ ಸಮಾಜದಲ್ಲಿ ನಾವು ಗುರುತಿಸಬಹುದು. ಬರದ ತೀವ್ರತೆಯಲ್ಲಿ ದನಗಳನ್ನು ಸರಂಕ್ಷಿಸಲು ಮಾಡಿದ ವ್ಯವಸ್ಥೆಯನ್ನು ಈಗಲೂ 'ಗೋಶಾಲೆ'ಗಳೆಂದೆ ಗುರುತಿಸಲಾಗುತ್ತದೆ.

ತಬ್ಬಲಿಯು ನೀನಾದೆ ಮಗನೇ ಕಾದಂಬರಿಯಲ್ಲಿ ಪ್ರಾಣಿಗಳನ್ನು ರಕ್ಷಿಸುವ ಬಗ್ಗೆ ಪೌರ್ವಾತ್ಯ, ಪಾಶ್ಚಿಮಾತ್ಯ ದೃಷ್ಟಿಕೋನಗಳ ಚಿತ್ರಣವಿದೆ. ಪಾಶ್ಚಾತ್ಯರಲ್ಲಿ ಅನುಕಂಪ ,'ಸರ್ವಭೂತ ಹಿತೇರತಾಃ' ಎನ್ನುವುದಕ್ಕಿಂತ ಕೇವಲ ಲಾಭದ ಆರ್ಥಿಕ ದೃಷ್ಟಿ ಮಹತ್ವವನ್ನು ಪಡೆದುಕೊಂಡಿದೆ.

ಉಪಯೋಗವಿದ್ದಾಗ ಬಳಸಿಕೊಂಡು, ಉಪಯೋಗವಿಲ್ಲದಾಗ ತ್ಯಜಿಸುವುದು ಭಾರತೀಯ ತಾತ್ವಿಕ ನಿಲುವಲ್ಲ. ಉಪಯೋಗವಿಲ್ಲದಾಗಲೂ ಅದರ ಕೊನೆಯ ಉಸಿರಿರುವ ವರಗೆ ಸರಂಕ್ಷಣೆ ಮಾಡುವುದು ಭಾರತೀಯ ಸಮಾಜದ ನೀತಿಯಾಗಿದೆ.

ಆದರೆ ಇಂದು ಗೋವು ಕೇವಲ ಧಾರ್ಮಿಕ ಮಹತ್ವವನ್ನಷ್ಟೆ ಪಡೆದಿಲ್ಲ ಅದು ರಾಜಕೀಯ ಮಹತ್ವವನ್ನು ಪಡೆದುಕೊಂಡಿದೆ. ಅನ್ಯ ಸಂಸ್ಕೃತಿಗಳನ್ನು ಎದುರಿಸುವ ಅಸ್ತ್ರವಾಗಿಯೂ ಅದು ಬಳಕೆಗೊಳ್ಳುತ್ತಿದೆ. ಅದಕ್ಕೆ ಆರ್. ಎಸ್. ಎಸ್.ಗಳಲ್ಲಿ 'ಗೋರಕ್ಷಣೆ' ಒಂದು ರಾಷ್ಟ್ರೀಯ ನೀತಿಯಾಗಿದೆ.

ಗ್ರಹಣ ಕಾದಂಬರಿಯಲ್ಲಿಯೂ ಅನೇಕ ಧಾರ್ಮಿಕ ಹಾಗೂ ತಾತ್ವಿಕ ವಿಚಾರಗಳು ಪ್ರಸ್ತಾಪವಾಗಿವೆ. ಗ್ರಹಣ ಎಂದರೆ ಹಿಡಿದುಕೊಳ್ಳುವುದು ಎಂಬ ಅರ್ಥ ಖಗೋಲ, ವಿಜ್ಞಾನ ಇನ್ನು ಬೆಳೆಯದೇ ಇರುವ

ಸಂದರ್ಭದಲ್ಲಿ 'ಗ್ರಹಣ'ದ ವಿಚಾರವಾಗಿ ಒಂದೊಂದೆ ಧಾರ್ಮಿಕ ನಂಬಿಕೆಗಳು ಒಂದೊಂದು ರೀತಿಯಾಗಿ ಈ ಪದವನ್ನು ಅರ್ಥೈಸಿವೆ. 'ಗ್ರಹಣ' ಎಂಬುದು ಒಂದು ಸಂಗತಿ. ಇಂಗ್ಲಿಷಿನಲ್ಲಿ ಈ ಪದಕ್ಕೆ ಸಮಾನ ಪದ 'ಎಕ್ಲಿಪ್ಸ್' ಎನ್ನುವುದು ಎಕ್ಲಿಪ್ಸ್ ಎಂದರೆ ಮರೆ ಮಾಡುವುದು ಮುಚ್ಚುವುದು ಎಂದರ್ಥ. ಸೂರ್ಯನು ಚಂದ್ರನಿಂದ ಮರೆಮಾಡಲ್ಪಟ್ಟಿರುತ್ತಾನೆ. ಅದನ್ನೆ ಸೂರ್ಯಗ್ರಹಣ ಎನುತ್ತೇವೆ ಭೂಮಿಯಿಂದ ಚಂದ್ರ ಮರೆಮಾಡಲ್ಪಟ್ಟಿರುತ್ತಾನೆ ಅದನ್ನೇ ಚಂದ್ರಗ್ರಹಣ ಎನ್ನುತ್ತೇವೆ. ವೈಜ್ಞಾನಿಕ ತಿಳುವಳಿಕೆಯಲ್ಲಿ ಈ ರೀತಿ ಅರ್ಥೈಸುತ್ತೇವೆ. ಅದರೆ ಹಿಂದೂ ಧರ್ಮದ ಗ್ರಂಥಗಳಲ್ಲಿ ಪೂರಾಣಗಳಲ್ಲಿ, 'ಗ್ರಹಣ' ಎಂದರೆ ಒಂದು ದುಃಶಕ್ತಿ ಆಥವಾ ದೈತ್ಯನು ಸೂರ್ಯ ಅಥವಾ ಚಂದ್ರನನ್ನು ಹಿಡಿದುಕೊಳ್ಳುತ್ತಾನೆ ಎನ್ನುವ ಅರ್ಥವಿದೆ. (ಗ್ರಹಣ, ಪು -೩)

ಗ್ರಹಣ ಹಿಡಿಯುವ ವೇಳೆಯಲ್ಲಿ ಮನೆಯೊಳಗಿನ ಪಾತ್ರಗಳಲ್ಲಿರುವ ನೀರೆಲ್ಲವನ್ನು ಖಾಲಿಮಾಡುವುದು ಒಂದು ಪದ್ಧತಿ. ಅದೇ ರೀತಿ ಪಾತ್ರಗಳಿಗೆ ದರ್ಭೆ ಹಾಕುವುದು ಒಂದು ಸಾಂಪ್ರದಾಯಿಕ ಪದ್ಧತಿಯಾಗಿದೆ. ಗ್ರಹಣದ ನಂತರ ಹೊಸ ನೀರು ತುಂಬುತ್ತಾರೆ! ಬಸುರಿಯಾದ ಸ್ತ್ರೀ ಗ್ರಹಣ ಹಿಡಿದ ಸಂದರ್ಭದಲ್ಲಿ ಅದನ್ನು ನೋಡಬಾರದು. ಯಾವ ವಸ್ತುಗಳನ್ನು ಕತ್ತರಿಸುವುದು, ಹೆಚ್ಚುವುದು ಮಾಡಬಾರದು. ಒಂದು ವೇಳೆ ಹಾಗೆ ಮಾಡಿದರೆ ಮುಂದೆ ಜನಿಸುವ ಮಕ್ಕಳ ಅಂಗಾಂಗಳು ನ್ಯೂನತೆಯನ್ನು ಕೂಡಿರುತ್ತವೆ ಎಂಬುದು ಸಮಾಜದಲ್ಲಿರುವ ನಂಬಿಕೆ. ಇದೇ ಕಾರಣಕ್ಕೆ ಹಿಮಗಿರೀಶ್ವರ ಕಾಲೇಜಿನ ಪ್ರಿನ್ಸಿಪಾಲರ ಪತ್ನಿ ಲಲಿತಮ್ಮ 'ಗ್ರಹಣ'ವನ್ನು ಧಾರ್ಮಿಕ ನಂಬಿಕೆಗಳಿಗನುಗುಣವಾಗಿ ಆಚರಿಸುತ್ತಾಳೆ. ಆದರೆ ಅವಳು ಗರ್ಭಿಣಿಯೇ ಆಗಿರುವುದಿಲ್ಲ. ಚತುರ್ವರ್ಣ ಪದ್ಧತಿಯಂತೆಯೇ ಆಶ್ರಮ ಧರ್ಮವೂ ಹಿಂದೂ ಧರ್ಮದ ವಿಶಿಷ್ಟ ಲಕ್ಷಣ. ಆಶ್ರಮ ಧರ್ಮ ವ್ಯಕ್ತಿಯ ಬದುಕನ್ನು ಬ್ರಹ್ಮಚರ್ಯ, ಗ್ರಹಸ್ತ, ವಾನಪ್ರಸ್ತ ಮತ್ತು ಸನ್ಯಾಸಗಳೆಂದು ನಾಲ್ಕು ಹಂತಗಳಾಗಿ ವಿಂಗಡಿಸುತ್ತದೆ.

ಭೈರಪ್ಪನವರ ಗೃಹಭಂಗ, ಗ್ರಹಣ, ಸಾರ್ಥ, ನಾಯಿನೆರಳು ಕಾದಂಬರಿಗಳಲ್ಲಿ ಸನ್ಯಾಸಿಗಳ ಬಗ್ಗೆ, ಸನ್ಯಾಸತ್ವದ ವಿಷಯದ ಬಗ್ಗೆ ವಿವರಣೆ ಕಂಡು ಬರುತ್ತದೆ.'ಸಾರ್ಥ' "ಕ್ರಿ.ಶಕ ಎಂಟನೆ ಶತಮಾನದ ಭರತಖಂಡದಲ್ಲಿ ನಡೆಯಿತೆಂದು ಕಲ್ಪಿಸಿಕೊಳ್ಳಬೇಕಾದ ಸಂಗತಿಗಳನ್ನಾಧರಿಸಿದ ಕಾದಂಬರಿ. ಆನೆ, ಕುದರೆ, ಹೆಸರಗತ್ತೆ, ನೂರಾರು ಗಾಡಿಗಳ ಮೇಲೆ ವಾಣಿಜ್ಯ ಪದಾರ್ಥಗಳನ್ನು ಹೇರಿಕೊಂಡು ವ್ಯಾಪಾರ ಮಾಡುತ್ತ ದೂರ ದೂರ ದೇಶಗಲಲ್ಲಿ ಸಂಚರಿಸುವದನ್ನು ಆ ಕಾಲದಲ್ಲಿ 'ಸಾರ್ಥ' ಎನ್ನುತ್ತಿದ್ದರು. ಭಾರತದ ಇತಿಹಾಸದ ಒಂದು ಸ್ಥಿತ್ಯಂತರ ಅವಧಿಯ ಈ ಕಾದಂಬರಿಯಲ್ಲಿ ಅಪೂರ್ವ ಅನುಭವ ಮತ್ತು ಪಾತ್ರಗಳು ಒಡಮೂಡಿವೆ. ಆಳವೂ ವಿಸ್ತಾರವೂ ಆದ ಐತಿಹಾಸಿಕ ಅಧ್ಯಯನದ ಅಡಿಪಾಯದ ಮೇಲೆ ಶಕ್ತಸೃಜನಶೀಲತೆಯು ಕೆಲಸ ಮಾಡಿ ಈ ವಿಶಿಷ್ಟ ಕಾದಂಬರಿಯನ್ನು ನಿರ್ಮಿಸಿದೆ" ಎಂದು ಕಾದಂಬರಿಯ ಪ್ರಾರಂಭದಲ್ಲಿ ಹೇಳಲಾಗಿದೆ.

ಭಾರತವು ಸತತವಾಗಿ ಎದುರಿಸುತ್ತಿರುವ ಧಾರ್ಮಿಕ ಸಂಘರ್ಷಗಳ ತಾತ್ವಿಕ ಬೇರುಗಳನ್ನು 'ಸಾರ್ಥ' ಸೃಜನಶೀಲವಾಗಿ ಅನ್ವೇಷಿಸುತ್ತದೆ.

ಮೇಲಿನ ಮಾತುಗಳು 'ಸಾರ್ಥ' ಕಾದಂಬರಿಯನ್ನು ಓದುವದಕ್ಕೆ, ಕೆಲವು ಸೂಚನೆಗಳನ್ನು, ವಿಷಯದ ಕಾಲವನ್ನು , ವಿಷಯದ ಪರಿಚಯವನ್ನು ಸೂಕ್ಷ್ಮವಾಗಿ ಮಾಡಿಕೊಡುತ್ತದೆ. ಭೈರಪ್ಪನವರು

ವರ್ತಮಾನದಲ್ಲಿ ನಿಂತು ಭೂತದ ಕಡೆಗೆ ದೃಷ್ಟಿ ನೆಟ್ಟು ತಮಗೆ ನಿಲುಕಿದಷ್ಟು, ತಮ್ಮದೇ ಆದ ಧೋರಣೆಯಿಂದ ಈ ಕಾದಂಬರಿನ್ನು ರಚಿಸಿದ್ದಾರೆ. ಓದುಗನಿಗೆ ಈ ಕಾದಂಬರಿ ಒಂದು ವಿಶಿಷ್ಟವೂ ರೋಚಕವು ಆದ ಅನುಭವವನ್ನು ನೀಡುವುದರಲ್ಲಿ ಸಂಶಯವಿಲ್ಲ.

ಮುಖ್ಯವಾಗಿ ಬೌದ್ಧ ಧರ್ಮ ತನ್ನದೇ ಆದ ಜನಪರ ನಿಲುವುಗಳಿಂದ ಜನತೆಗೆ ಸಮೀಪವಾದ ಕಾಲದ ಸಾಮಾಜಿಕ, ಧಾರ್ಮಿಕ, ರಾಜಕೀಯ ಸ್ಥಿತಿಯನ್ನು 'ನಾಗಭಟ್ಟ'ನೆಂಬ ವೈದಿಕನ ದೃಷ್ಟಿಕೋನದಿಂದ ಈ ಕಾದಂಬರಿ ಕಟ್ಟಿಕೊಡುತ್ತದೆ. ಸಮಕಾಲಿನ ರಾಜಮನೆತನಗಳ, ಮಂಡನಮಿಶ್ರ, ಕುಮಾರಿಲಭಟ್ಟ, ಶಂಕರಚಾರ್ಯ ಮುಂತಾದ ಧಾರ್ಮಿಕ ವ್ಯಕ್ತಿಗಳ ಉಲ್ಲೇಖ ಮತ್ತು ಅವರಿಗೆ ಸಂಬಂಭಪಟ್ಟ ಸಂಗತಿಗಳು ಕಾದಂಬರಿಯಲ್ಲಿ ದೊರೆಯುತ್ತವೆ.

"ಭಾರತೀಯ ಧರ್ಮ ಶಾಸ್ತ್ರ ಮತ್ತು ತತ್ವ ಶಾಸ್ತ್ರ ಈ ಎರಡನ್ನು ಪರಸ್ಪರ ಪ್ರತ್ಯೇಕಿಸುವುದು ಬಹಳ ಕಷ್ಟ . ಸಿದ್ಧಾಂತ ತತ್ವವಾದರೆ, ಅದರ ಪ್ರಯೋಗವೇ ಧರ್ಮ" ( ಎಸ್. ಎಲ್. ಭೈರಪ್ಪವರ ಕೃತಿಗಳ ವಿಮರ್ಶೆ, ಸಂ.ಡಾ.ಸುಮತೀಂದ್ರ ನಾಡಿಗ್, ಸಾರ್ಥ ಒಂದು ತಾತ್ವಿಕ ಚಿಂತನೆ, ಪ್ರೊ.ಕೆ.ಜಿ.ನಾಗರಾಜಪ್ಪ ಎಂದು ಅಭಿಪ್ರಾಯ ಪಡುತ್ತಾರೆ.)

ವೇದಗಳು , ಉಪನಿಷತ್ತುಗಳು, ಸ್ಮೃತಿಗಳು, ಪುರಾಣಗಳು ಮತ್ತು ವೈವಿಧ್ಯಮಯವಾದ ವ್ಯಾಖ್ಯಾನಗಳು ಭಾರತದ ಧರ್ಮಶಾಸ್ತ್ರ ಮತ್ತು ತತ್ವ ಶಾಸ್ತ್ರದ ಇತಿಹಾಸದಲ್ಲಿ ಕಂಡು ಬರುತ್ತದೆ. ಈ ತತ್ವಗಳನ್ನು, ಧಾ ರ್ಮಿಕ ವಿಷಯಗಳನ್ನು ಆಧರಿಸಿ ಕನ್ನಡದಲ್ಲಿ ಸಾಹಿತ್ಯ ರಚನೆಯಾಗಿದೆ. ಅನಕೃ, ತರಾಸು, ದೇವುಡು, ಬಸವರಾಜ ಕಟ್ಟಿಮನಿ ಮುಂತಾದವರು ತಮ್ಮ ಕಾದಂಬರಿಗಳಲ್ಲಿ ಈ ವಿಷಯಗಳ ಬಗ್ಗೆ ಸುದೀರ್ಘವಾಗಿ ಚರ್ಚೆ ನಡೆಸಿದ್ದಾರೆ. ಭೈರಪ್ಪನವರಿಗೆ ಸ್ವಧರ್ಮ ರಕ್ಷಣೆ, ಸಂಸ್ಕೃತಿ ರಕ್ಷಣೆ ಒಂಗು ತೀವ್ರವಾದ ಕಾಳಜಿಯಾಗಿರುವುದು ಅವರ ಕೃತಿಗಳಿಂದ ನಮಗೆ ಮನವರಿಕೆಯಾಗುತ್ತದೆ. ಆದರೆ ಸ್ವಧರ್ಮವೆಂದರೆ ವೈದಿಕವಷ್ಟೆ, ಸಂಸ್ಕೃತಿಯೆಂದರೆ ಬ್ರಾಹ್ಮಣ ಸಂಸ್ಕೃತಿಯೆಂಬ ಅವರ ನಿಲುವು ಚಿಂತನೆಗಿಡುಮಾಡುತ್ತದೆ.

'ಭಾರತೀಯ ಧರ್ಮವನ್ನು ಭಾರತೀಯ ತಾತ್ವಿಕ ದೃಷ್ಟಿಯಿಂದ ಒರೆಗೆ ಹಚ್ಚಿ ನೋಡುವುದು ಅವರ ಸ್ವಭಾವ ಮತ್ತು ಮೂಲ ಪ್ರವೃತ್ತಿ ಭಾರತೀಯ ತತ್ವ ಶಾಸ್ತ್ರ ಚಿಂತನೆಗಳೇ ಅದರಲ್ಲಿಯೂ ಶುದ್ಧ ವೈದಿಕ ಜ್ಞಾನ ಪರಂಪರೆಯ ಅವರ ಸೃಜನಶೀಲ ಬರವಣಿಗೆಯ ಕಣ್ಣಾಯಿತು.' ಎಂಬ ಪ್ರೊ.ಕೆ.ಜಿ.ನಾಗರಾಜಪ್ಪ ಅವರ ಮಾತುಗಳನ್ನು ಭೈರಪ್ಪನವರ ಕೃತಿಗಳ ಹಿನ್ನಲೆಯಲ್ಲಿ ಅರ್ಥಮಾಡಿಕೊಳ್ಳುವ ಅಗತ್ಯವಿದೆ.

ಸಾರ್ಥ ಕಾದಂಬರಿಯನ್ನು ಓದಿದ ಕೂಡಲೇ ಓದುಗ, ಚಿಂತಕನ ನೆಲೆಯಿಂದ ಈ ಕಾದಂಬರಿಯನ್ನು ವಿಶ್ಲೇಷಿಸಲು ತೊಡಗಿದಾಗ ಅವನಿಗೆ ತಟ್ಟನೆ ಅನ್ನಿಸುವುದು ಬೌದ್ಧ ಧರ್ಮದ ವಿರುದ್ಧ ಮತ್ತು ವೈದಿಕ ಸನಾತನ ಧರ್ಮದ ಪರವಾಗಿ ಈ ಸೃಜನಶೀಲ ಕ್ರಿಯೆ ಕಾರ್ಯ ಮಾಡಿದೆ ಎಂಬ ಅನುಭವ ಬರುತ್ತದೆ. ಭರತಭೂಮಿ ಬಹು ಸಂಸ್ಕೃತಿ ನೆಲೆವೀಡಾಗಿದ್ದರೂ ಎಕ ಸಂಸ್ಕೃತಿ ನೆಲೆಗೊಳ್ಳಲು ಅನೇಕ ಏಕಮುಖಿ ಸಂಸ್ಕೃತಿಯ ವಕ್ತಾರರು ನಿರಂತರ ಎಚ್ಚರವನ್ನು ತಾಳಿರುತ್ತಾರೆ.

ಬೌದ್ಧ ಧರ್ಮ ಭಾರತದಲ್ಲಿ ಜನಿಸಿ, ಭಾರತದಲ್ಲಿ ಬೆಳೆದು, ಅಸ್ತಿತ್ವವಕ್ಕಾಗಿ ಹೆಣಗಿ ಈ

ನಾಡಿನಿಂದಲೇ ದೂರವಾದದು ಒಂದು ದುರಂತ ಇತಿಹಾಸ. ಕರ್ಮಠ ವೈದಿಕದಿಂದ, ಭೋಗಜೀವನಕ್ಕೆ ಒಳಗಾದ ಬಿಕ್ಷುಗಳಿಂದ ಮತ್ತು ಹೊರನಾಡಿನ ಆಕ್ರಮಣಕಾರರಾದ ಮ್ಲೇಚ್ಛರಿಂದ ಈ ಧರ್ಮ ಅವನತಿ ಹೊಂದಿತು ಎಂಬ ವಿಚಾರವಿದೆ. ಆದರೆ ಶಂಕರಚಾರ್ಯರ ತೀವ್ರಗಾಮಿತನ ಆಕ್ರಮಣ ಬೌದ್ಧ ಧರ್ಮಕ್ಕೆ ಸಾಕಷ್ಟು ಹಾನಿ ಮಾಡಿತು ಎಂಬುದು ಒಪ್ಪುವಂತ ವಿಷಯವೇ ಆಗಿದೆ.

ತಾರಾವತಿಯ ರಾಜ ಅಮರುಕ ಸಾರ್ಥದ ಯೋಜನೆ ರೂಪಿಸಿ, ಸ್ನೇಹಿತ ನಾಗಭಟ್ಟನಿಗೆ ಸಾರ್ಥದ ಮರ್ಮವನ್ನರಿತು ಹಿಂತಿರುಗಿಬಂದು ವಾಣಿಜ್ಯಾಧ್ಯಕ್ಷನಾಗುವ ಪ್ರಚೋದನೆಯನ್ನು ಒಡ್ಡುತ್ತಾನೆ. ಅಧ್ಯಯನಕ್ಕೆ ಕಾಶಿಗೆ ಹೋಗುವ ನೆಪದಲ್ಲಿ ಸಾರ್ಥದ ಜೊತೆಗೂಡುತ್ತಾನೆ. ಬೌದ್ಧ ಧರ್ಮ ಭಾರತದಲ್ಲಿ ಚೆನ್ನಾಗಿ ನೆಲೆಗೊಂಡ ಕಾಲ ಅದು. ಭಾರತದ ವಾಣಿಜ್ಯ ವ್ಯವಹಾರವೂ ಬೌದ್ಧರ ಕೈಯಲ್ಲಿಯೇ ಆ ಸಂದರ್ಭದಲ್ಲಿರುವುದನ್ನು ಕಾದಂಬರಿ ಸೂಚಿಸುತ್ತದೆ.

ಸಾರ್ಥದ ಮೇಲೆ ದರೋಡೆಕೋರರು ಒಂದು ರಾತ್ರಿ ದಾಳಿ ಮಾಡುತ್ತಾರೆ ಸಿಕ್ಕಿಯೂ ಬೀಳುತ್ತಾರೆ. ಅವರ ಸಂದರ್ಭದಲ್ಲಿ 'ನಮೋ ಮಣಿ ಭದ್ರಾಯ' ಎಂಬ ಮಂತ್ರವನ್ನು ಹೇಳುತ್ತಾರೆ ಆಗ ನಾಗಭಟ್ಟನಿಗೆ ಈ ಕಾಡುಜನರ ಜೀವನವನ್ನು ಬೌದ್ಧಮತದ ಮಣಿಭದ್ರ ಯಕ್ಷನು ಪ್ರವೇಶಿಸಿದುದು ಹೇಗೆ ? ಎಂಬ ಆಶ್ಚರ್ಯ ಹುಟ್ಟುತ್ತದೆ. ಆಗ ಸಾರ್ಥದ ಪ್ರಮುಖ ಬುಧಶ್ರೇಷ್ಠನಿಂದ ಈ ವಿಷಯ ತಿಳಿಯಲು ಪ್ರಶ್ನಿಸುತ್ತಾನೆ ಆಗ ಬುಧ ಶ್ರೇಷ್ಠರು ಈ ರೀತಿ ಹೇಳುತ್ತಾರೆ.

'' ಭೂ ಸಾರ್ಥಕ್ಕಿಂತ ಜಲ ಸಾರ್ಥವೂ ಸುಲಭ ಅಂತಹ ವಣಿಜರು ಕಂಡು ಕೊಂಡಿದ್ದಾರೆ. ನಿಮ್ಮ ಧರ್ಮಶಾಸ್ತ್ರಗಳು ಸಾಗರ ಪ್ರಯಾಣವನ್ನ ನಿಷೇಧಿಸಿ ಬಿಟ್ಟಿವೆಯಲ್ಲ. ಇನ್ನೂ ಸಾಗರ ಸಾರ್ಥಗಳನ್ನು ಸರಂಕ್ಷಿಸುವ ದೇವದೇವತೆಯರಾಗಲಿ, ಯಕ್ಷ ಯಕ್ಷಿಣಿಯರಾಗಲಿ ಎಲ್ಲಿಂದ ಬರಬೇಕು. '' (ಸಾರ್ಥ, ಪು-೨೫) ಎಂದು ತಿಳಿಸುತ್ತಾ ಮಣಿಭದ್ರ ಯಕ್ಷ ಸಾರ್ಥ ರಕ್ಷಕ ಬೌದ್ಧರ ದೇವತೆ ಬೋಧಿಸತ್ವ ಅವತಾರ ಎತ್ತಿ ಸಾರ್ಥ ರಕ್ಷಿಸಿದ ಕತೆಯನ್ನು ತಿಳಿಸುತ್ತಾನೆ. ವೇದಗಳಲ್ಲಿ ಇಂತಹ ದೇವತೆಗಳ ಪ್ರಸ್ತಾಪವಿಲ್ಲ. ವೈದಿಕರ ದೇವತೆಗಳು ಕೇವಲ ಪಶುಪಾಲನ ದೇವತೆಗಳೆಂದು ಹೇಳುತ್ತಾರೆ.

ನಾಗಭಟ್ಟನಿಗೆ ಗೌತಮ ಸೂತ್ರದಲ್ಲಿ ಬ್ರಾಹ್ಮಣನಿಗೆ ಸಮುದ್ರ ಪ್ರಯಾಣವನ್ನು ನಿಷೇಧಿಸಿದ ವಿಷಯ ನೆನಪಿಗೆ ಬರುತ್ತದೆ. ಸಾರ್ಥದ ಜೊತೆಗೆ ಬೌದ್ಧ ಧರ್ಮದ ಸ್ವರೂಪವು ತಿಳಿಯುತ್ತ ಹೋಗುತ್ತದೆ.

ಬೌದ್ಧ ಧರ್ಮದ ತತ್ವಗಳನ್ನು ಬೇರೆಯವರಿಗೆ ಭೋದಿಸಲು ತೋರುವ ಬೌದ್ಧ ಧರ್ಮಿಯರ ಮಹತ್ವವನ್ನು ಕಾಣುತ್ತಾನೆ. '' ಬೌದ್ಧಧರ್ಮವನ್ನು ರಾಜಮಹಾರಾಜರುಗಳೇ ಸ್ವೀಕರಿಸಿ ಕಾಷಾಯ ವಸ್ತ್ರ ಧರಿಸಿ ಕಾಣದ ದೇಶಗಳಲ್ಲಿ ಕಾಲ್ನಡಿಗೆಯಿಂದ ಚಲಿಸಿ ಧರ್ಮ ಪ್ರಚಾರದ ಬಿಕ್ಕುಗಳಾದರು. ಹೀಗಾಗಿ ಈ ಧರ್ಮವು ಈಗ ಅತ್ತ ಗಾಂಧಾರದಾಚೆಗೆ, ಇತ್ತ ಸಾಗರದಾಚೆಯ ಸಿಂಹಳ ದೇಶಕ್ಕೆ ಉತ್ತರದ ತ್ರಿವಿಷ್ಟ ಪ್ರದೇಶಕ್ಕೆ, ಅತ್ತಣ ಚೀನಾ, ಪೂರ್ವದ ಸುವರ್ಣ ದ್ವೀಪಾದಿಗಳಿಗೆ ಹಬ್ಬಿ ಹರಡಿದೆ.'' (ಸಾರ್ಥ,ಪು-೩೯) ಎಂಬ ವಿಷಯ ತಿಳಿಯುತ್ತದೆ.

ಅಧ್ಯಯನ ಮಾಡಲು ಕಾಶಿಗಿಂತ ನಳಂದಕ್ಕೆ ಹೋಗುವುದು ಉತ್ತಮವೆಂಬ ಸಲಹೆ ನಾಗಭಟ್ಟನಿಗೆ ದೊರೆಯುತ್ತದೆ. ಚತುರ್ವಣ್ಯವನ್ನು ತಿರಸ್ಕರಿಸುವ ಬೌದ್ಧರು ವೇದವನ್ನು ಬ್ರಾಹ್ಮಣ, ಕ್ಷತ್ರೀಯ,

ವೈಶ್ಯರನ್ನುಳಿದು ಬೇರೆಯವರಿಗೆ ಹೇಳಿಕೊಡಬಾರದೆಂಬ ಚತುರ್ವರ್ಣ್ಯದ ಕಟ್ಟುಪಾಡು ನಾಗಭಟ್ಟನಿಗೆ ನೆನಪಾಗುತ್ತದೆ. ನಮ್ಮವರು ಈ ಚತುರ್ವರ್ಣ್ಯವನ್ನು ಯಾಕೆ ತಿರಸ್ಕರಿಸಬಾರದು ? ಎಂದು ವೈದಿಕ ಧರ್ಮದ ಬಗ್ಗೆ ಆತ್ಮ ವಿಮರ್ಶೆ ಮಾಡಿಕೊಳ್ಳುತ್ತಾನೆ.

ಮಥುರೆಯಲ್ಲಿ ನಾಗಭಟ್ಟನಿಗೆ ಜಯಸಿಂಹರೊಂದಿಗೆ ಸ್ನೇಹ ಬೆಳೆಯುತ್ತದೆ. ಜಯಸಿಂಹ ರಸಿಕ ಕ್ಷತ್ರೀಯ ಸವಲತ್ತುಗಳಾದ ಮಧ್ಯ, ವಿನೋಧ, ಬೇಟೆ, ಸ್ತ್ರೀ ಕೇಳಿಯನ್ನು ಆಗಾಗ ಮುಕ್ತವಾಗಿ ಅನುಭವಿಸುವವ. 'ವಿಲಾಸದ ಹೆಂಗಸರ ಜೊತೆಯಲ್ಲಿ ನಾವು ನಿದ್ದೆ ಮಾಡುವುದಿಲ್ಲ' ಎನ್ನುವ ಕುಶಲಿ, ಮ್ಲೇಚ್ಛರು, ಸಿಂಧೂ ದೇಶ ವಶಪಡಿಸಿಕೊಂಡು, ಮತಾಂತರಕ್ಕೆ ಒಪ್ಪದ ಜನರನ್ನು ಕೊಂದು ಪ್ರಾರ್ಥನಾ ಮಂದಿರ ಕಟ್ಟಿ ತಮ್ಮ ಧರ್ಮವನ್ನು ಭಾರತದಲ್ಲಿ ಹರಡುವ ಸಿದ್ಧತೆಯಲ್ಲಿದ್ದಾರೆ. ಎಂಬ ಕಾರಣದಿಂದ, ಸಿಂಧೂ ದೇಶದಿಂದ ಬರಬೇಕಾದ ಸಾರ್ಥಬಾರದೆ ನಾಗಭಟ್ಟ ಕಾಶಿಗೆ ಪ್ರಯಾಣಿಸದೇ ಮಥುರೆಯಲ್ಲಿ ನೆಲೆನಿಂತುಕೊಳ್ಳುತ್ತಾನೆ.

ಜಯಸಿಂಹ ವೈದಿಕ ಧರ್ಮ ರಕ್ಷಣೆಯ ಗುರ್ಜರ, ಪ್ರತಿಹಾರರ ರಾಜಪ್ರತಿನಿಧಿ ವೈದಿಕ ಧರ್ಮ ರಕ್ಷಣೆಗೆ ಮತ್ತು ಪ್ರಚಾರಕ್ಕೆ ನಾಟಕ ಮಾಧ್ಯಮವನ್ನು ಬಳಸಿಕೊಳ್ಳುತ್ತಾನೆ. ಬೌದ್ಧ ಧರ್ಮದ ಬೆಳವಣಿಗೆಯನ್ನು ಈ ಮೂಲಕ ತಡೆಯುವ ವಿಚಾರ ಅವನದು ರಾಮಾಯಣ, ಮಹಾಭಾರತ, ರಾಮ ಮತ್ತು ಕೃಷ್ಣರ ಪಾತ್ರಗಳಿಂದ ಬೌದ್ಧ ಧರ್ಮಕ್ಕೊಂದು ತಡೆಹಾಕಬಹುದು. ವೈದಿಕ ಧರ್ಮದ ರಕ್ಷಣೆಯನ್ನು ಮಾಡಬಹುದು. ಎನ್ನುವ ಲೆಖ್ಖಾಚಾರಕ್ಕೆ ನಾಟಕ ಮಾಧ್ಯಮವನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳುತ್ತಾನೆ.

ಜಯಸಿಂಹನ ಮಾತಿಗೆ ಕಟ್ಟುಬಿದ್ದು ನಾಗಭಟ್ಟ ಕೃಷ್ಣನ ಪಾತ್ರವನ್ನು ಒಪ್ಪಿಕೊಳ್ಳುತ್ತಾನೆ ನಾಟಕ ಆಪಾರ ಜನಪ್ರಿಯತೆಯನ್ನು ಗಳಿಸಿ ನಾಗಭಟ್ಟ ಕೃಷ್ಣಾನಂದಾನಾಗುತ್ತಾನೆ.

ವೈದಿಕ ಧರ್ಮದ ಹಲವಾರು ಅಂಶಗಳನ್ನು ಶಿಲ್ಪದ ಮೂಲಕ ಮೂರ್ತಿಕರಿಸಿ ಜನಪ್ರಿಯಗೊಳಿಸಿದಂತೆ ಬೌದ್ಧ ಧರ್ಮವು ಶಿಲ್ಪ ಕಲೆಯನ್ನು ಬಳಸಿಕೊಳ್ಳುವ ಕ್ರಿಯೆ ಕಾದಂಬರಿಯಲ್ಲಿ ಕಂಡು ಬರುತ್ತದೆ. ಹಿಂದೂ ಧರ್ಮದ ದೇವ ಮತ್ತು ದೇವತೆಗಳನ್ನು ಮಾರ್ಪಡಿಸಿ 'ಬೌದ್ಧ' ಧರ್ಮದ ಸಂಸ್ಕಾರವನ್ನು ಸಾರುವ ಕಾರ್ಯ ನಡೆದಿದೆ ಎಂದು ತಿಳಿದುಬರುತ್ತದೆ. ಚೈತ್ಯ ನಿರ್ಮಾಣದಲ್ಲಿ ತೊಡಗಿದ ವಿಶ್ವಕರ್ಮ ಸ್ಥಪತಿ, ವಜ್ರಪಾದರು ಹೇಗೆ ಬೌದ್ಧ ಧರ್ಮವನ್ನು ಶಿಲ್ಪದ ಮೂಲಕ ಜನಪ್ರಿಯಗೊಳಿಸಲು ಇಚ್ಚಿಸುತ್ತಾರೆ ಎಂಬುದನ್ನು ಅರುಹುತ್ತಾನೆ. ವಿಶ್ವಕರ್ಮ ಸ್ಥಪತಿಗೆ ಬೌದ್ಧರ ಅಶ್ರಯ ಜೀವಾನೋಪಾಯಕ್ಕೆ ಅನಿವಾರ್ಯವೆನಿಸುತ್ತದೆ. ನಂತರ ಅವನು ಬೌದ್ಧ ಧರ್ಮಕ್ಕೆ ಮತಾಂತರ ಹೊಂದುತ್ತಾನೆ.

ಪೂರ್ವಾಶ್ರಮದಲ್ಲಿ ವೈದಿಕರಾಗಿದ್ದ ಮೊಗ್ಗಲಾನರ, ಸಾರಿಪುತ್ತರು, ನಾಗಸೇನರು, ವಸುಬಂಧುಗಳು, ನಾಗಾರ್ಜುನರು, ಭರ್ತೃಹರಿಗಳು, ಅಶ್ವಗೋಷರು, ಕ್ಷತ್ರಿಯರಾಗಿದ್ದ ಹರ್ಷ, ಅಶೋಕರಂಥ ಅರಸರು ಬೌದ್ಧ ಧರ್ಮ ಸ್ವೀಕರಿಸಿದ ವಿಷಯವನ್ನು ವಜ್ರಪಾದರು ನಾಗಭಟ್ಟನಿಗೆ ತಿಳಿಸುತ್ತಾರೆ. ನಾಗಭಟ್ಟನನ್ನು ಬೌದ್ಧಧರ್ಮದ ಆಚಾರ್ಯನಾಗುವ ಯೋಗಕ್ಕಾಗಿ ಅಹ್ವಾನಿಸುತ್ತಾರೆ.

ಬೌದ್ಧರನ್ನು ವೇದ ವಿರೋಧಿಗಳೆಂದೇ ಭಾವಿಸುವ ನಾಗಭಟ್ಟ ಅವರು ಕೊಟ್ಟ ಅಕ್ಕಿ ಬೇಳೆಗಳಿಂದ

ಅನ್ನ ಬೇಯಿಸಿ ತಿನ್ನಬಹುದೇ ಎಂಬ ಚಿಂತೆಗೊಳಗಾಗುತ್ತಾನೆ.

ಮಥುರೆಯಲ್ಲಿ ಕೃಷ್ಣನ ಪಾತ್ರವನ್ನು ವಹಿಸಿ ಆನಂದದಲ್ಲಿರುವಾಗಲೇ ತಾರಾವತಿಯ ನಾರಾಯಣ ದೀಕ್ಷಿತ ಸಂಧಿಸಿ ನಾಗಭಟ್ಟನಿಗೆ ಅಘಾತವನ್ನುಂಟು ಮಾಡುವ ವಿಷಯ ತಿಳಿಸುತ್ತಾನೆ. ಮಿತ್ರ ಅಮರುಕನಿಗೆ ತನ್ನ ಹೆಂಡತಿ ಮನಸೋತದ್ದು ಮಗುವನ್ನು ಹೆತ್ತದ್ದು ಕೇಳಿ ಮಿತ್ರದ್ರೋಹ ಹಾಗೂ ಪತ್ನಿದ್ರೋಹದಿಂದ ಆಘಾತಕ್ಕೊಳಗಾಗುತ್ತಾನೆ. ಆದರೆ ತಾನು ಗ್ರಹಸ್ಥ, ಗ್ರಹಸ್ಥ ಧರ್ಮ ಪರಿಪಾಲನೆ ಮಾಡದೇ ಅಧ್ಯಯನಕ್ಕಾಗಿ ಊರು ಬಿಟ್ಟಿದ್ದರಿಂದಲೇ ಈ ರೀತಿಯಾಯಿತೆಂದು ದೀಕ್ಷಿತರಿಂದ ಉಪದೇಶ ಪಡೆದಾಗಲೆ ಅವನಿಗೆ ಅರಿವಾಗುತ್ತದೆ ತನ್ನದಲ್ಲದ ಸಾರ್ಥವಿದ್ಯೆ ತಿಳಿಯಲು ಬರಬಾರದಿತ್ತು ಎಂದು ಪಶ್ಚಾತಾಪ ಪಡುತ್ತಾನೆ.

ಕಾದಂಬರಿಯುದ್ದಕ್ಕೂ ಭೈರಪ್ಪನವರ ನಿರೂಪಣಾ ಪ್ರತಿಭೆ ವೈದಿಕ ದರ್ಶನದ ಮಹತ್ವದ ಅಂಶಗಳನ್ನು ದಾಖಲಿಸುತ್ತಾ ಸಾಗುತ್ತದೆ. ವಿಶೇಷ ತನ್ಮಯತೆ, ತೀವ್ರತೆ ಸಮರ್ಥನೆ ಕಂಡುಬರುತ್ತದೆ. ಬೌದ್ಧಧರ್ಮದ ಯಾವ ಮೇಲ್ಮೆಯೂ ಕಾದಂಬರಿಯಲ್ಲಿ ದಾಖಲಾಗುವುದಿಲ್ಲ ಭರತಖಂಡದಲ್ಲಿ ವೈದಿಕ ದರ್ಶನವೊಂದೇ ಅತ್ಯಂತಿಕ ಸತ್ಯ. ಅದನ್ನು ಒಪ್ಪಿಕೊಳ್ಳವುದೇ ಭಾರತೀಯರ ಧರ್ಮ ಎಂಬ ರೀತಿಯಲ್ಲಿ ವಿವರಣೆಗಳು ದೊರಕುತ್ತವೆ.

ನಾಗಭಟ್ಟನಿಗೆ ನಾಟಕ ಮಾಧ್ಯಮದ ಮೂಲಕ ಪರಿಚಯವಾದ ಚಂದ್ರಿಕೆಯ ಪ್ರವೇಶದ ನಂತರ ಕಾದಂಬರಿಗೆ ಮತ್ತೊಂದು ಆಯಾಮ ದೊರೆತಂತಾಗುತ್ತದೆ. ಈ ನಾಟಕ ಪ್ರಸಂಗದ ಮೂಲಕವೇ ಪುರುಷಾರ್ಥಗಳಲ್ಲಿ ಒಂದಾದ 'ಕಾಮ'ದ ಕುರಿತು ವಿವರವಾದ ಚರ್ಚೆಯನ್ನು ಚಂದ್ರಿಕೆ ನಾಗಭಟ್ಟನ ಮೂಲಕ ಮಾಡಲಾಗಿದೆ ಗ್ರಹಸ್ಥ ಜೀವನದ ಕಟ್ಟುಪಾಡುಗಳು ನಟ ನಟಿಯರಿಗೆ ಅನ್ವಯಿಸುತ್ತಿದ್ದಲ್ಲ.

''ಕಾಮದ ವಿವಧ ಮುಖಗಳು ಕಾದಂಬರಿಯಲ್ಲಿ ಬರುತ್ತವೆ ಶಾಲಿನಿ -ಅಮರುಕ, ಚಂದ್ರಿಕೆ-ಯದುಭದ್ರ, ಚಂದ್ರಿಕೆ - ಶ್ರೀಮುಖ, ಚಂದ್ರಿಕೆ - ಕೃಷ್ಣಾನಂದ, ಕೃಷ್ಣಾನಂದ -ತಾರಕೇಶ್ವರಿ ಪರಕಾಯ ಪ್ರವೇಶದ ಶಂಕರಾಚಾರ್ಯ, ರಸಿಕ ಅಮರುಕ, ಗ್ರಹಸ್ಥ ಚೌಕಟ್ಟಿಗೆ ಒಳಗಾದ ಕಾಮ, ಗ್ರಹಸ್ಥ ಕಟ್ಟಲೆ ಮೀರಿದ ಕಾಮ, ಆದ್ಯಾತ್ಮ ಸಾಧನೆಗಾಗಿ ಕಾಮ, ಶಕ್ತಿ ಸಿದ್ಧಿಗಾಗಿ ಕಾಮ, ಸ್ವಧರ್ಮ ಮತ್ತು ಅನ್ಯಧರ್ಮದ ಕಾಮ ವಿವಿಧ ಮುಖಗಳು ಕಾದಂಬರಿಯಲ್ಲಿ ವಿವರ ಪಡೆದಿವೆ.'' ( ಎಸ್. ಎಲ್. ಭೈರಪ್ಪ ಅವರ ಕೃತಿಗಳು ವಿಮರ್ಶೆ /142)

ನಾಟಕದಲ್ಲಿ ಉಪನಿಷತ್ತಿನ ಶ್ಲೋಕಗಳನ್ನು ಗೀತೆಯ ಶ್ಲೋಕಗಳಿಗೆ ಪೂರಕವಾದ ಶ್ಲೋಕಗಳಾಗಿರುವುದರಿಂದ ಸೇರಿಸಿದರೆ ತಪ್ಪಾಗುವುದಿಲ್ಲ ಎಂಬ ಚಂದ್ರಿಕೆಯ ಸಲಹೆಯ ಮೇರೆಗೆ ವಾಸುದೇವಶರ್ಮರು ನಾಟಕದಲ್ಲಿ ಈ ಶ್ಲೋಕಗಳನ್ನು ಸೇರಿಸುತ್ತಾರೆ.

ಆತ್ಮಾನಂ ರಥಿನಂ ವಿದ್ಧಿ ಶರೀರ ರಥಮೇವ ತು ।
ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ॥
ಇಂದ್ರಿಯಾಣಿ ಹಯನಾಹುರ್ವಿಷಯಾಂ ಸ್ತೇಷು ಗೋಚರಾನ್!
ಆತ್ಮೇಂದ್ರಿಯ ಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ ॥

ಯಸ್ತ್ವ ವಿಜ್ಞಾನವಾನ್ ಭವತ್ಯಯುಕ್ತೇನ ಮನಸಾ ಸದಾ
ತ್ಯಸ್ಯೆಂದ್ರಿಯಾಣ್ಯವಶ್ಯಾನಿ ದುಷ್ಟಾಶ್ವಾ ಇವ ಸಾರಥೆ ॥
ಯಸ್ತು ವಿಜ್ಞನವಾನ್ ಭವತಿ ಯುಕ್ತೇನ ಮನಸಾ ಸದಾ
ತಸ್ಯೇಂದ್ರಿಯಾಣಿ ವಶ್ಯಾನಿ ಸದಶ್ವಾ ಇವ ಸಾರಥೆ ॥

ಆತ್ಮ ವೇ ರಥದ ಒಡೆಯ ಶರೀರವೆಂಬುದೊಂದು ರಥ. ಬುದ್ಧಿ ಸಾರಥಿ, ಮನಸ್ಸು ಲಗಾಮು, ಇಂದ್ರಿಯಗಳು ಕುದರೆಗಳು, ಇಂದ್ರಿಯಗಳ ವಿಷಯಗಳು ಅವುಗಳ ದಾರಿಗಳು. ಅಯುಕ್ತ ಮನಸ್ಸಿನಿಂದ ಅನಿಪುಣನಾಗಿರುವವನಿಗೆ ಇಂದ್ರಿಯಗಳು ತುಂಟ ಕುದುರೆಗಳೆಂತೆ ವಶ ತಪ್ಪಿ ಹೋಗುತ್ತದೆ. ಯುಕ್ತ ಮನಸ್ಸಿನಿಂದ ಕೂಡಿ ನಿಪುಣನಾದವನಿಗೆ ಅವನ ಇಂದ್ರಿಯಗಳು ಸಾರಥಿಯ ಒಳ್ಳೆಯ ಕುದುರೆಗಳಂತೆ ವಶವಾಗಿರುತ್ತವೆ. (ಸಾರ್ಥ, ಪು-೬೬) ಉಪನಿಷತ್ತಿನ ಈ ವಿಚಾರಗಳನ್ನು ನಾಟಕ ಕಲಾಮಾಧ್ಯಮದ ಮೂಲಕ ಪ್ರೇಕ್ಷಕರ ಮನಸ್ಸಿಗೆ ಇಳಿಸುವ ಚಾತುರ್ಯ ಇಲ್ಲಿ ಕಂಡು ಬರುತ್ತದೆ.

ಕಾದಂಬರಿಯಲ್ಲಿ ಸಾಧನೆಯ ಮಾರ್ಗ 'ತಂತ್ರ'ವನ್ನು ಪರಿಚಯಿಸಲಾಗಿದೆ. ವಾಮಾಚಾರಿ ಗುರುವಿನ ಮಾರ್ಗದರ್ಶನದಲ್ಲಿ ನಾಗಭಟ್ಟ ತಾಂತ್ರಿಕ ಮಾರ್ಗವನ್ನು ಅನುಸರಿಸುತ್ತಾನೆ. ವಾಮಾಚಾರದ ಮಾರ್ಗದ ವಿಧಿ ವಿಧಾನಗಳು ವಿವರವಾಗಿ ನಿರೂಪಣೆಯಾಗಿವೆ. ನಾಗಭಟ್ಟನ ಮನಸ್ಥಿತಿ ಶೂನ್ಯಕ್ಕೆ ತಿರುಗುತ್ತದೆ. ಗ್ರಹಸ್ಥಾಶ್ರಮದಿಂದ ವಿಮುಖನಾದದ್ದಕ್ಕೆ ಈ ಸ್ಥಿತಿ ಎಂದು ಅವನುಭಾವಿಸುತ್ತಾನೆ. ನದಿ ದಂಡೆಯ ಅಶ್ವತ್ಥಕಟ್ಟೆಯಲ್ಲಿ ಕುಳಿತು ಪ್ರಯಾಗದ ಸೌಂದರ್ಯ ಸವಿಯುವಾಗ ಅವನ ಹಿಂಬದಿಯಿಂದ '' ಸಹಸ್ರಾರವು ಇದಕ್ಕಿಂತ ಅಲೌಕಿಕ ಪ್ರಕಾಶದ್ದಾಗಿರುತ್ತದೆ ಬೇಕಾದಾಗ ಸಾಕ್ಷಾತ್ಕರಿಸಿಕೊಂಡು ನೋಡಬಹುದು ''ಸಹಸ್ರಾರವೆಂಬುದು ಯೋಗಸಾಧನೆಯಲ್ಲಿ ಬರುವ ಒಂದು ಸ್ಥಿತಿ. ಯೋಗಭ್ಯಾಸ ಮಾಡಿ ಧ್ಯಾನದ ಮೂಲಕ ಅನ್ಯರ ಮನಃಪ್ರವೇಶ ಸಾಧ್ಯಮಾಡಿಕೊಳ್ಳುತ್ತಾನೆ ನಂತರ ವಾಮಾಚಾರದ ಮಾರ್ಗಗಳನ್ನು ಅನುಸರಿಸುತ್ತಾನೆ ಒಬ್ಬ ತಾಂತ್ರಿಕ ಗುರುವಿನ ಸಹಾಯದಿಂದ 'ತಂತ್ರ'ವನ್ನು ಸಾಧನೆ ಮಾಡಿಕೊಳ್ಳಲು ತೊಡುಗುತ್ತಾನೆ.

ನಾಗಭಟ್ಟ ಪಂಚ 'ಮ'ಕಾರಗಳಲ್ಲಿ ಮಧ್ಯ, ಮಾಂಸ, ಮತ್ಸ್ಯ, ಮುದ್ರೆಗಳನ್ನು ಜೀವನ ವಿಧಾನವಾಗಿ ಅಳವಡಿಸಿಕೊಳ್ಳುತ್ತಾನೆ. ಕೊನೆಗೆ ಮೈಥುನವನ್ನು ಅನುಷ್ಠಾನ ಮಾಡಲು ಹೊರಡುತ್ತಾನೆ. ಮೈಥುನ ಯೋನಿಪೂಜೆಯ ಒಂದು ಅಂಗ '' ನಟಿ, ಕಾಪಾಲಿಕೆ, ವೇಶ್ಯೆ, ರಜಕೀ,ನಾಪಿತಂಗನಾ, ಬ್ರಾಹ್ಮಣಿ, ಶೂದ್ರ ಕನ್ಯಾಕಾ, ಮೂಲಕಾಸ್ಯಕನ್ಯಾ'' ಈ ಒಂಬತ್ತು ಸ್ತ್ರೀಯರಲ್ಲಿ ನಟಿಯ ಯೋನಿ ಪೂಜೆ ಮಾಡುವ ನಿರ್ಧಾರಕ್ಕೆ ಬರುತ್ತಾನೆ. ಚಂದ್ರಿಕೆಯೂ ಇವನ ಕೋರಿಕೆಯನ್ನು ಒಪ್ಪುತ್ತಾಳೆ. ಅಮವಾಸ್ಯೆಯ ದಿನ ಈ ಯೋನಿ ಪೂಜೆಗೆ ತೊಡುಗುತ್ತಾನೆ 'ಸ್ತ್ರೀ' ಯನ್ನು ಶಕ್ತಿಯೆಂದು ಭಾವಿಸಿ ಈ ಪೂಜೆ ನೆರವೇರಿಸುವ ಕ್ರಿಯೆ ಕಾದಂಬರಿಯಲ್ಲಿ ಮೂಡಿ ಬಂದಿದೆ. '' ಒಂದು ಮಣ್ಣಿನ ಪಾತ್ರೆಯಲ್ಲಿನ ಭಾಂಗಿನ ಪುಡಿಯನ್ನು ಕದಡಿ ಕರಗಿಸಿದೆ, ಒಂದು ಬಟ್ಟೆಯಂಚಿಗೆ ಕಟ್ಟಿ ತಂದಿದ್ದ ಅರಿಶಿನ ಕುಂಕುಮಗಳನ್ನು ತೆಗೆದು ಪ್ರತ್ಯೇಕವಾಗಿಟ್ಟೆ ... ಎಣ್ಣೆ, ಬತ್ತಿಗಳ ಎರಡು ಹಣತೆಗಳನ್ನು ಹೊತ್ತಿಸಿ ಅರಿಶಿಣ ಕುಂಕಮಗಳಿಂದ ಮಂಡಲ ಮಾಡಿದ ಮೇಲೆ ತಾನುಟ್ಟಿದ್ದ

ವಸ್ತ್ರಗಳನ್ನು ಕಳಚಿ ನಾನು ತಂದಿದ್ದ ಅರಿಶಿನ ಕುಂಕುಮಗಳಲ್ಲಿ ನೆನೆಸಿ ಒಣಗಿಸಿದ್ದ ವಸ್ತ್ರಗಳನ್ನು ಉಡುವಂತೆ ಹೇಳಿದೆ ಅವಳ ವಿಧೇಯತೆಯಿಂದ ಪಾಲಿಸಿದಳು. ಅವಳನ್ನು ಮಂಡಲದ ಮಧ್ಯದಲ್ಲಿ ಕೂರಿಸಿ 'ವಿಜಯಾ' ಎಂದು ಕರೆಯುವ ಭಾಂಗಿನ ಕಷಾಯವನ್ನು ಅರ್ಧಕುಡಿಸಿದೆ ಉಳಿದ ಅರ್ಧವನ್ನು ನಾನು ಕುಡಿದ ನಂತರ ಯೋನಿ ಮಂತ್ರಗಳನ್ನು ಹೇಳತೊಡಗಿದೆ'' (ಸಾರ್ಥ, ಪು-೧೧೮) ಈ ಯೋನಿ ಮಹಾತ್ಮೆಯ ಮಂತ್ರಗಳು ಕಾದಂಬರಿಯಲ್ಲಿ ಬಳಕೆಯಾಗಿವೆ ಒಂದನ್ನು ನೋಡಬಹುದು

'' ಯೋನಿಯ ಮೂರು ಮೂಲೆಗಳಲ್ಲಿ ಸೃಷ್ಟಿ ಸ್ಥಿತಿ ಲಯ ಶಕ್ತಿಗಳಾದ ಬ್ರಹ್ಮ, ವಿಷ್ಣು ಮಹೇಶ್ವರರುಗಳಿದ್ದಾರೆ, ಯೋನಿಯ ಪಾರ್ಶ್ವದಲ್ಲಿ ಕಾಲಿಕೆಯೂ, ಯೋನಿಯ ಉರ್ಧ್ವದಲ್ಲಿ ತ್ರಿಪುರ ಸುಂದರಿಯೂ ಯೋನಿ ಗರ್ತದಲ್ಲಿ ಚಿನ್ನಾಮಸ್ತೆಯೂ..ಸ್ಥಿತರಿದ್ದಾರೆ .''(ಸಾರ್ಥ, ಪು-೧೧೯) ಈ ರೀತಿ ಇಡೀ ರಾತ್ರಿ ಮಂತ್ರಗಳನ್ನು ಹೇಳುತ್ತಾ ಚಂದ್ರಿಕೆಯೊಡನೆ ಮೈಥುನದಲ್ಲಿ ತೊಡುಗುತ್ತಾನೆ.

ಚಂದ್ರಿಕೆ ಮತ್ತು ನಾಗಭಟ್ಟ ಮಧ್ಯ ಈ ಯೋನಿ ಪೂಜೆಯ ಬಗ್ಗೆ ತಾತ್ವಿಕ ಚರ್ಚೆ ನಡೆಯುತ್ತದೆ. ಚಂದ್ರಿಕೆ 'ಮಾತೃಯೋನಿಯನ್ನು ಪೂಜಿಸಬಹುದೆ ಮೊನ್ನೆ ನೀನು ಆಡಿದಂತೆ' ಎಂದು ಪ್ರಶ್ನಿಸುತ್ತಾಳೆ. 'ಪೂಜಿಸಬಹುದು ಆದರೆ ಮೈಥುನವು ನಿಷಿದ್ಧ' ಎಂದು ಉತ್ತರಿಸುತ್ತಾನೆ ನಾಗಭಟ್ಟ ಮುಂದುವರೆದು ಅದು ಜನ್ಮ ಸ್ಥಾನವಾಗಿರುವುದರಿಂದ ಪೂಜಾರ್ಹ ಮಾತ್ರ ಎನ್ನುತ್ತಾನೆ.

''ನೀನು ಪೂಜೆ ಮಾಡುವಾಗ ಸಕಲ ಪ್ರಪಂಚದ ಜನ್ಮ ಸ್ಥಾನ ಮಹಾಮಾಯಾ ತತ್ವ ಭಾವನೆಯಲ್ಲಿಯೇ ಮಾಡುತ್ತೀಯಾ ಮೈಥುನದಲ್ಲಿ ತೊಡುಗುವಾಗ ನೀನು ಮಹಾಮಾಯೆಯೊಡನೆ ಸಂಯೋಗವಾಗುವ ಮಹೇಶ್ವರ ತತ್ವ ಎಂಬ ಭಾವನೆಯಲ್ಲಿರಬೇಕು ಶುದ್ಧ ತತ್ವ ರೂಪದಲ್ಲಿ ಕಲ್ಪಿಸಿಕೊಳ್ಳುವಾಗ ಇದು ಮಾತೃ, ಇದು ಪತ್ನಿ ಎಂಬ ಭೇದವೇ ಸಲ್ಲ ಹೀಗಿರುವಾಗ ಮಾತೃಯೋನಿ ಮೈಥುನವೇಕೆ ನಿಷಿದ್ಧವಾಗಬೇಕು. ? '' ಎಂಬ ಪ್ರಶ್ನೆಗೆ ನಾಗಭಟ್ಟ ಈ ರೀತಿ ಉತ್ತರಿಸುತ್ತಾನೆ.

ತತ್ವರೂಪದಲ್ಲಿ ಎಲ್ಲವೂ ಸರಿ ಆದರೆ ಪೂಜೆಯು ಮೈಥುನ ಭಾಗವು ಇಂದ್ರಿಯ ಮಟ್ಟದಲ್ಲಿ ನಡೆಯುವ ಕ್ರಿಯೆ ಇಂದ್ರಿಯದ ಸಹಕಾರವಿಲ್ಲದೆ ಅದು ನಡೆಯುವುದೆ ಇಲ್ಲ (ಸಾರ್ಥ, ಪು-೧೨೫,೧೨೬) ಆದ್ದರಿಂದ ಯೋಗ್ಯವಲ್ಲ ಎನ್ನುವ ಅಭಿಪ್ರಾಯವನ್ನು ಚಂದ್ರಿಕೆ ಒಪ್ಪುವುದಿಲ್ಲ. ಅವಳು ಈ ರೀತಿ ವಿವರಿಸುತ್ತಾಳೆ.

''ತತ್ತ್ವವನ್ನು ಇಂದ್ರಿಯಕ್ಕಿಳಿಸಿದರೆ ಅದು ತತ್ತ್ವವಾಗುಳಿಯುವುದಿಲ್ಲ ಅಸಹ್ಯಕರವಾಗುತ್ತದೆ ಅನ್ನುವ ಮಾತು ಬೇರೆ ಯಾವ ಯೋನಿಯನ್ನಿಟ್ಟುಕೊಂಡು ಪೂಜೆ ಮಾಡಿದರು ನಿಜವಾಗಬೇಕು ; ಅಸಹ್ಯಕರವೂ ಆಗಬೇಕು, ತತ್ವದ ಮಟ್ಟದಲ್ಲಿ ಯೋನಿ ಅಂದರೆ ಕಾರಣ ಮಹಾಕಾರಣ ವಿಶ್ವ ಸೃಷ್ಟಿಯ ಕಾರಣ ತತ್ವ ಅದನ್ನು ಧ್ಯಾನದಲ್ಲಿ ಸಾಕ್ಷಾತ್ಕಾರಿಸಿಕೊಂಡು ದಾಟಿ ಹೋಗಬೇಕು.'' (ಸಾರ್ಥ, ಪು-೧೨೬) ಎಂದು ಗಹನವಾದ ತಾತ್ವಿಕ ವಿಚಾರಗಳ ಆಚರಣೆಗಳ ತತ್ವವನ್ನು 'ತಂತ್ರ'ಕ್ಕೆ ಸಂಬಂಧಪಟ್ಟು ಮಾಡುತ್ತಾರೆ.

ಇಡೀ ಕಾದಂಬರಿ ವೈದಿಕ ಧರ್ಮಕ್ಕೆ ವಿರುದ್ಧವಾಗಿ ಸಮೃದ್ಧವಾಗಿ ಬೆಳೆದ ಬೌದ್ಧ ಧರ್ಮದ ನೆಲೆಗಳನ್ನು ಗುರುತಿಸುತ್ತದೆ. ಬೌದ್ಧ ದರ್ಮಕ್ಕೆ ಚಕ್ರವರ್ತಿಗಳ ಆಶ್ರಯ ದೊರೆತದ್ದು ಮತ್ತು ನಾಲಂದಾದಂತ ವಿಶ್ವವಿದ್ಯಾಲಯದ ಕಾರ್ಯ ಬೌದ್ಧ ಧರ್ಮಕ್ಕೆ ಉತ್ತಮ ನೆಲೆ ಒದಗಿಸಿಕೊಳ್ಳಲು ಸಹಾಯಕವಾಯಿತು.

ಬೌದ್ಧ ಧರ್ಮದಲ್ಲಿ ಮುಖ್ಯವಾದ ಧಾರ್ಮಿಕ ಕ್ರಿಯೆಗಳಲ್ಲಿ 'ಧರ್ಮ ಪ್ರಸಾರ ಕಾರ್ಯವೂ ಒಂದು' ಈ ಅನುಕೂಲ ವೈದಿಕ ಧರ್ಮಕ್ಕೆ ಇಲ್ಲದಿರುವುದನ್ನು ನಾಗಭಟ್ಟ ಗುರುತಿಸುತ್ತಾನೆ. 'ನಾಲಂದದ ಮಾದರಿಯ ಬಾರಿ ಪ್ರಮಾಣದ ವಿದ್ಯಾ ಸಂಸ್ಥೆಗಳು ವೈದಿಕರಿಗೆ ಇರಲಿಲ್ಲ. ನಮ್ಮದೇನಿದ್ದರೂ ಅಗ್ರಹಾರಗಳಲ್ಲಿ ನೆಲೆಸಿದ ಪಂಡಿತರುಗಳಲ್ಲಿ ಒಬ್ಬರನ್ನು ಆಶ್ರಯಿಸಿ ಅವರ ಮನೆಯಲ್ಲೇ ಇದ್ದು ಸೇವೆ ಮಾಡಿ ವಿದ್ಯಾಸಂಪಾದನೆ ಮಾಡುವ ಕ್ರಮ ಕಾಶಿಯು ಅಷ್ಟೆ, ಉಜ್ಜಯನಿಯೂ ಅಷ್ಟೆ, ರಾಜಸಹಾಯವೂ ಇಲ್ಲ' (ಸಾರ್ಥ, ಪು-೧೬೭)

ವಜ್ರಪಾದರು ಬೌದ್ಧ ಧರ್ಮಕ್ಕೆ ಸಲ್ಲಿಸಿದ ಸೇವೆಯ ಬಗ್ಗೆ ಕಾದಂಬರಿ ಗುರುತಿಸಿದರೂ ಅವರು ಕೇವಲ ಬೌದ್ಧ ಧರ್ಮ ಪಕ್ಷಪಾತಿ ಎಂಬಂತೆ ಚಿತ್ರಿಸಲಾಗಿದೆ.

ನಾಲಂದ ವಿಶ್ವವಿದ್ಯಾಲಯದ ಕೀರ್ತಿ, ಘನತೆ ಕೇಳಿ ನಾಗಭಟ್ಟ ನಾಲಂದ ವಿಶ್ವ ವಿದ್ಯಾಲಯಕ್ಕೆ ಬರುತ್ತಾನೆ. ಈ ವೇಳೆಯಲ್ಲಿ ಬೌದ್ಧ ಧರ್ಮ ಕೇವಲ ಭಾರತದಲ್ಲಿ ಅಷ್ಟೇ ಅಲ್ಲ ಸಿಂಹಳ, ಚೀನಾ, ಕೋರಿಯಾ ಮುಂತಾದ ದೇಶಗಳಲ್ಲಿ ಜನಪ್ರಿಯವಾದ ಬಗ್ಗೆ ಕಾದಂಬರಿಯಲ್ಲಿ ಪ್ರಸ್ತಾಪವಿದೆ.

ವೈದಿಕ ಧರ್ಮವನ್ನು ತ್ಯಜಿಸಿ ಬೌದ್ಧ ಧರ್ಮಕ್ಕೆ ಶರಣು ಬಂದವರು ವೈದಿಕ ಧರ್ಮದಲ್ಲಿ ಯಾವ ಲೋಪವನ್ನು ಕಂಡರು ಎನ್ನುವ ಜಿಜ್ಞಾಸೆ ನಾಗಭಟ್ಟನಲ್ಲಿ ಮೂಡುತ್ತದೆ. ಘಟಾನುಘಟಿಗಳಾದ ಮೊಗ್ಗಲಾನ, ಸಾರಿಪುತ್ತ, ನಾಗಸೇನ,ವಸುಬಂಧು, ನಾಗಾರ್ಜುನ, ಭರ್ತೃಹರಿ, ಅಶ್ವಘೋಷ, ದಿವಾಕರಸೇನ, ಶೀಲಭದ್ರ ಈ ಮೊದಲಾದವರು ಹುಟ್ಟಿನಿಂದ ವೈದಿಕರು. ಇವರೆಲ್ಲ ಬೌದ್ಧ ಧರ್ಮದ ಕಡೆಗೆ ಹೊರಳಲು ಕಾರಣಗಳೇನು ? ಎನ್ನುವ ಚಿಂತೆ ಅವನನ್ನು ಕಾಡುತ್ತದೆ. '' ವೇದ ವೇದಾಂಗಗಳು ಬರಡೆಂದು ಮನಗಂಡರೆ ? ಯಜ್ಞಯಾಗಾದಿಗಳು ದೊಂಬರಾಟವೆಂದು ಗ್ರಹಿಸಿದರೆ ? ಉಪನಿಷತ್ತಿನ ಪೂರ್ಣವು ವಾಸ್ತವತೆ ಇಲ್ಲದ ಅಮಲಿನ ಕಲ್ಪನೆಯೆಂಬ ತೀರ್ಮಾನಕ್ಕೆ ಬಂದರೆ? ಶಾಶ್ವತವೆಂಬುದಿಲ್ಲ ಆತ್ಮನೆಂಬ ಶಾಶ್ವತ ವಸ್ತುವೂ ಸುಳ್ಳು, ಕ್ಷಣಿಕತ್ವನೇ ಸತ್ಯ. ಶಾಶ್ವತ ವಸ್ತುವಿನ ಕಲ್ಪನೆಯೇ ಸಕಲ ಆಶೆಗಳಿಗೂ ಆಧಾರ ಅದನ್ನು ಗುಳ್ಳೆಯಂತೆ ಒಡೆಯದಿದ್ದರೆ ದುಃಖದ ಮೂಲವನ್ನು ತೊಡೆಯುವುದು ಸಾಧ್ಯವಿಲ್ಲವೆಂದು ನಂಬಿದರೆ ? ಇಂತ ಪರಿವರ್ತಿತರ ಸತ್ವವನ್ನು ಆಕರ್ಷಿಸಿಕೊಂಡೇ ಬೌದ್ಧ ಧರ್ಮವು ಇಷ್ಟೊಂದು ಬೆಳೆದು ವ್ಯಾಪಿಸಿತೆ. ? ಬೌದ್ಧ ಬಿಕ್ಕುಗಳಿಗೆ ಜಾತಿ ಭೇದವಿಲ್ಲ, ಬುದ್ದನ ಪ್ರಿಯ ಶಿಷ್ಯರೊಲ್ಲಬ್ಬನಾದ ಉಪಾಲಿಯು ಹುಟ್ಟಿನಿಂದ ನಾಪಿತ. ವೈದಿಕ ಸಮಾಜದಲ್ಲಿ ಬೆಳೆದು ಬೇರು ಬಿಟ್ಟ ಜಾತಿ ಪದ್ಧತಿಗೆ ಹೇಸಿ ಈ ವಿದ್ವಾಂಸರೆಲ್ಲ ವೈದಿಕ ಮತವನ್ನು ತ್ಯಜಿಸಿ ಬೌದ್ಧರಾಗಿ ಹೊಸ ಧರ್ಮದ ಪ್ರಚಾರಕರಾದರೇ ? ಹೀಗೆ ಅನೇಕ ವಿಷಯಗಳು ನಾಗಭಟ್ಟನನ್ನು ಆತ್ಮವಿಮರ್ಶೆ ಮಾಡಿಕೊಳ್ಳಲು ತೊಡಗಿಸುತ್ತವೆ.ವೈದಿಕ ಧರ್ಮ ತನ್ನ ಜನಪ್ರಿಯತೆ ಕಳೆದುಕೊಳ್ಳಲು ಜಾತಿಪದ್ಧತಿಯಂತ ಅನಿಷ್ಟಗಳೇ ಕಾರಣವೆಂದು ತರ್ಕಿಸುತ್ತಾನೆ. ವೈದಿಕ ಧರ್ಮಾಚರಣೆಗಳು ಮತ್ತು ಬೌದ್ಧ ಧಾರ್ಮಿಕ ಆಚರಣೆಗಳನ್ನು ತೌಲನಿಕವಾಗಿ ಕಟ್ಟಿಕೊಡಲಾಗಿದೆ.

ವೈದಿಕ ಮತದ ರಕ್ಷಣೆಗಾಗಿಯೇ ಜನ್ಮವೆತ್ತಿದಂತೆ ತೋರುವ ಮಂಡನಮಿಶ್ರ, ಮತ್ತು ಕುಮಾರಿಲಭಟ್ಟರ ಬಗ್ಗೆ ಸಾಕಷ್ಟು ವಿವರವಾದ ಸಂಗತಿಗಳು ಕಾದಂಬರಿಯಲ್ಲಿವೆ.

ಪ್ರಜ್ಞಾಘನರೆಂಬ ಹೆಸರಿನಿಂದ ಎಂಬತ್ತು ವರ್ಷದವರಿದ್ದಾಗ ನಾಲಂದದಲ್ಲಿ 'ಧರ್ಮಪಾಲ'ರಲ್ಲಿ ಶಿಷ್ಯತ್ವವನ್ನು ಕುಮಾರಿಲಭಟ್ಟರು ಸ್ವಿಕರೀಸುತ್ತಾರೆ. ಒಂದು ದಿನ ಧರ್ಮಪಾಲರು ಪ್ರವಚನದ ನಡುವೆ ವೇದ

ನಿಂದನೆ ಮಾಡುವುದನ್ನು ಸಹಿಸದೇ ಅತ್ತು ಬಿಡುತ್ತಾರೆ. ಧರ್ಮಪಾಲರಿಗೆ ತನ್ನೆದುರಿಗಿದ್ದ ವ್ಯಕ್ತಿ ಸುಳ್ಳು ಹೆಸರಿನಿಂದ ಶಿಷ್ಯತ್ವ ಪಡೆದ ಕುಮಾರಿಲಭಟ್ಟ ಎಂಬುದು ತಿಳಿಯುತ್ತದೆ. ಬೌದ್ಧ ಧರ್ಮದ ರಹಸ್ಯ ಸೂಕ್ಷ್ಮಗಳನ್ನು ತಿಳಿಯಲು ಹೀಗೆ ಇವರು ಬಂದು ಸೇರಿದ್ದಾರೆಂದು ಭಾವಿಸುತ್ತಾರೆ. ಕುಮಾರಿಲಭಟ್ಟರೇನು ಸಾಮಾನ್ಯರಲ್ಲ, ಶ್ಲೋಕ ವಾರ್ತಿಕ, ತಂತ್ರವಾರ್ತಿಕ ಮತ್ತು ಟುಪಟಿಕ ಎಂಬ ಅವರ ವ್ಯಾಖ್ಯಾನಗಳು ಪ್ರಸಿದ್ಧವಾದವು. ಮಂಡನ ಮಿಶ್ರನ ಹೆಂಡತಿ ಭಾರತಿದೇವಿ ಕಮಾರಿಲಭಟ್ಟನ ತಂಗಿ. ಕಮಾರಿಲಭಟ್ಟ ಬೌದ್ಧ ಪಂಡಿತರನ್ನೆಲ್ಲ ವಾದಕ್ಕೆ ಆಹ್ವಾನಿಸುತ್ತಾನೆ ಈ ವಾದದಲ್ಲಿ ಸೋತರೆ ತಾನು ಬೌದ್ಧನಾಗುತ್ತೇನೆ, ನೀವು ಸೋತರೆ ವೈದಿಕ ಮತ ಸ್ವೀಕರಿಸಬೇಕೆಂಬ ಆಹ್ವಾನ ನೀಡುತ್ತಾನೆ. ಆದರೆ ಪಂಡಿತ ಧರ್ಮಪಾಲರು ಈ ಆಹ್ವಾನವನ್ನು ತಿರಸ್ಕರಿಸುತ್ತಾರೆ.

'' ಇಂಥ ಅಪ್ರಾಮಾಣಿಕ ಉದ್ದೇಶದ ವಿದ್ಯಾರ್ಥಿ ಇರುವ ವೃಂದದಲ್ಲಿ ನಾನು ಪ್ರವಚನ ಮಾಡುವುದಿಲ್ಲ. ತನ್ನ ಮತದಲ್ಲಿ ಸತ್ಯವಿದ್ದರೆ ಹೀಗೆ ಕಳ್ಳತನದಿಂದ ನುಸುಳಿ ಬಂದು ನಮ್ಮದನ್ನು ಕಲಿಯುವ ಅಗತ್ಯವೇ ಇರಲಿಲ್ಲ. ವ್ಯಕ್ತಿಯಲ್ಲಿಯೇ ಪ್ರಾಮಾಣಿಕತೆಯ ಶುದ್ಧಿಯಿಲ್ಲವಾದಾಗ ಅವನ ವಾದದಲ್ಲಿ ಅದು ಹೇಗೆ ಸಾಧಿಸುತ್ತದೆ. ? ಇದುವರೆಗೆ ನಮ್ಮಲ್ಲಿ ಕಳ್ಳ ವಿದ್ಯಾರ್ಥಿಯಾಗಿದ್ದು ಪತ್ತೆಯಾದೊಡನೆ ವಾಗ್ವಾದಕ್ಕೆ ಕೂಡಿ ಎಂದು ನನ್ನ ಸಹೋದರರಿಗೆ ಹೇಳಲೇ ?ಈ ದಿನವೇ ನಾಲಂದದ ಮಹಾದ್ವಾರದಿಂದ ಆಚೆಗೆ ನಡೆಯಬೇಕು. ಇಲ್ಲದಿದ್ದರೆ ಹೊರ ದಬ್ಬಿಸುತ್ತೇನೆ.'' (ಸಾರ್ಥ, ಪು-೯೪) ಎಂದು ಧರ್ಮಪಾಲರು ಕುಮಾರಿಲಭಟ್ಟನಿಗೆ ಹೇಳಿ ಹೋದ ನಂತರ ದೈಹಿಕ ಹಲ್ಲೆಗೊಳಗಾದ ಕುಮಾರಿಲಭಟ್ಟರನ್ನು ಧರ್ಮಪಾಲರೆ ಔಷದೋಪಚಾರ ಮಾಡಿ ಸಂತೈಸುತ್ತಾರೆ.

ಕುಮಾರಿಲಭಟ್ಟರಿಗೆ ಗುರುವಿಗೆ ದ್ರೋಹ ಮಾಡಿದೆ ಎಂದೆನಿಸಿ ಗುರುವಿಗೆ ವಂಚನೆ ಮಾಡುವುದು ವೇದಬಾಹಿರ ಕರ್ಮ. ಒಟ್ಟಿನಲ್ಲಿ ನಾನು ವೇದ ದ್ರೋಹಿ, ಗುರು ದ್ರೋಹಿ ನನಗೆ ಪ್ರಾಯಶ್ಚಿತವಾಗಬೇಕು ಶಿಕ್ಷೆಯಾಗಬೇಕೆಂದು ತುಷಾನಿಲ ಪ್ರವೇಶ ಮಾಡಿ ದೇಹಾಂತ್ಯ ಮಾಡಿಕೊಳ್ಳತ್ತಾನೆ.

ಶಂಕರಚಾರ್ಯರ ಆಗಮನದಿಂದ ವೈದಿಕ ಧರ್ಮಕ್ಕೆ ಮತ್ತೆ ಪುನರುಜ್ಜೀವನ ದೊರೆಯುವ ಸಂಗತಿ ಕಾದಂಬರಿಯಲ್ಲಿದೆ. ಮಂಡನ ಮಿಶ್ರರು ವರ್ಣವ್ಯವಸ್ಥೆಯನ್ನು ಸಮರ್ಥಿಸಿಕೊಳ್ಳುತ್ತಾರೆ. ಆದರೆ ಸನ್ಯಾಸ ಜೀವನವನ್ನು ಒಪ್ಪುವುದಿಲ್ಲ, ಕರ್ಮಮಾರ್ಗದಲ್ಲಿ ದುಡಿದು ತಿನ್ನಬೇಕು, ಬೌದ್ಧ ಬಿಕ್ಷುವಾಸಿಸುವ ಕಡೆ ಕ್ಷಾಮ ಇದೆ ಎನ್ನುತ್ತಾರೆ. ನಂತರ ಮಂಡನ ಮಿಶ್ರರು ಶಂಕರಚಾರ್ಯರರಿಗೆ ವಾದದಲ್ಲಿ ಸೋತು ಸನ್ಯಾಸವನ್ನು ಸ್ವೀಕರಿಸುತ್ತಾರೆ. ನಾಗಭಟ್ಟನಿಗೆ ಕುಮಾರಿಲಭಟ್ಟ ಮತ್ತು ಮಂಡನ ಮಿಶ್ರರ ಮಾತಿನಿಂದ ಭಾರತದ ಸ್ಥಿತಿಗತಿ ಅರ್ಥವಾಗುತ್ತದೆ. ನಾಸ್ತಿಕ ಮತದ ರಾಜರ ಆಳ್ವಿಕೆಯಿಂದ ದೇಶ ನಿರ್ವೀರ್ಯವಾಗುತ್ತಿದೆ ಎಂದು ತಿಳಿದುಕೊಳ್ಳುತ್ತಾನೆ.

''ಶ್ರಮಣರುಜೈನರು ಯಜ್ಞಯಾಗಾದಿಗಳನ್ನು ಕುಹಕಮಾಡಿ ಅದು ತಪ್ಪು ಎಂಬ ಭಾವನೆಯನ್ನು ಕ್ಷತ್ರಿಯರಲ್ಲಿ ಬೆಳೆಸಿ ಬಿಟ್ಟಿದ್ದಾರೆ. ಆ ಕುಹಕಕ್ಕೆ ಬಲಿಬಿದ್ದ ಕೆಲವು ಬ್ರಾಹ್ಮಣರಿಗೂ ಅರೆನಂಬಿಕೆ ಅಂಜುಗುಳಿತನ ಬಂದು ಬಿಟ್ಟಿವೆ. ಅಶೋಕ ಚಕ್ರವರ್ತಿಯಿಂದ ಹಿಡಿದು ಇದುವರೆಗೆ ಹಲವು ಕಡೆಗಳಲ್ಲಿ ಬೌದ್ಧ ರಾಜರೂ ಆಳಿ ಭಾರತಖಂಡ ನಿರ್ವೀರ್ಯವಾಗಿದೆ. ಕ್ಷತ್ರೀಯ ಧರ್ಮವೇ ತೇಜೋ ಹೀನವಾಗಿದೆ.'' (ಸಾರ್ಥ,

ಪು-೨೦೯) ಎಂದು ಕುಮಾರಿಲಭಟ್ಟರು ಹೇಳುವ ಮಾತುಗಳು ಶಾಂತಿಯಿಂದ ಹಿಂಸೆಯತ್ತ ತಿರುಗುವ ವಿಚಾರವುಳ್ಳವುಗಳಾಗಿವೆ. ಯುದ್ಧದ ಅರ್ಥಹೀನತೆಯನ್ನು ಅಂಥ ಅಶೋಕನ ತ್ಯಾಗವನ್ನು ಬೇರೊಂದು ರೀತಿಯಲ್ಲಿ ಅರ್ಥೈಸಿರುವುದು ತೋರುತ್ತದೆ.

ಜಯಸಿಂಹರಂತ ಅರಸರ ಅಶ್ವಮೇಧ ಯಾಗವನ್ನು ಕುಮಾರಿಲಭಟ್ಟರು ಸಮರ್ಥಿಸುತ್ತಾರೆ.

ಶಂಕರಚಾರ್ಯ ಮತ್ತು ಮಂಡನ ಮಿಶ್ರರ ಮಧ್ಯ ಕರ್ಮ, ಸನ್ಯಾಸ, ಗ್ರಹಸ್ಥಾಶ್ರಮದ ಕುರಿತು ಚರ್ಚೆ ನಡೆಯುತ್ತದೆ. ಗ್ರಹಸ್ಥಾಶ್ರಮವೇ ಜೀವಿತದ ಸರ್ವೊತಕೃಷ್ಟ ಹಾಗೂ ಪುಣ್ಯ ಸಂಪಾದನೆಯ ಕಾಲ ಮುಕ್ತಿಯು ಕರ್ಮಗಳಿಂದ ಮಾತ್ರ ದೊರೆಯುವುದು. ಗ್ರಹಸ್ಥಾಶ್ರಮದಲ್ಲಿ ಮಾತ್ರ ಸಂಪೂರ್ಣವಾಗಿ ಕರ್ಮನಿರತನಾಗಿರಲು ಸಾಧ್ಯ. ವೇದದ ಮಹಾಮಹಾ ಋಷಿಗಳೆಲ್ಲ ಗ್ರಹಸ್ಥರಾಗಿದ್ದರು. ಪತ್ನಿ ಪುತ್ರಾದಿಗಳನ್ನು ಹೊಂದಿದ್ದರು, ಯುದ್ಧವನ್ನು ಮಾಡುತ್ತಿದ್ದರು, ತಪಸ್ಸನ್ನು ಮಾಡುತ್ತಿದ್ದರು. ಸನ್ಯಾಸಿಗಳಾಗಿ ಸಮಾಜಕ್ಕೆ ಹೊರೆಯಾಗಿ ಇರಲಿಲ್ಲ ಸನ್ಯಾಶವೆನ್ನುವುದು ಶ್ರಮಣ ಧರ್ಮ. ವೈದಿಕ ಧರ್ಮವೇ ಅಲ್ಲ ಬುದ್ಧನು ಹಿಂಡುಗಟ್ಟಲೇ ಶಿಷ್ಯರಿಗೆ ತಲೆಬೋಳಿಸಿ ಕಷಾಯ ಕುಡಿಸಿ ಸನ್ಯಾಸ ಧೀಕ್ಷೆ ಕೊಟ್ಟು ದುಡಿದು ತಿನ್ನುವುದು ತಪ್ಪಿಸಿ ಭಿಕ್ಷೆಯಿಂದ ಜೀವಿಸುವಂತೆ ಹೇಳಿ ಅವರಿಗೆಲ್ಲ ಭಿಕ್ಷುಗಳೆಂದು ನಾಮಕರಣ ಮಾಡಿದ. ಅವರು ಹೀಗೆಯೇ ಎಂಟು ದಿಕ್ಕುಗಳಿಗೆ ಹೋಗಿ ಹರಡಿ ಇನ್ನು ಸಾವಿರಾರು ಸಂಸಾರಿಗಳನ್ನು ಭಿಕ್ಷುಕರನ್ನಾಗಿ ಮಾಡಿದರು. ಭಿಕ್ಷುಕರ ಸಂಖ್ಯೆ ಹೆಚ್ಚಿರುವ ನಾಡಿನಲ್ಲಿ ಸುಭಿಕ್ಷೆ ಎಲ್ಲಿ ಬರಬೇಕು.? (ಸಾರ್ಥ, ಪು-೨೩೨.೨೩೩) ಎಂದು ಸನ್ಯಾಶದ ಪರಿಕಲ್ಪನೆಯನ್ನೇ ಮಂಡನ ಮಿಶ್ರರು ಅರ್ಥರಹಿತ ಎಂದು ತಿರಸ್ಕರಿಸುತ್ತಾರೆ. ಆದರೆ ಮಂಡನ ಮಿಶ್ರರ ವಾದವನ್ನು ಶಂಕರರು ಒಪ್ಪುವುದಿಲ್ಲ ವೇದಗಳಿಂದಲೇ ಆಧಾರವನ್ನು ನೀಡಿ ಸಮರ್ಥಿಸಿಕೊಳ್ಳುತ್ತಾರೆ. ಕೇವಲ ಕರ್ಮ ಮಾರ್ಗಕ್ಕೆ ಮಹತ್ವ ಕೊಡದೇ ಜ್ಞಾನಮಾರ್ಗಕ್ಕೆ ಮಹತ್ವವನ್ನು ಕೊಡುತ್ತಾರೆ ಮೂರ್ತಿ ಪೂಜೆಯನ್ನು ಒಪ್ಪಿಕೊಂಡು ಶಂಕರಚಾರ್ಯರು ದೇವಾಲಯಗಳ ಜೀರ್ಣೊದ್ಧಾರ, ತಂತ್ರಮತದ ಅಂಶಗಳನ್ನು ಅವರು ಒಪ್ಪಿಕೊಂಡಿರುವ ಕಾರಣದಿಂದ ಸ್ಥಪತಿಗಳಿಗೆ ಅವರ ಸಿದ್ಧಾಂತ ಮೆಚ್ಚುಗೆ ಯಾಯಿತಲ್ಲದೇ ಉದ್ಯೋಗಗಳನ್ನು ಸೃಷ್ಟಿಸಿತು ಆದರೆ ಭಾರತಿ ದೇವಿಯ ''ಸುಷುಪ್ತಿಯಲ್ಲಿ ಆತ್ಮನು ಬ್ರಹ್ಮನೊಡನೆ ಐಕ್ಯನಾಗುತ್ತಾನೆಂದು ಒಂದು ಉಪನಿಷತ್ತು ತಿಳಿಸುತ್ತದೆ ಆ ಅವಧಿಯಲ್ಲ ಅವನ ಸ್ಥಿತಿಯನ್ನು ತನಗೆ ಪ್ರಿಯಳಾದ ಸ್ತ್ರೀಯ ಆಲಿಂಗನದಲ್ಲಿರುವ ಪುರುಷನ ಅನುಭವಕ್ಕೆ ಹೊಲಿಸಿದೆಯಂತೆ, ಆಗ ಅವನು ಯಾವುದೋ ಬಾಹ್ಯವಾದ ಮತ್ತು ಆಂತರವಾದ ಸಂಗತಿಗಳ ಅರಿವು ಇರದ ಆನಂದದ ಸ್ಥಿತಿಯಲ್ಲಿರುತ್ತಾನಂತೆ ಹಾಗಿದ್ದಲ್ಲಿ ಆ ಸ್ಥಿತಿಗೂ ಬ್ರಹ್ಮಜ್ಞಾನದ ಸ್ಥಿತಿಗೂ ಏನು ವ್ಯಾತ್ಯಾಸ ಎಂಬುದನ್ನು ತಿಳಿಸುತ್ತಿರಾ ಎಂಬ ಪ್ರಶ್ನೆಗೆ ಉತ್ತರ ಹೇಳಲು ಒಂದು ತಿಂಗಳು ಕಾಲಾವಕಾಶ ಕೋರಿ ಅಮುರುಕನ ಪರಕಾಯ ಪ್ರವೇಶ ಮಾಡಿ ಕಾಮನುಭವವನ್ನು ಶಂಕರಚಾರ್ಯರು ಪಡೆದುಕೊಳ್ಳುತ್ತಾರೆ. ನಂತರ ಭಾರತಿದೇವಿ ಎತ್ತಿದ ತಾತ್ವಿಕ ವಿಚಾರಕ್ಕೆ ಉತ್ತರವನ್ನು ಕೊಡುತ್ತಾರೆ.

ವೈದಿಕ ಧರ್ಮದಿಂದ ದೂರ ಸರಿದಿದ್ದ ನಾಗಭಟ್ಟ ವೈದಿಕ ಧರ್ಮ ರಕ್ಷಣೆಗೆ ಸಿದ್ಧನಾಗುತ್ತಾನೆ. ರಾಷ್ಟ್ರಕೂಟರಿಗೆ ತಮ್ಮ ರಾಜ್ಯದ ಸಮೃದ್ಧಿಯೇ ಮುಖ್ಯವಾಗಿ ಮೇಚ್ಛರಿಗಿಗೆ ರೇವು ಕಟ್ಟಿಕೊಡಲು ಅವಕಾಶ ಕೊಡುತ್ತಾರೆ.

ನಾಗಭಟ್ಟ ಮತ್ತು ಚಂದ್ರಿಕೆಯರನ್ನು ಒಂದೂ ಗೂಡಿಸಿ ಜಯಂಸಿಹರು ಸಿಂಧೂ ದೇಶದಲ್ಲಿ ನಾಟಕ ಪ್ರದರ್ಶಿಸಿ ಜನರಲ್ಲಿ ಜಾಗೃತಿಯನ್ನುಂಟು ಮಾಡಿ ಮೇಚ್ಛರನ್ನು ಮೆಟ್ಟಿಸುವ ಉಪಾಯ ಉಡುತ್ತಾರೆ ಆದರೆ ಅವರು ಕ್ರೂರಿಗಳು. ಸೂರ್ಯ ದೇವಾಲಯವನ್ನು ನಾಶಪಡಿಸುವದಾಗಿ ಹೇಳುತ್ತಾರೆ. '' ಮೂಲ ವೈದಿಕ ಪದ್ಧತಿಯಲ್ಲಿ ವಿಗ್ರಹವೂ ಇಲ್ಲ. ಗುಡಿಯೂ ಇಲ್ಲ ದೇವಾಲಯ ನಾಶವಾದರೆ ಮತ್ತೇ ಕಟ್ಟಬಹುದು ಮೊದಲು ದೇಶ ರಕ್ಷಿಸುವ ಕಾರ್ಯದಲ್ಲಿ ಸಂಘಟಿತರಾಗೊಣ '' ಎಂದು ನಾಗಭಟ್ಟ ಹೇಳಿದರೆ ಇದನ್ನು ಗಂಭೀರವಾಗಿ ತೆಗೆದುಕೊಳ್ಳುವುದಿಲ್ಲ. ಕೊನೆಗೆ ನಾಗಭಟ್ಟ ಚಂದ್ರಿಕೆ, ವೇಷ ಧರಿಸಿ ಜನ ಸಂಘಟನೆಗೆ ತೊಡುಗಿದಾಗ ಮೇಚ್ಛರಿಗೆ ಸೆರೆಸಿಕ್ಕುತ್ತಾರೆ. ಸೆರೆಮನೆಯಲ್ಲಿರುವಾಗ ಮ್ಲೇಚ್ಛರಿಂದ ಅವಳ ಮೇಲೆ ಅತ್ಯಾಚಾರ ನಡೆಯುತ್ತದೆ. ಪರಿಣಾಮವಾಗಿ ಅವಳು ಬಸುರಿಯಾಗುತ್ತಾಳೆ. ಗುರುಗಳ ಸಲಹೆಯಂತೆ ಕೃಷ್ಣಾನಂದನನ್ನು ಮದುವೆಯಾಗಿ ಗ್ರಹಸ್ಥಾಶ್ರಮವನ್ನು ಸ್ವೀಕರಿಸು ಎಂದು ಬೋಧನೆಯಾಗುತ್ತದೆ. ಚಂದ್ರಿಕೆಯ ಅತ್ಯಾಚಾರದ ಗರ್ಭಕ್ಕೆ ಕೃಷ್ಣಾನಂದ ತಂದೆಯಾಗಲು ಮುಂದೆ ಬರುತ್ತಾನೆ.

'' ಲೌಕಿಕ ಬ್ರಾಹ್ಮಣ ಆಧ್ಯಾತ್ಮಿಕ ಮೂಲ ಜೀವನದ ಅರ್ಥದ ಹುಡುಕಾಟ ಕಾದಂಬರಿಯಲ್ಲಿ ಚಿತ್ರತವಾಗಿದೆ. ವೈದಿಕ ಧರ್ಮ ಮತ್ತು ವೈದಿಕ ತತ್ವವೇ ಕಾದಂಬರಿಯ ಕಥಾ ನಾಯಕ ಅದಕ್ಕೆ ಪರ್ಯಾಯವಾದ ಬೌದ್ಧ ಧರ್ಮವನ್ನು ಉದ್ಧಕ್ಕೂ ತುಲನಾತ್ಮಕವಾಗಿ ಪ್ರತಿನಾಯಕನ ಪಾತ್ರವಾಗಿ ಚಿತ್ರಿಸಿರುವುದು ಕಂಡು ಬರುತ್ತದೆ. ವೈದಿಕ ಮೂಲ ಧರ್ಮ ಮತ್ತು ಸಂಸ್ಕೃತ ಭಾಷೆಯ ಬಗ್ಗೆ ಕಾದಂಬರಿಕಾರರು ಉದ್ಧಕ್ಕೂ ಪ್ರಜ್ಞಾವಂತರಾಗಿದ್ದಾರೆ.'' ( ಎಸ್. ಎಲ್. ಭೈರಪ್ಪರವರ ಕೃತಿಗಳ ವಿಮರ್ಶೆ, ಸಂ:ಸುಮತೀಂದ್ರ ನಾಡಿಗ್, ಪು-೧೫೨/೧೫೩) ಎಂಬ ಕೆ. ಜ. ನಾಗರಾಜಪ್ಪನವರ ಅಭಿಪ್ರಾಯ ಸತ್ಯದಿಂದ ಕೂಡಿದೆ. ಈ ಭಾವನೆ ಓದುಗರಲ್ಲಿ ಉಂಟಾಗುವುದಕ್ಕೆ ಕಾದಂಬರಿಕಾರರು ನಿಷ್ಪಕ್ಷಪಾತ ದೃಷ್ಟಿ ಹೊಂದಿಲ್ಲದೇ ಇರುವುದಾಗಿದೆ. ಜನಸಮಾನ್ಯರಲ್ಲಿ ಬೆರತು ಹೋದ ಬೌದ್ಧ ಧರ್ಮವನ್ನು, ಅಶೋಕನ ತ್ಯಾಗವನ್ನು, ಮೆಚ್ಚುವ ಅಂಶಗಳೇ ಕಾದಂಬರಿಯಲ್ಲಿ ಕಾಣುವುದಿಲ್ಲ. ಬೌದ್ಧ ಧರ್ಮವೆಂದರೆ ನಾಸ್ತಿಕ ಧರ್ಮ, ಜನರನ್ನು ನೀರ್ವಿರ್ಯಗೊಳಿಸುವ ಧರ್ಮ ಎನ್ನುವ ರೀತಿಯಲ್ಲಿ ಹಳಿಯುತ್ತ ಸಾಗಿರುವುದನ್ನು ಕಾದಂಬರಿಯುದ್ದಕ್ಕೂ ಗಮನಿಸಬಹುದಾಗಿದೆ.

ಭೈರಪ್ಪನವರ ಕಾದಂಬರಿಗಳಲ್ಲಿ

# ಪಾತ್ರ ಚಿತ್ರಣ

ಭೈರಪ್ಪನವರ ಕಥನ ಕಲೆ ಎಷ್ಟು ಪರಿಣಾಮಕಾರಿಯಾದುದೋ ಅಷ್ಟೇ ಗಟ್ಟಿ ಪರಿಣಾಮವನ್ನು ಅವರ ಕಾದಂಬರಿಯ ಪಾತ್ರಗಳು ಬೀರುತ್ತವೆ. ಆದರೆ ಅವರ ಕಾದಂಬರಿಯಲ್ಲಿ ಬರುವ ಬಹುಪಾಲು ಪಾತ್ರಗಳು ಭೈರಪ್ಪನವರ ದೃಷ್ಟಿಕೋನ ಮತ್ತು ಧೋರಣೆಗಳನ್ನು ಸಿದ್ಧ ನೋಟದಿಂದ ಬಿಂಬಿಸುವ ದೌರ್ಬಲ್ಯಕ್ಕೆ ಕೆಲವು ಸಂದರ್ಭಗಳಲ್ಲಿ ಒಳಗಾಗುತ್ತವೆ. ಪಾತ್ರಗಳ ಹೊರಮೈಯನ್ನು ಮತ್ತು ಒಳಮೈಯನ್ನು ಅವರು ಕಟ್ಟಿಕೊಡುವ ರೀತಿ, ತುಂಬಾ ಸಶಕ್ತವಾಗಿಯೇ ಇದೆ. ಪ್ರಕೃತಿಯ ಕರೆಗೆ ಜಗ್ಗದ, ಸಂಯಮವನ್ನೇ ಉಸಿರಾಡುವ. ವಂಶವೃಕ್ಷದ ಶ್ರೀನಿವಾಸ ಶ್ರೋತ್ರಿ ಓದುಗರ ಮನಸ್ಸಿನಲ್ಲಿ ಬಹುಕಾಲದವರೆಗೆ ಉಳಿಯಬಲ್ಲ ಪಾತ್ರವಾಗಿದೆ. ಸನಾತನ ದರ್ಮದ ಪ್ರತಿರೂಪದಂತಿರುವ ಈ ಪಾತ್ರ ಸನಾತನ ಧರ್ಮದ ಮೌಲ್ಯಗಳನ್ನು ಬಿಟ್ಟು ಅಲ್ಲಾಡುವುದಿಲ್ಲ. ಬದಲಾದ ಸಾಮಾಜಿಕ ಸಂದರ್ಭದಲ್ಲಿಯೂ ಸಹಿತ ಸನಾತನ ಧರ್ಮದ ಮೌಲ್ಯಗಳೇ ಮಾರ್ಗದರ್ಶನವನ್ನು ನೀಡಬಲ್ಲವು ಎಂಬುದು ಅವರ ನಂಬಿಕೆ. ''ಧರ್ಮೋ ರಕ್ಷತಿ ರಕ್ಷಿತ'' ಎಂಬುದು ಅವರ ದೃಢವಾದ ನಂಬಿಕೆ. ದುಃಖ ಮತ್ತು ಸುಖವನ್ನು ಸಮಾನವಾಗಿ ಸ್ವೀಕರಿಸುವುದು ಅವರಿಗೆ ಅಭ್ಯಾಸವಾಗಿದೆ. ಕಾದಂಬರಿಕಾರರು ಈ ಪಾತ್ರ ಸಜೀವವಾಗಿ ನಮ್ಮ ಮುಂದೆ ನಿಲ್ಲುವಂತೆ ಈ ರೀತಿ ಚಿತ್ರಿಸುತ್ತಾರೆ.

''ಶ್ರೋತ್ರಿಯರ ಅಜಾನುಬಾಹು ವ್ಯಕ್ತಿತ್ವ, ನಡುಮನೆಯ ಬಾಗಿಲಿಗೆ ತಲೆ ತಾಕುವಂತಹ ಎತ್ತರ, ಅರವತ್ತನ್ನು ಸಮೀಪಿಸಿರುವ ವಯಸ್ಸಿನಲ್ಲೂ ತುಂಬಿದ ಮೈಕಟ್ಟು, ದಿನಕ್ಕೆ ಇಪ್ಪತ್ತು ಮೈಲಿಯನ್ನು ಮೀರಿ ನಡೆಯಬಲ್ಲ ದೇಹದಾರ್ಢ್ಯ. ಅಗಲವಾದ ಮುಖದಲ್ಲಿ ಸಾತ್ವಿಕ ಕಾಂತಿಯಿಂದ ಬೆಳಗುವ ಕಣ್ಣು'' (ವಂಶವೃಕ್ಷ ಪು -48)

ದೈಹಿಕವಾಗಿ ಅವರು ಪರಿಪೂರ್ಣ ನಿಲುವನ್ನು ಪಡೆದಂತವರು. ಅಂತೆಯೇ ಮಾನಸಿಕವಾಗಿ ಅಷ್ಟೆ ಗಟ್ಟಿತನ ಅವರಲ್ಲಿ ಕಂಡು ಬರುತ್ತದೆ. ಇದ್ದ ಒಬ್ಬ ಮಗ ನಂಜುಂಡ ಶ್ರೋತ್ರಿ ಕಪಿಲಾ ನದಿಯಲ್ಲಿ ಮುಳಗಿ ತೀರಿ ಹೋದಾಗಲೂ ದುಃಖವನ್ನು ಸಹಿಸಿಕೊಳ್ಳುತ್ತಾರೆ. ಸೊಸೆಗೆ ಭಗವದ್ಗೀತೆಯ ಮೂಲಕ ಮಾನಸಿಕ ಶಾಂತಿಯನ್ನು ಪಡೆದುಕೊಳ್ಳಲು ತಿಳಿಸುತ್ತಾರೆ. ಜ್ಞಾನಾರ್ಜನೆ ಮಾಡುವುದು ಅವರಿಗೆ ಸಂತಸದ ಸಂಗತಿ.

ಮಹಡಿಯ ಮೇಲೆ ಬೇರೊಂದು ಕೋಣೆಯನ್ನು ಗ್ರಂಥಾಲಯದ ರೂಪದಲ್ಲಿ ಪರಿವರ್ತಿಸಿಕೊಂಡಿರುವ ಅವರು ಸದಾ ಅಭ್ಯಾಸ ನಿರತರು. ಅವರ ಕೋಣೆಯಲ್ಲಿ ಓಲೆಗರಿಗಳು, ಅಚ್ಚಾದ ಗ್ರಂಥಗಳು ಮತ್ತು ಅವರೇ ಸ್ವತಃ ಕೈಬರಹದ ಪ್ರತಿ ಮಾಡಿದ ಕೆಲವು ಪುಸ್ತಕಗಳಿವೆ. ವೇದ, ಶಾಸ್ತ್ರ, ಪುರಾಣ, ಧರ್ಮಶಾಸ್ತ್ರ, ಆಯುರ್ವೇದಗಳ ಅಧ್ಯಯನ ಅವರಿಗೆ ಇಷ್ಟವಾದಂತಹದು. ಡಾ॥ ಸದಾಶಿವರಾಯರಂಥವರ ಗ್ರಂಥ ರಚನೆಗೆ ತಮ್ಮದೇ ಆದ ಜ್ಞಾನವನ್ನು ಒದಗಿಸುವ ಪಾಂಡಿತ್ಯ ಶ್ರೀನಿವಾಸ ಶ್ರೋತ್ರಿಯರಲ್ಲಿ ಇದೆ. ಅವರ ದಿನಚರಿ ಪ್ರಾರಂಭವಾಗುವುದು ಹೀಗೆ.

'' ಶ್ರೋತ್ರಿಯರು ಯಥಾ ರೀತಿ ಬೆಳಗಿನ ನಾಲ್ಕು ಗಂಟೆಗೆ ಎದ್ದು ಮನೆಯ ಹಿಂದೆ ನೂರು ಗಜ ದೂರದಲ್ಲಿ ಹರಿಯುತ್ತಿದ್ದ ಗುಂಡಲ ಹೊಳೆಯ ಕಡೆಗೆ ಹೋದರು. ಕೃಷ್ಣಪಕ್ಷವಾದುದರಿಂದ ಮುಗಿಲಿನಲ್ಲಿ ತಿಂಗಳಿರಲಿಲ್ಲ. ಶುಕ್ರಗ್ರಹ ಮಾತ್ರ ಹೊಳೆಯುತ್ತಿತ್ತು. ಆದರೆ ಮುಗಿಲ ತುಂಬ ನಗುವ ಚುಕ್ಕೆಗಳು ಅನಂತದ ಕಲ್ಪನೆಯನ್ನು ಮನಸ್ಸಿಗೆ ತಂದು ಕೊಡುತ್ತಿದ್ದವು. ಪ್ರಶಾಂತವಾದ ಮುಂಜಾವಿನಲ್ಲಿ ನಕ್ಷತ್ರಗಳ ಕೆಳಗೆ ನಡೆದು ಶೌಚಕಾರ್ಯ ಮುಗಿಸಿ ಅವರು ದನದ ಕೊಟ್ಟಿಗೆಗೆ ಬಂದರು. ಅವರ ಬರುವನ್ನು ಕಂಡು ಎದ್ದು ನಿಂತ ಹಸುಗಳ ಮೈತಡವಿ, ಯಾವ ಹಸು ಎಷ್ಟು ಹುಲ್ಲು ತಿಂದಿದೆ ಎಂದು ಪರಿಕ್ಷಿಸಿ, ಅವುಗಳನ್ನು ಹೊರಗೆ ಕಟ್ಟಿ ಅವರು ಒಳಗೆ ಬರುವ ವೇಳೆಗೆ ಭಾಗೀರತಮ್ಮನೂ ಎದ್ದಿದ್ದರು. ಒಂದು ಪಂಚೆ, ಒಂದು ತಂಬಿಗೆಯನ್ನು ಕೈಲಿ ಹಿಡಿದು ಶ್ರೋತ್ರಿಯರು ದೇವಸ್ಥಾನದ ಮುಂಬಾಗದಿಂದ ಮಣಿಕರ್ಣಿಕಾ ಘಟ್ಟಕ್ಕೆ ಹೋದರು ಕಪಿಲಿಯು ಶಾಂತಳಾಗಿ ಷಡ್ಜದ ಶ್ರುತಿಯಂತೆ ಹರಿಯುತ್ತಿದ್ದಳು. ನದಿಯಲ್ಲಿ ಮಿಂದು ಉಟ್ಟ ಪಂಚೆ ಒಗೆದು. ತಂಬಿಗೆಯಲ್ಲಿ ನೀರು ತುಂಬಿ ಅವರು ಮನೆಗೆ ಬರುವ ವೇಳೆಗೆ ಎಂದಿನಂತೆ ಕಾಗೆಗಳು ಕೂಗುತ್ತಿದ್ದವು.'' (ವಂಶವೃಕ್ಷ, ಪು - 21)

ಶ್ರೋತ್ರಿಯರು ರೂಪ ಕಣ್ಮುಂದೆ ಕಟ್ಟುತ್ತದೆ. ಅವರ ಗಾಂಭಿರ್ಯ ನಿಲುವು, ಕಾರ್ಯಶೈಲಿ, ಸ್ವಭಾವ ಪ್ರತಿಯೊಂದು ಜೀವಂತವಾಗಿ ರೂಪವನ್ನು ಪಡೆದು ಕೊಳ್ಳುತ್ತವೆ. ಓದುಗರ ಎದುರಿಗೆ ಶ್ರೋತ್ರಿಯವರ ಪ್ರತಿಯೊಂದು ಕ್ರಿಯೆ ಜರುಗುವ ಚಿತ್ರ ಕಟ್ಟಿಕೊಳ್ಳುತ್ತದೆ.

ಶ್ರೋತ್ರಿಯರ ಬದುಕು ಎಂದರೆ ಅದು ಸನಾತನ ಧರ್ಮದ ಬದುಕು. ವರ್ಣಾಶ್ರಮ ಧರ್ಮದಲ್ಲಿ ನಂಬಿಕೆ. ಗ್ರಹಸ್ಥನಾಗುವುದು ಎಂದರೆ ವಂಶದ ಮುಂದುವರಿಕೆಗಾಗಿಯೇ. ವಂಶ ಪ್ರಜ್ಞೆ ಅವರಲ್ಲಿ ಸದಾ ಜಾಗೃತವಾಗಿದೆ. ವಂಶದ ಬಗ್ಗೆ ಅಪಾರಗೌರವ ತಾಳಿದ ಅವರಿಗೆ ಶ್ರೋತ್ರಿಯ ವಂಶವೆಂಬುದು ಶ್ರೋತ್ರಗಳಷ್ಟೇ ಪುರಾತನವೆಂದು ನಂಬಿಕೆ. ಬರುವ ಉತ್ಪನ್ನವೆಲ್ಲವನ್ನು ದಾನ ಧರ್ಮಗಳಲ್ಲಿ ವಿನಿಯೋಗಿಸುವ ಉದಾರತೆ. ರಥೋತ್ಸವದ ಸಂದರ್ಭದಲ್ಲಿ ಸಮಾರಾಧಾನೆ ಮಾಡಿಸುವುದು. ವಿದ್ವಾಂಸರು, ಸಂಗೀತಗಾರರಿಗೆ ಸಂಭಾವನೆ ಕೊಡುವುದು. ಮಳೆ ಬೆಳೆಯಾಗದೇ ಹೋದರೆ ರೈತರಿಗೆ ಸಹಾಯ ಮಾಡುವ ಧಾರ್ಮಿಕ ಬುದ್ಧಿ ಅವರದು. ಅವರ ನೆನಪಿನ ಶಕ್ತಿ ಅಗಾಧವಾದುದು. ಮೂರು ವೇದಗಳಿಂದಲೂ ಶ್ಲೋಕಗಳನ್ನು ಉದ್ಧರಿಸಿ ಡಾ॥ ಸದಾಶಿವರಾಯರ ಜೊತೆ ಅವರ ಅಧ್ಯಯನ ಮತ್ತು ಗ್ರಂಥ ರಚನೆಯ ಕಾರ್ಯದಲ್ಲಿ ಸಹಕರಿಸುತ್ತಿದ್ದರು.

ಶ್ರೀನಿವಾಸ ಶ್ರೋತ್ರಿಯವರ ಮನಸ್ಸು ದೃಢವಾದುದು. ನಂಬಿದ ಜೀವನಾದರ್ಶಗಳನ್ನು ಅವರು

ಬಿಟ್ಟುಕೊಡುವುದಿಲ್ಲ. ಪ್ರಕೃತಿಗುಣಗಳಿಗೆ ಸೋಲುವುದು ಅವರ ಜಾಯಾಮಾನವಲ್ಲ. ಪ್ರಕೃತಿಯ ಹಿಡಿತದಿಂದ ಮುಕ್ತಿಹೊಂದದೆ ಮನಷ್ಯನಿಗೆ ಬಿಡುಗಡೆಯಿಲ್ಲ ಎಂದು ತಮ್ಮ ಅಧ್ಯಯನದಿಂದ ತಿಳಿದುಕೊಂಡುವರು. ತಾರುಣ್ಯದಲ್ಲಿಯೇ ಪ್ರಕೃತಿ ಸಹಜವಾದ ಕಾಮ ತೃಪ್ತಿಗೆ ವಂಚಿತರಾಗುವ ಸಂದರ್ಭ ಅವರಿಗೆ ಒದಗಿ ಬರುತ್ತದೆ. ಅವರ ಪತ್ನಿ ಭಾಗಿರಥಮ್ಮ ಮಗುವನ್ನು ಹೆತ್ತ ನಂತರ ಡಾಕ್ಟರು ಶ್ರೋತ್ರಿಯವರನ್ನು ಪ್ರತ್ಯೇಕವಾಗಿ ಕರೆದು ತಾಯಿ ಗರ್ಭಾಶಯದ ಅಳತೆಗಿಂತ ದೊಡ್ಡದಾಗಿ ಮಗು ಬೆಳೆದಿತ್ತು ಇದು ದೈಹಿಕವಾಗಿ ಅಸಮದಾಂಪತ್ಯ ಈ ಸಲ ಆಫರೇಷನ್ ಮಾಡಿದ್ದರಿಂದ ಅವರು ಉಳಿದರು ಪುನಃ ಗರ್ಭಿಣಿಯಾದರೆ ಸಾವು ಖಂಡಿತ ನೀವು ಇನ್ನು ಮೇಲೆ ದೈಹಿಕ ಸಂಬಂಧ ನಿಲ್ಲಿಸಬೇಕು. (ವಂಶವೃಕ್ಷ, ಪು-೧೪೬) ಇದಾದ ನಂತರ ಶ್ರೋತ್ರಿಯ ಶರೀರ ಸೊರಗಲು ಪ್ರಾರಂಭವಾಗುತ್ತದೆ. ಇದನ್ನು ಗಮನಿಸಿದ ಭಾಗೀರಥಮ್ಮ ಗಂಡನ ಮನಸ್ಸನ್ನು ಅರ್ಥ ಮಾಡಿಕೊಂಡು ಇದೇ ಕಾರಣಕ್ಕಾಗಿ ಇವರು ಹೀಗೆ ಸೊರಗಲು ಪ್ರಾರಂಭಿಸಿದ್ದಾರೆ ಎಂದು ತಿಳಿಯುತ್ತಾಳೆ. ಕಾಮತೃಪ್ತಿಯಿಂದ ವಂಚಿತರಾದ ಪತಿಗೆ ತಮ್ಮ ಮನೆಯಲ್ಲಿ ಇದ್ದ ಅನಾಥ ಲಕ್ಷ್ಮಿಯನ್ನು ಒಪ್ಪಿಸುತ್ತಾಳೆ. ಲಕ್ಷ್ಮಿಗೆ ಇದು ಅನೀತಿಯಾಗಿ ಕಾಣುವುದಿಲ್ಲ ಆದರೆ ಶ್ರೋತ್ರಿಗೆ ಧರ್ಮದ-ಕರ್ಮದ ಯೋಚನೆ ಕಾಡುತ್ತದೆ. ಮನಸ್ಸು ಚಂಚಲವಾದರೂ ಹಲವು ಬಾರಿ ಯೋಚಿಸಿ ಲಕ್ಷ್ಮಿಯಿಂದ ಕಾಮತೃಪ್ತಿಯನ್ನು ಹೊಂದುವ ವಿಚಾರವನ್ನೇ ಕೈ ಬಿಡುತ್ತಾರೆ. ಮನಸ್ಸನ್ನು ಹದಕ್ಕೆ ತಂದುಕೊಂಡು ಹುಲಿಯ ಚರ್ಮದ ಮೇಲೆ ಕುಳಿತು 'ಸಾಂಖ್ಯಕಾರಿಕಾ' ಗ್ರಂಥವನ್ನು ಓದಲು ಪ್ರಾರಂಭಿಸುತ್ತಾರೆ. ಪ್ರಕೃತಿ ಸ್ವರೂಪವನ್ನು ಅರ್ಥ ಮಾಡಿಕೊಂಡ ಅವರು ಅದರ ಸೆಳೆತದಿಂದ ಪಾರಾಗುವ ಮನೋಸಂಕಲ್ಪವನ್ನು ತಾಳುತ್ತಾರೆ.

ಆದರೆ ಸೊಸೆ ಕಾತ್ಯಾಯನಿ ಪ್ರಕೃತಿಯ ಸೆಳೆತಕ್ಕೆ ಒಳಗಾಗುತ್ತಾಳೆ. ಡಾ||ಸದಾಶಿವರಾಯರ ತಮ್ಮ ರಾಜನನ್ನು ಮದುವೆಯಾಗಲೂ ಇಚ್ಚಿಸುತ್ತಾಳೆ, ಚಿರನೂತನಳೂ, ಚಿರಚೇತನಳೂ ಆದ ಪ್ರಕೃತಿಗೆ ಕೃತಕ ಧರ್ಮವನ್ನು ಕಟ್ಟು ಹಾಕುವುದು ಅಧರ್ಮವೆಂಬ ಭಾವನೆ ಅವಳಲ್ಲಿ ಬೆಳೆದು ಮತ್ತೆ ಗ್ರಹಸ್ಥ ಜೀವನಕ್ಕೆ ಪ್ರವೇಶಿಸುವ ಬಯಕೆಯನ್ನು ವ್ಯಕ್ತಪಡಿಸುತ್ತಾಳೆ. ಮಗು ಶ್ರೀನಿವಾಸನನ್ನು ತನ್ನ ಜೊತೆಗೆ ಕರೆದುಕೊಂಡು ಹೋಗಲು ಇಷ್ಟಪಡುತ್ತಾಳೆ. ಆದರೆ ಶ್ರೋತ್ರಿಯವರ ವಂಶದ ಏಕಮೇವ ಆಧಾರವಾದ ಮೊಮ್ಮಗನನ್ನು ಕಾತ್ಯಾಯನಿಯ ಜೊತೆಗ ಕಳಿಸಲು ಅವರು ಒಪ್ಪುವುದಿಲ್ಲ. ಧಾರ್ಮಿಕ ವಿಷಯಗಳ ಆಧಾರದ ಮೇಲೆ ಚರ್ಚೆಯನ್ನು ಮಾಡುತ್ತಾರೆ.

"ಒಂದು ವಂಶದ ಬೀಜವು ಮುಂದುವರೆಯುವದಕ್ಕಾಗಿಯೇ, ಒಂದು ಕ್ಷೇತ್ರವನ್ನು ಬೇರೊಂದು ವಂಶದವರು ದಾನ ಮಾಡಿರುತ್ತಾರೆ. ಆ ವಂಶದ ಬೀಜವನ್ನು ತನ್ನಲ್ಲಿಯೇ ಬೆಳೆಸಿ ವೃಕ್ಷವನ್ನಾಗಿ ಮಾಡಿದ ಮೇಲೆ ಆ ಕ್ಷೇತ್ರವು ತನ್ನ ಸಾರ್ಥಕ್ಯವನ್ನು ಪಡೆಯುತ್ತೆ. ಒಮ್ಮೆ ತಾಯಿಯಾದವಳು ಎಂದಿಂದೆಗೂ ತಾಯಿಯೇ. ಪುನಃ ಕನ್ಯೆಯಂತೆ ಹೊಸ ಪತ್ನಿತ್ವವನ್ನು ಪ್ರಾರಂಭಿಸುವುದು ಹೇಗೆ? ವಿಕಾಸದ ಓಟದಲ್ಲಿ ಒಂದು ಘಟ್ಟದಿಂದ ಹಿಂದಿನ ಘಟ್ಟಕ್ಕೆ ಅನುಭವವು ಹಿಂತಿರುಗುವುದು ಸೃಷ್ಟಿಯ ನಿಯಮಕ್ಕೆ ವಿರೋಧವಾದದು. ವಿಕಾಸದ ಪಥದಲ್ಲಿ ಒಮ್ಮೆ ಕಳೆದ ಸ್ತರವನ್ನು ಪುನಃ ಬಯಸುವುದು ಪಾಪವಾಗುತ್ತೆ."

"ಸರಕಾರದ ಕಾನೂನಿನ ಪ್ರಕಾರ ಮಗೂನ ನೀನೇ ಕರೆದುಕೊಂಡು ಹೋಗಬಹುದು. ಆದರೆ

ಕಾನೂನಿನಲ್ಲಿ ಧರ್ಮ ಸಿಕ್ಕೊಲ್ಲ''

''ಕೊನೆಯ ನಿರ್ಣಯದ ಸ್ವಾತಂತ್ರ್ಯ ನಿನ್ನದೇ. ಮಗುವನ್ನು ಕೈ ಎತ್ತಿ ನಿನಗೆ ಕೊಡುವ ಅಧಿಕಾರ ನನಗಿಲ್ಲ. ವಂಶದ ಒಂದು ಕೊಂಬೆಯನ್ನು ಛೇದಿಸಿ ದಾನ ಮಾಡುವ ಅಧಿಕಾರ ಮತ್ತೊಂದು ಕೊಂಬೆಗಿಲ್ಲ. ಅವನನ್ನು ಇಲ್ಲಿ ಬಿಟ್ಟು ಹೋಗು ಅಂತ ನಾನು ನನಗಾಗಲಿ ಅಥವಾ ಒಳಗೆ ಅಳುತ್ತ ಕುಳಿತಿರುವ ಮುದುಕಿಯ ಪರವಾಗಿ ಭಿಕ್ಷೆ ಬೇಡೂವುದಿಲ್ಲ. ಮುಪ್ಪಿನ ವಯಸ್ಸಿನಲ್ಲಿ ಅದು ಒಪ್ಪ ಮಾಡಲಿ ಅನ್ನೊ ಪ್ರಲೋಭ ನನಗೆ ಎಳ್ಳಷ್ಟು ಇಲ್ಲ. ಮಗು ಮಹಡಿಯ ಮೇಲೆ ಮಲಗಿದೆ ನೀನು ಸೀದಾ ಹತ್ತಿ ಮೇಲೆ ಹೋಗು ಶಾಂತವಾಗಿ ನನ್ನ ಮಾತುಗಳನ್ನು ಆಲೋಚಿಸು ಕರಕೊಂಡೆ ಹೋಗಬೇಕು ಅಂತ ನಿನ್ನ ಆತ್ಮ ಹೇಳಿದರೆ ಎತ್ತಿಕೊಂಡು ಹೊರಟು ಹೋಗು.''

ಮೇಲಿನ ಸಂಭಾಷಣೆಯನ್ನು ಗಮನಿಸಿದಾಗ ಶ್ರೋತ್ರಿಯರ ಮಾನಸಿಕ ದೃಢತೆಯ ಶಕ್ತಿ ಎಂತಹದು ಎಂಬ ಅರಿವಾಗುತ್ತದೆ. ಯಾವ ಉದ್ರೇಕಕ್ಕೆ, ರೋಷಕ್ಕೆ, ಹತಾಶೆಗೆ ಒಳಗಾಗದ ಮಾನಸಿಕ ಸ್ಥಿತಿ ಅವರದು. ಮತ್ತು ಮೌಲ್ಯದ ಪ್ರತೀಕವಾಗಿ ಮೂಡುವ ಈ ಪಾತ್ರಕ್ಕೆ ಕಾದಂಬರಿಕಾರರು ತಮ್ಮೆಲ್ಲ ಶಕ್ತಿಯನ್ನು ಧಾರೆಯೆರೆದಿದ್ದಾರೆ.

ಕಾದಂಬರಿಯ ಕೊನೆಯ ಭಾಗದಲ್ಲಿ ಶ್ರೋತ್ರಿಯವರ ಜೀವನದ ದಿಕ್ಕನ್ನು ಬದಲಿಸುವ ಒಂದು ಘಟನೆ ನಡೆಯುತ್ತದೆ. ತಂದೆಯ ಶ್ರಾದ್ಧದ ಹಿಂದಿನ ದಿನ ಆಕಸ್ಮಾತಾಗಿ ಅವರ ಕೈಗೆ ದೊರೆತ ಹಳೆಯ ಪತ್ರವೊಂದು ಅವರ ಜನ್ಮ ರಹಸ್ಯವನ್ನು ಬಯಲಿಗೆಳೆಯುತ್ತದೆ. ತಾವು ನಿಜವಾಗಿ ತಮ್ಮ ವಂಶಕ್ಕೆ ಸೇರಿದವರಾಗಿರದೇ. ತಂದೆ ತಾಯಿಗಳ ವಿಕೃತ ವ್ಯವಹಾರದಿಂದ ಶ್ಯಾಮದಾಸರೆಂಬ ಹರಿಕತೆಯ ದಾಸರಿಂದ ಹುಟ್ಟಿದವರು ಎಂಬ ಸಂಗತಿ ಅವರಿಗೆ ತಿಳಿಯುತ್ತದೆ. ಆಗಲೂ ಅವರು ವಿಚಲಿತರಾಗುವದಿಲ್ಲ. ಮೊಮ್ಮಗನನ್ನು ಕರೆದುಕೊಂಡು ಆಸ್ತಿಯನ್ನು ದಾನಮಾಡಿ ಬಿಡುತ್ತಾರೆ.

ಕಾದಂಬರಿಯುದ್ದಕ್ಕೂ ಶ್ರೀನಿವಾಸ ಶ್ರೋತ್ರಿಯ ಪಾತ್ರ ವಂಶ ಪ್ರಜ್ಞೆಯ ಪ್ರತೀಕವಾಗಿದೆ.'' ಆಧುನಿಕ ಮತ್ತು ಅನಿರೀಕ್ಷಿತ ಸಮಸ್ಯೆಗಳನ್ನು ಎದುರಿಸುವಲ್ಲಿ ಅವರು ಸತತವಾಗಿ ದೊರಕಿಸುವ ಯಶಸ್ಸು ಅವರ ವಯಕ್ತಿಕ ಸಾಧನೆಯಾಗಿದ್ದಂತೆ, ಅವರು ಅರಗಿಸಿಕೊಂಡ ಧರ್ಮ ಸಂಸ್ಕೃತಿಗಳ ಫಲವೂ ಆಗಿದೆ. ಎಂದು ತೋರಿಸುವಲ್ಲಿ ಕಾದಂಬರಿ ಬಹುಮಟ್ಟಿಗೆ ಯಶಸ್ವಿಯಾಗಿದೆ. ಶ್ರೀನಿವಾಸ ಶ್ರೋತ್ರಿಯವರ ಪಾತ್ರ ಕೂಡಾ ಒಂದು ದೃಷ್ಟಿಕೋನವೇ ಹೊರತು ಲೇಖಕನ ಅನುಭೂತಿಯ ಫಲವಲ್ಲ'' ೧ (ಸಹಸ್ಪಂದನ, ಜಿ ಎಸ್ ಅಮೂರ, ಪು - ೨೧೦, ೨೧೨) ಎಂದು ಜಿ. ಎಸ್. ಅಮೂರ ಅಭಿಪ್ರಾಯ ಪಡುತ್ತಾರೆ.

'' ಆಧುನೀಕರಣದ ಹಾದಿಯಲ್ಲಿ ಸಾಗಿದ ಸುತ್ತಲಿನ ಜಗತ್ತಿನತ್ತ ನಿರ್ಲಿಪ್ತತೆಯಿಂದ ನೋಡುವಂಥ, ಎಷ್ಟೇ ಎಡರು ತೊಡರುಗಳು ಬಂದರೂ ತಮ್ಮ ಕರ್ತವ್ಯವನ್ನು ನಿಚ್ಚಳ ದೃಷ್ಟಿಯಿಂದ ಮಾಡಿಮುಗಿಸುವಂಥ ಆದರ್ಶದ್ವಂದ್ವಾತೀತ ವ್ಯಕ್ತಿ '' ೨ (ಸಹಸ್ಪಂದನ, ಶಾಂತಿನಾಥ ದೇಸಾಯಿ, ಪು -೨೧೫) ಎಂದು ಈ ಪಾತ್ರ ಕುರಿತು ಶಾಂತಿನಾಥ ದೇಸಾಯಿ ಅಭಿಪ್ರಾಯ ಪಡುತ್ತಾರೆ.

ಯು. ಆರ್ .ಅನಂತಮೂರ್ತಿಯವರ 'ಸಂಸ್ಕಾರ' ಕಾದಂಬರಿಯ ಪ್ರಾಣೇಶಾಚಾರ್ಯರು

ಪ್ರಕೃತಿಯ ಸಂಕೇತವಾದ ಚಂದ್ರಿಗೆ ಸೋಲುವುದು ನಂತರದ ಬದುಕನ್ನು ಅರ್ಥ ಪೂರ್ಣವಾಗಿ ಕಳೆಯಲು ನಿರ್ಧರಿಸುವ ಸನ್ನಿವೇಶವನ್ನು ಗಮನಿಸಿದಾಗ ಅದನ್ನು ಪಾಪಕ್ರಿಯೆ ಎಂದು ಭಾವಿಸುವುದಿಲ್ಲ. ಸಹಜ ಅನುಭವಗಳ ತುಡಿತವನ್ನು ಈ ಸಂದರ್ಭದಲ್ಲಿ ಕಾಣುತ್ತೇವೆ. ಆದರೆ ಶ್ರೋತ್ರಿ ಮನುಷ್ಯರು ತೀರ ಹೀಗಿರಬಾರದು ಎನ್ನುವ ಭಾವನೆಯನ್ನು ಕಾತ್ಯಾಯನಿಯಂಥವರಲ್ಲಿ ಮೂಡಿಸುತ್ತಾರೆ.

## 'ದಾಟು'ವಿನ ಸತ್ಯಭಾಮ

ಭೈರಪ್ಪನವರು ಸೃಷ್ಟಿಸಿದ ಸ್ತ್ರೀ ಪಾತ್ರಗಳಲ್ಲಿ ವಿಶಿಷ್ಟ ವ್ಯಕ್ತಿತ್ವವನ್ನು ಹೊಂದಿದ ಪಾತ್ರ 'ದಾಟು' ಕಾದಂಬರಿಯ ಸತ್ಯಳದು. ವರ್ಣಾಶ್ರಮ ಧರ್ಮದ ಫಲವಾಗಿ ಬೇರುಬಿಟ್ಟ ಜಾತಿವ್ಯವಸ್ಥೆಯನ್ನು ಬದಲಾಯಿಸುವ ಪಣ ತೊಟ್ಟುನಿಂತ ಸತ್ಯಭಾಮಾ ತನ್ನ ಬದುಕಿನಲ್ಲಿ ಹಲವು ಬಗೆಯ ಕಷ್ಟಗಳಿಗೆ ಒಳಗಾಗುವಂಥವಳು. ಜಾತಿವ್ಯವಸ್ಥೆಯನ್ನು ಹೋಗಲಾಡಿಸಬೇಕೆಂಬ ಅವಳ ಆದರ್ಶ ವಾಸ್ತವ ಬದುಕಿನಲ್ಲಿ ಸಫಲವಾಗುವುದಿಲ್ಲ. ಬ್ರಾಹ್ಮಣ ಕುಟುಂಬದಲ್ಲಿ ಅರ್ಚಕ ವೆಂಕಟರಮಣಯ್ಯನ ಮಗಳಾದ ಸತ್ಯ ವಿದ್ಯಾವಂತೆ. ಒಕ್ಕಲಿಗ ಜಾತಿಗೆ ಸೇರಿದ ಮಂತ್ರಿ ಮೇಲಗಿರಿಗೌಡರ ಮಗ ಶ್ರೀನಿವಾಸನನ್ನು ಮದುವೆಯಾಗಲು ನಿರ್ಧರಿಸುತ್ತಾಳೆ. ಸಮಾಜದಿಂದ ತನ್ನ ಈ ಕಾರ್ಯಕ್ಕೆ ಒಪ್ಪಿಗೆ ದೊರೆಯುವುದಿಲ್ಲವೆಂಬ ಸತ್ಯವೂ ಅವಳಿಗೆ ತಿಳಿದಿದೆ. ತನ್ನ ತಂದೆ ಒಪ್ಪಿ ಆಶೀರ್ವಾದ ಮಾಡಿದರೆ ಸಾಕು. ಶ್ರೀನಿವಾಸನ ಜೊತೆ ಬದುಕನ್ನು ಕಳೆಯಬಹುದು. ಶ್ರೀನಿವಾಸ ತನ್ನನ್ನು ಯಾವ ಸಂದರ್ಭದಲ್ಲೂ ಕೈಬಿಡುವದಿಲ್ಲವೆಂಬ ನಂಬಿಕೆ ಅವಳದು. ಸ್ವತಃ ಪುರೋಹಿತರಾದ ತಂದೆಯಿಂದ ಬಾಲ್ಯದಲ್ಲಿಯೇ ಸಂಸ್ಕೃತ ಮಂತ್ರ ವೇದಾಂತವನ್ನು ಅವಳು ಕಲಿತಿದ್ದಳು. ಇತಿಹಾಸ ವಿಷಯದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದ ಅವಳಿಗೆ ಈ ಜಾತಿ ವ್ಯವಸ್ಥೆಯ ಹುಟ್ಟು ಬೆಳವಣಿಗೆಯ ಬಗ್ಗೆ ಪರಿಪೂರ್ಣವಾದ ಜ್ಞಾನವಿದೆ. ಆದ್ದರಿಂದ ಶ್ರೀನಿವಾಸನನ್ನು ಮದುವೆಯಾಗುವ ಮೂಲಕ 'ರೂಢಿ'ಯನ್ನು ಮುರಿಯುವ ಧೈರ್ಯವನ್ನು ಮಾಡುತ್ತಾಳೆ. ತಂದೆಗೆ ''ನೀವು ಯಾವುದನ್ನು ಧರ್ಮ ಅಂತೀರೋ ಆದೆಲ್ಲ ರೂಢಿ ಈ ವ್ಯತ್ಯಾಸದ ಮೂಲ ತತ್ವ ಯಾವುದು ? ಜನಾಂಗವೇ, ಬಣ್ಣವೇ, ರೂಪ ಲಕ್ಷಣವೇ ?.. ಹಿಂದೂ ಸ್ಥಾನದಲ್ಲಿರೂ ಒಂದೊಂದು ಪ್ರದೇಶದ ಜನರನ್ನು ನೋಡಿ ಜಾತಿಯ ವ್ಯತ್ಯಾಸ ಕಾಣುವುದೇ ಇಲ್ಲ. ಒಂದೇ ಚಹರೆ ಇರುತ್ತದೆ.'' (ದಾಟು, ಪು - ೩೮.೩೯) ಅಂತರಂಗ ಮತ್ತು ಅನುಭವದ ಮಾರ್ಗದರ್ಶನದಲ್ಲೂ ನಡೆಯಲು ಅವಳು ಇಚ್ಛಿಸುತ್ತಾಳೇ. ತಂದೆ ತನ್ನನ್ನು ಮೆಟ್ಟು ತೆಗೆದುಕೊಂಡು ರಕ್ತ ಹನಿಯುವಂತೆ ಹೊಡೆದಾಗಲೂ ಅವಳು ಸಂಯಮವನ್ನು ಮೀರುವುದಿಲ್ಲ. ತಂದೆಗೆ ಅಗೌರವವನ್ನು ತೋರುವುದಿಲ್ಲ. ಆಸ್ಪತ್ರೆಗೆ ಹೋದರೆ '' ಇದು ಏಟಿನಿಂದಲೇ ಆದ ಗಾಯ ಅಂತ ತಕ್ಷಣ ಗೊತ್ತಾಗುತ್ತೆ. ಯಾರು ಹೊಡೆದರು ಅಂತಾ ಕೇಳಿದರೆ ನಮ್ಮಪ್ಪ ಅಂತ ಹೇಳಲೆ, ಇಷ್ಟು ಪ್ರೀತಿಯಾಗಿ ಸಾಕಿದ ನಮ್ಮಪ್ಪ ಇವತ್ತೊಂದು ದಿನ ಸಿಟ್ಟಿನಲ್ಲಿ ಹೊಡೆದಿದಾರೆ ನಾನು ಯಾವ ಡಾಕ್ಟರ ಹತ್ತಿರ ಹೋಗುಲ್ಲ ಅದೇ ವಾಸಿಯಾಗುತ್ತೆ'' ಎಂದು ಎಲ್ಲ ನೋವನ್ನು ನುಂಗುವ ಅವಳು ಮಾನಸಿಕವಾಗಿ ತುಂಬಾ ಪ್ರಬುದ್ಧಳು. ಇಲ್ಲಿ ಅವಳು ತೋರುವ ಸಹನೆ ಶಾಂತಿ ಮಾಗಿದ ಮನಸ್ಸಿನ ವ್ಯಕ್ತಿತ್ವದಂತೆ ತೋರುತ್ತದೆ.

ತಂದೆ ಎಕ್ಕಡದಲ್ಲಿ ಹೊಡೆದ ನಂತರ 'ಸತ್ಯ'ಳು ಬೆಂಗಳೂರಿನಲ್ಲಿ ಮಾಡಿಕೊಂಡಿದ್ದ ರೂಮನ್ನು ಬಿಡುವ ಸಂದರ್ಭ ಒದಗುತ್ತದೆ. ಕಾಲೇಜಿನಲ್ಲಿ ಉಪನ್ಯಾಸಕ ವೃತ್ತಿಗೆ ಸೇರಿದ ಅವಳಿಗೆ ಇದ್ದಕ್ಕಿದ್ದಂತೆ ಯಾವುದೋ ಅಪಾದನೆ ಮಾಡಿ ರೂಮು ಬಿಡಲು ಹೇಳುವುದು ಅಪಮಾನ ಪಡಿಸಿದಂತಾಗುತ್ತದೆ. 'ಸತ್ಯ' ನೀತಿಗೆಟ್ಟ ಹೆಣ್ಣು ಎಂದು ವರ್ಣಿಸುವ ಮನೆಯ ಯಜಮಾನ, ಸಹಬಾಡಿಗೆದಾರರೂ ಇವಳನ್ನು ಅದೇ ರೀತಿಯ ಹೆಣ್ಣು ಎಂದು ತೀರ್ಮಾನಿಸುವುದು ಅವಳ ಅಂತರಂಗವನ್ನೇ ಪ್ರಶ್ನಿಸುವಂತೆ ಮಾಡುತ್ತದೆ. '' ಬ್ರಾಹ್ಮಣರು ವಾಸವಾಗಿರುವ ಸುತ್ತಿನಿಂದ ಹೋಗಬೇಕು ಯಾರಾದರೂ ಒಕ್ಕಲಿಗರು, ಮುಸಲ್ಮಾನರು, ಕ್ರೈಸ್ತರು ಅಥವಾ ಹರಿಜನರು ಮಾಲೀಕರಾಗಿರುವ ಕೋಣೆಯನ್ನು ಹುಡುಕಬೇಕು ಎನಿಸಿತು'' (ದಾಟು, ಪು -೬೨) ಜಾತಿಯನ್ನು ದಾಟಿ ನಿಲ್ಲಬೇಕೆಂಬ ಅವಳ 'ಹಟ' ತೊಂದರೆಯನ್ನು ಅನುಭವಿಸುವಂತೆ ಮಾಡುತ್ತದೆ. ಜಾತಿಯ ಬಗ್ಗೆ ಇರುವ ಆಕ್ರೋಶ ಈಗ ಅವಳಿಗೆ ನಿಧಾನವಾಗಿ ಅರಿವಾಗುತ್ತ ಸಾಗುತ್ತದೆ. ಶೂದ್ರನಾದ ಶ್ರೀನಿವಾಸನನ್ನು ಮದುವೆಯಾಗುವುದಕ್ಕೆ ಏನೆಲ್ಲ ಅಡ್ಡಿಗಳಿವೆ ಎಂಬುದು ಗೋಚರವಾಗುತ್ತದೆ. ರೂಢಿಯನ್ನು ಮುರಿಯುವ ಅವಳ ಧೈರ್ಯ ಮೊದಲ ಹಂತದಲ್ಲಿಯೇ ಯಶಸ್ಸನ್ನು ಕಾಣುವುದಿಲ್ಲ. ಬದಲಾವಣೆಯ ದೃಷ್ಟಿಕೋನ ಶ್ರೀನಿವಾಸನಲ್ಲಿ ಅಷ್ಟು ಗಟ್ಟಿತನವನ್ನು ಪಡೆದುಕೊಳ್ಳುವುದಿಲ್ಲ. ಸತ್ಯಳಂತೆ ಅವನಲ್ಲಿ ಧೈರ್ಯವೂ ಇಲ್ಲ, ಹಟವೂ ಇಲ್ಲ. ತುಂಬ ದುರ್ಬಲ ಮನಸ್ಸಿನ ಶ್ರೀನಿವಾಸ ಜಾತಿವ್ಯವಸ್ಥೆಯನ್ನು ದಾಟಿ ನಿಲ್ಲುವ ಸತ್ಯಳ ಕ್ರಿಯೆಗೆ ಸಮಬಲವನ್ನು ಒದಗಿಸದೇ ಹೇಡಿಯಂತೆ ಹಿಂಜರಿಯುತ್ತಾನೆ.

ಅಂತರ್‌ಜಾತಿ ವಿವಾಹವನ್ನು ಮಾಡಿಕೊಳ್ಳಲು ಮುಂದಾದಾಗ ಅವಳಿಗೆ ದೊರೆತ ಉದ್ಯೋಗವು ಕೈತಪ್ಪಿ ಹೋಗುತ್ತದೆ. ಈ ಸಂದರ್ಭದಲ್ಲಿ ಕಾಲೇಜಿನ ಪ್ರಿನ್ಸಿಪಾಲರಿಗೂ ಅವಳಿಗೂ ನಡೆಯುವ ಸಂಭಾಷಣೆ ಸತ್ಯಳ ಮನಸ್ಥಿತಿಯ ದೃಢತೆಯನ್ನು ತೋರುತ್ತದೆ. ಬದಲಾಗುತ್ತಿರುವ ಸಮಾಜದಲ್ಲಿ ವರ್ಣಾಶ್ರಮ ಧರ್ಮದ ಆದರ್ಶಗಳು ಪರೀಕ್ಷೆಗೆ ಒಳಗಾಗುತ್ತಿವೆ ಎಂಬುದು ಅವಳಿಗೆ ತಿಳಿದಿದೆ. ಆದ್ದರಿಂದ ಶೂದ್ರ ಜನಾಂಗದ ಪರವಾಗಿಯೇ ಅವಳು ವಾದ ಮಾಡುತ್ತಾಳೆ.

'' ಈಗ ಸಮಾಜ ರಚನೆ ಬದಲಾಯಿಸ್ತಾ ಇದೆ ವೃತ್ತಿಗೂ ಜಾತಿಗೂ ಸಂಬಂಧವಿಲ್ಲವಾಗ್ತಿದೆ ನಾವು ಮಾಡ್ತಿದ್ದ ವೃತ್ತಿಗೆ ಅವರೂ ಬಂದಿದಾರೆ. ಅವರನ್ನು ಬೈಯುವ ಬದಲು ನಾವ್ಯಾಕೆ ವೃತ್ತಿ ಹುಡುಕಿಕೊ ಬಾರದು? ಎನ್ನುವ ಅವಳು ಬದಲಾವಣೆಯನ್ನು ಮುಕ್ತವಾಗಿ ಸ್ವಾಗತಿಸುವ ಮನೋಭಾವದವಳಾಗಿದ್ದಾಳೆ. ಭಾಲ್ಯದಿಂದಲೂ ಉಪನಿಷತ್ತು. ಭಗವದ್ಗೀತೆಯನ್ನು ತಂದೆಯಿಂದ ಹೇಳಿಸಿಕೊಂಡ ಅವಳಿಗೆ ವೇದಕಾಲದ ಸ್ತ್ರೀಯರ ಸ್ಥಾನಮಾನದ ಅರಿವಿದೆ. ವೇದಕಾಲದಲ್ಲಿ ಜಾತಿಯ ಕಟ್ಟುಗಳು ಇರಲಿಲ್ಲವೆಂಬ ತಿಳುವಳಿಕೆ ಮೂಡಿದ ನಂತರ ಉನ್ನತ ವ್ಯಾಸಂಗದಲ್ಲಿ ಈ ಕುರಿತು ಸ್ಪಷ್ಟವಾದ ಜ್ಞಾನವನ್ನು ಪಡೆದುಕೊಳ್ಳುತ್ತಾಳೆ.''

ತುಂಬಾ ಪ್ರಗತಿಪರವಾಗಿ ವಿಚಾರವನ್ನು ಮಾಡುವ ಅವಳಿಗೆ ಜಾತಿವ್ಯವಸ್ಥೆ ಸಮಾಜಕ್ಕೆ ಅಂಟಿದ, ದೇಹಕ್ಕೆ ಅಂಟಿದ ರೋಗವಾಗಿ ಕಾಣುತ್ತದೆ. ನಾವು ಆರೋಗ್ಯಕರ ಜೀವನ ನಡೆಸಬೇಕೆಂದರೆ ಜಾತಿವ್ಯವಸ್ಥೆಯ ರೋಗ ನಮ್ಮ ಶರೀರವನ್ನು ಪ್ರವೇಶಿಸದ ಹಾಗೆ ಎಚ್ಚರದಿಂದಿರಬೇಕು ಎನ್ನುತ್ತಾಳೆ. ಈ ವ್ಯವಸ್ಥೆಯನ್ನು ಬದಲಾಯಿಸಬೇಕಾದರೆ ಜಾತಿಸೂಚಕ, ದೇವರುಗಳ ಹೆಸರನ್ನು ಇಟ್ಟುಕೊಳ್ಳಬಾರದೆಂದು ಯೋಚಿಸುತ್ತಾಳೆ. ''ತಿರುಮಲ ಅಂದ್ರೆ ವೈಷ್ಣವ, ಶಂಕರ ಅಂದ್ರೆ ಶೈವ, ಶಿವಣ್ಣ, ಶಿವಪ್ಪ ಎಂದರೆ ಲಿಂಗಾಯತ '' ಹೀಗೆ ಈ

ಜಾತಿಸೂಚಕ ಹೆಸರುಗಳಿಗಿಂತ ಪ್ರಕೃತಿ, ಹೂವು ಮೊದಲಾದವುಗಳ ಹೆಸರನ್ನು ಇಟ್ಟುಕೊಳ್ಳುವುದು ಒಳಿತಾದುದು ಎಂದು ತಿಳಿಯುತ್ತಾಳೆ. ಹೀಗೆ ಆಶಾದಾಯಕ ಮನಸ್ಸಿನಿಂದ ಜಾತಿವ್ಯವಸ್ಥೆಯನ್ನು ಬದಲಾಯಿಸಬೇಕೆಂದು ಹೊರಡುವ ಸತ್ಯಭಾವಳಿಗೆ ಆಘಾತವಾಗುವುದು 'ಶ್ರೀನಿವಾಸ' ಮದುವೆಯಾಗುವ ನಿರ್ಧಾರದಿಂದ ಹಿಂದೆ ಸರಿದಾಗ '' ಈ ವ್ಯವಸ್ಥೆಯನ್ನು ಸೃಷ್ಟಿಸಿರುವ ಅಂತರವನ್ನು ದಾಟಿ ಒಂದಾಗುವ ಕಾಲ ಇನ್ನೂ ಬಂದಿಲ್ಲ. ಮದುವೆ ಎಂಬುದು ಬರೀ ಗಂಡು ಹೆಣ್ಣುಗಳ ಪರಸ್ಪರ ಸುಖಕ್ಕಾಗಿ ಮಾಡಿಕೊಳ್ಳುವ ವ್ಯವಸ್ಥೆಯಲ್ಲ. ಎಲ್ಲರೂ ಒಪ್ಪಿ ನಡೆಸಬೇಕಾದದು. ಇನ್ನು ಎರಡು ಮೂರು ತಲೆಮಾರು ಕಳೆದ ನಂತರ ಸಮಾಜದ ಶ್ರದ್ಧೆ ಮನೋಭಾವಗಳು ವಿಶಾಲವಾಗಿ ಬೆಳೆದು ವರ್ಣ ವ್ಯವಸ್ಥೆಯನ್ನು ದಾಟಲು ಯುವಕ ಯುವತಿಯರಿಗೆ ಸಾಧ್ಯವಾಗಬಹುದೇನೋ'' (ದಾಟು, ಪು-೯೯) ಎಂದು ಪತ್ರಮುಖೇನ ತನ್ನ ಅಸಮ್ಮತಿಯನ್ನು ತೋರುವ ಶ್ರೀನಿವಾಸನಲ್ಲಿ ಜಾತಿವ್ಯವಸ್ಥೆಯನ್ನು ದಾಟುವ ಪ್ರೇರಣೆಗಳು ಆಳವಾಗಿ ಇಳಿದಂಥವುಗಳಲ್ಲ.

ಉಪನ್ಯಾಸಕ ವೃತ್ತಿಯನ್ನು ಕಳೆದುಕೊಂಡು ಜವಳಿಯಂಗಡಿಯಲ್ಲಿ ಕೆಲಕಾಲ ಸೇಲ್ಸ್‌ಗರ್ಲ್ ಆಗಿ ಕೆಲಸಮಾಡಿ ನಂತರ ತನ್ನ ಹುಟ್ಟೂರಿಗೆ ಅವಳು ಹಿಂತಿರುಗುತ್ತಾಳೆ. ತೋಟದಲ್ಲಿ ತಂದೆಯ ಜೊತೆಗೆ ವಾಸಿಸುತ್ತಾಳೆ. 'ಮೇಲು ಜಾತಿಯರನ್ನು ಒದೀದೇ ಯಾವತ್ತು ಯಾರೂ ದಾರಿಗೆ ಬರುಲ್ಲ' ಎಂಬ ಮೋಹನದಾಸನನ್ನು ಬೆಂಬಲಿಸುತ್ತಾಳೆ. ಅವನಿಗಾಗಿ ಪುಸ್ತಕವನ್ನೂ ಬರೆದು ಕೊಡುತ್ತಾಳೆ. ತಂದೆಯಿಂದ ಯಜ್ಞೋಪವೀತವನ್ನು ಧರಿಸಿಕೊಳ್ಳುತ್ತಾಳೆ. ಸತ್ಯಳ ಪಾತ್ರ ತೀವ್ರ ಗೊಂದಲಕ್ಕೆಡೆ ಮಾಡುವುದು ಈ ಸಂದರ್ಭದಲ್ಲಿಯೇ ಜಾತಿ ವ್ಯವಸ್ಥೆಯನ್ನೇ ಮೆಟ್ಟಿ ನಿಲ್ಲಬೇಕೆನ್ನುವ ಅವಳಿಗೆ ಜನಿವಾರ ಏಕೆ ಪುಳಕವನ್ನುಂಟ ಮಾಡುತ್ತದೆ ? ಎಂಬ ಪ್ರಶ್ನೆ ಮೂಡುತ್ತದೆ. ಕಾದಂಬರಿಯಲ್ಲಿ ಮೊದಮೊದಲು ವಾಸ್ತವ ನೆಲಗಟ್ಟಿನ ಮೇಲೆಯೇ ಬೆಳೆದು ಬರುವ ಈ ಪಾತ್ರ ನಂತರ ಕಾದಂಬರಿಕಾರರ ದೃಷ್ಟಿಕೋನಕ್ಕೆ ತಕ್ಕ ಹಾಗೆ ಬೆಳೆಯುತ್ತಾ ಸಾಗುತ್ತದೆ. ಶ್ರೀನಿವಾಸನಿಗೆ ಹುಚ್ಚು ಹಿಡಿಯುವುದು. ಸತ್ಯಳಂಥವಳ ಎಲ್ಲ ಪ್ರಯತ್ನಗಳೂ ವಿಫಲವಾಗುವುದು. ಓದುಗರಿಗೆ ಆಶಾದಾಯಕ ಪ್ರೇರಣೆ ಉಂಟುಮಾಡುವುದಿಲ್ಲ.

## 'ಗೃಹಭಂಗ' ಕಾದಂಬರಿಯ 'ನಂಜಮ್ಮ'

ಭೈರಪ್ಪನವರ ಕಾದಂಬರಿಗಳಲ್ಲಿ 'ಸೊದ್ದೀಶ್ಯ' ರಹಿತವಾದದು ಎಂಬ ಕೀರ್ತಿ ಈ ಕಾದಂಬರಿಗಿದೆ. ಮತ್ತು ಯಾವ ವೈಚಾರಿಕತೆಯ ಗೊಂದಲಗಳೂ ಇಲ್ಲದೇ ಸಹಜವಾಗಿ ಬದುಕನ್ನು ಕಟ್ಟಿಕೊಡುವ ಉದ್ದೇಶವನ್ನು ಈ ಕಾದಂಬರಿ ಹೊಂದಿದೆ. ಈ ಕಾದಂಬರಿಯಲ್ಲಿ ಮೂಡಿ ಬಂದ ಗಂಗಮ್ಮ, ಚೆನ್ನಿಗರಾಯ, ಅಪ್ಪಣ್ಣ, ಸನ್ಯಾಸಿ ಮಾದೇವಯ್ಯನವರು, ನಂಜಮ್ಮ, ಸಾತೂ, ಪಟೇಲ ಶಿವೇಗೌಡ ಮುಂತಾದ ಪಾತ್ರಗಳು ವಾಸ್ತವ ಬದುಕಿನ ಚಿತ್ರಣಗಳಾಗಿವೆ. ತಾವು ಬದುಕುತ್ತಿರುವ ಪ್ರದೇಶದ ಕಾಲದ, ಅನುಭವಗಳನ್ನು, ಸಮಸ್ಯೆಗಳನ್ನು ಈ ಪಾತ್ರಗಳು ಎಲ್ಲ ಸೂಕ್ಷ್ಮ ವಿವರಗಳೊಂದಿಗೆ ಓದುಗನ ಮನಸ್ಸಿಗೆ ತಾಕುವಂತೆ

ಮಾಡುವಲ್ಲಿ ಸಫಲವಾಗಿವೆ. ಈ ಎಲ್ಲ ಪಾತ್ರಗಳಲ್ಲಿ ತೀವ್ರವಾಗಿ ನಮ್ಮ ಮನಸ್ಸನ್ನು ಆಕ್ರಮಿಸಿಕೊಳ್ಳುವ ಪಾತ್ರ 'ನಂಜಮ್ಮನದು' ನಾಗಲಾಪುರದ ಕಂಠಿ ಜೋಯಿಸರ ಮಗಳಾದ ಇವಳು ಕಾದಂಬರಿಯಲ್ಲಿ ಚೆನ್ನಿಗರಾಯನ ಹೆಂಡತಿಯಾಗಿ ಬರುತ್ತಾಳೆ. ತಂದೆ ಕಂಠಿ ಜೋಯಿಸರಂತೆಯೇ ಎತ್ತರವಾದ ಮೈಕಟ್ಟು, ಅಗಲವಾದ ಹಣೆ, ವಿಶಾಲವಾದ ಕಣ್ಣುಗಳುಳ್ಳ ವಧುವು ಲಕ್ಷಣವಾಗಿದ್ದಳು. 'ನಮ್ ಚೆನ್ನಿಗರಾಯಂಗೆ ಇಂಥಾ ಹೆಣ್ಣು ಸಿಕ್ಕೋದು ಅಂದ್ರೆ' ಎಂದು ರಾಮಸಂದ್ರದವರು ಮದುವೆ ಸಂದರ್ಭದಲ್ಲಿ ಮಾತನಾಡುವುದರಲ್ಲಿಯೇ ನಂಜಮ್ಮ ಲಕ್ಷಣವಾದ ಹೆಣ್ಣು ಎಂದು ತಿಳಿಯುತ್ತದೆ.

ನಂಜಮ್ಮ ದೊಡ್ಡವಳಾಗಿ ಗಂಡನ ಮನೆ ಸೇರಿಕೊಳ್ಳುತ್ತಾಳೆ. ತಾಯಿಯನ್ನು ಕಳೆದುಕೊಂಡು ಅಜ್ಜಿ ಅಕ್ಕಮ್ಮನ ಆರೈಕೆಯಲ್ಲಿಯೇ ಬೆಳೆದ ನಂಜಮ್ಮ ಸೂಕ್ಷ್ಮ ಸ್ವಭಾವದ ಹೆಣ್ಣು ಮಗಳು. ಉತ್ತಮ ಸಂಸ್ಕಾರವನ್ನು ಹೊಂದಿರುವವಳು. ಗಂಡ ಚೆನ್ನಿಗರಾಯನಂಥ ಸೋಮಾರಿ, ಹೊಣೆಗೇಡಿಯ ಕೈಯಲ್ಲಿ ಅನುಭವಿಸಬಾರದ ನೋವನ್ನು ಅನುಭವಿಸುತ್ತ ಕುಟುಂಬದ ಎಲ್ಲ ಭಾರವನ್ನು ಹೊತ್ತು ನಿಭಾಯಿಸುವ ರೀತಿ ಓದುಗರ ಮನಸ್ಸನ್ನು ಸೆರೆಹಿಡಿಯುತ್ತದೆ. ದುಃಖವನ್ನು ಸಹಿಸುವ ಅವಳ ಮನೋಭಾವ ಎಂಥ ಗಂಡನಿದ್ದರೂ ಹೊಂದಿಕೊಂಡು ಬಾಳುವ ರೀತಿಯ ಭಾರತೀಯ ಸಂಸ್ಕೃತಿಯ ಅಪ್ಪಟ ಸ್ತ್ರೀಯ ದರ್ಶನ ಮಾಡಿಸುತ್ತದೆ. ಬಾಳಿನ ಎಲ್ಲ ಕಹಿಯನ್ನು ಸಿಹಿಯನ್ನಾಗಿ ಮಾಡಿಕೊಳ್ಳಬೇಕೆಂಬ ಅವಳ ಛಲ ಮೆಚ್ಚುವಂಥಹದಾಗಿದೆ.

"ಗೃಹಭಂಗದ ಕೇಂದ್ರವ್ಯಕ್ತಿ ನಂಜಮ್ಮ. ಸ್ತ್ರೀಪಾತ್ರ ಚಿತ್ರಣದಲ್ಲಿ ಪರಿಪೂರ್ಣತೆಯನ್ನು ಪಡೆದ ಪಾತ್ರವೆಂದರೆ ಇವಳದೊಂದೇ ಎಂದೆನ್ನುವ ಮಟ್ಟಿಗೆ, ಯಾವ ಕುಂದೂ ಇಲ್ಲದಂತೆ ಚಿತ್ರಿತಳಾಗಿದ್ದಾಳೆ. ಇವಳ ಸ್ವಭಾವ ಉಳಿದ ಸ್ತ್ರೀಯರಿಗೆ ಒಂದು ಆದರ್ಶವಾಗಿದೆ. ಈ ಆದರ್ಶಕ್ಕೆ ವಾಸ್ತವಿಕ ನೆಲೆಗಟ್ಟಿರುವುದರಿಂದ ದೋಷವಾಗಿ ಪರಿಣಮಿಸಿಲ್ಲ. ಇವಳ ಸಹನೆ ಲೋಕೋತ್ತರವಾದುದು ಇದನ್ನು ಒಡೆದು ಅಲ್ಲಲ್ಲಿ ಕಾಣುವ ಬೇಸರುಗಳು ಇವಳ ಪಾತ್ರವನ್ನು ದೈವತ್ವಕ್ಕೇರಿಸದೆ ಮಾನುಷ ಮಟ್ಟದಲ್ಲಿಟ್ಟು ಅವಳ ವ್ಯಕ್ತಿತ್ವಕ್ಕೆ ಮೆರಗನ್ನಿಟ್ಟಿವೆ." ೩ (ಸಹಸ್ಪಂದನ, ಪು-೧೨೦,೧೨೧) ಎಂದು ಯು. ಆರ್. ಲಲಿತ ಅಭಿಪ್ರಾಯ ಪಡುತ್ತಾರೆ.

ಗಂಡ ಚೆನ್ನಿಗರಾಯರಿಗೆ ಹೆಂಡತಿಯ ಮೇಲೆ ಆಶೆ. ಅವಳನ್ನು ಆಳಬೇಕೆಂಬ ಹುಮ್ಮಸ್ಸು. ಈ ಹೆಣ್ಣನ್ನು ಆಳುವ ಮನೋಭಾವದಿಂದ ಅವನ ಬಾಯಲ್ಲಿ ಬೈಗಳುಗಳು ಒಂದರಮೇಲೊಂದು ಆಗಾಗ ಬರುತ್ತಿರುತ್ತವೆ. ಗಂಡನ ಸ್ವಭಾವವನ್ನು ಚೆನ್ನಾಗಿ ಅರಿತುಕೊಂಡ ನಂಜಮ್ಮನಿಗೆ ಅವನಿಗೆ ಅಂದು ಏನೂ ಪ್ರಯೋಜನವಿಲ್ಲವೆಂದು ತಿಳಿದುಕೊಂಡವಳು. 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ' ಎಂಬ ಗಾದೆಯಂತೆ ಗಂಡನ ಮನೆಯಲ್ಲಿ ಸುಖವೊ, ದುಃಖವೋ ಸಹಿಸಿಕೊಂಡು ಬಾಳಬೇಕೆಂಬ ಆದರ್ಶವನ್ನು ಬಾಳಿ ತೋರಿಸಿದಂತವಳು. ಅಣ್ಣನ ಹೆಂಡತಿ ಕಮಲುವಿನ ಹಟ. ಬುದ್ಧಿಗೇಡಿತನದಿಂದ ತವರುಮನೆಯ ಸುಖವನ್ನು ಕಳೆದುಕೊಂಡ ನಂಜಮ್ಮನಿಗೆ ಎಲ್ಲವೂ ಗಂಡನ ಮನೆಯೇ ಆಗುತ್ತದೆ. ಚಂಡಿ ಅತ್ತೆ, ಜವಾಬ್ದಾರಿಗಳ ಅರಿವೇ ಇಲ್ಲದ ಗಂಡ, ಆರ್ಥಿಕ ಮುಗ್ಗಟ್ಟು, ಆಗಾಗ ಎದುರಾಗುವ ಬರದಂಥ ನಿಸರ್ಗ ವಿಕೋಪ ಮುಂತಾದವುಗಳ ಮಧ್ಯೆ ಬದುಕಿಗಾಗಿ ಹೆಣಗುವ ಅವಳ ಪ್ರಯುತ್ನಗಳು ಪ್ರಶಂಸನೀಯವಾಗಿವೆ. ಗಂಡನ ಮನೆಯ ನಡವಳಿಕೆಗಳಿಗೆ ಒಗ್ಗಿಕೊಂಡು ಹೋಗುವ ಮನಸ್ಸು ಅವಳದು. ಗಂಡನಿಗೆ ಬುದ್ಧಿಕಲಿಸುವುದು ಸ್ತ್ರೀಯ

ಕೆಲಸವಲ್ಲ ಎಂಬುದು ಅವಳ ಭಾವನೆ.

ಶಾನುಭೋಗಿಕೆ ಲೆಖ್ಖವನ್ನು ಬರೆಯುತ್ತ, ಮನೆಯ ಎಲ್ಲ ಕೆಲಸಗಳನ್ನು ಸರಿದೂಗಿಸಿಕೊಂಡು ಗಂಡನ ಮನೆಯ ದೀಪದಂತೆ ಅವಳು ಬೆಳೆಗುತ್ತಾಳೆ. ಕೋರ್ಟಿನ ವ್ಯವಹಾರದಿಂದ ತಪ್ಪಿಸಿಕೊಂಡು, ಕುಟುಂಬದ ಇರುವ ಜಮೀನು ಉಳಿಸಿಕೊಳ್ಳುವ ಅವಳ ಯಾವ ಪ್ರಯತ್ನವೂ ಕೈಗೂಡುವುದಿಲ್ಲ. ಅವಳ ನಿಷ್ಕಲ್ಮಶ ಮನಸ್ಸನ್ನು ಅತ್ತೆಯಾಗಲಿ ಗಂಡನಾಗಲಿ ಅರ್ಥಮಾಡಿಕೊಳ್ಳುವುದಿಲ್ಲ. ಅವಳ ತವರಿನವರು ಕೊಟ್ಟಿದ್ದ ಆಭರಣಗಳನ್ನು ಕಾಶಿಂಬಡ್ಡಿ ಹತ್ತಿರ ಐವತ್ತು ರೂಪಾಯಿಗೆ ಅಡವಿಡುವ ಚೆನ್ನಿಗರಾಯ, ಸೊಸೆಗೆ 'ಯಾವ ಮಿಂಡನ್ನ ಹುಡ್ಕಂಡು ಹೋಗಿದ್ದಿ' ಎಂದು ಬೈಯುವ ಅತ್ತೆ. ಒಂದರ ಮೇಲೊಂದರಂತೆ ಹುಟ್ಟುವ ಮಕ್ಕಳು. ಈ ಎಲ್ಲ ಸಂಗತಿಗಳ ನಡುವೆಯೂ ಅವಳ ಸಮಾಧಾನ, ಧೈರ್ಯ ಮೆಚ್ಚುವಂತಿವೆ. ಬರಗಾಲ ಎದುರಾದಾಗಲೂ ಗೆಡ್ಡೆಗೆಣಸು ತಿಂದು ಜೀವನ ಮಾಡುವುದು. ಸಾತುವಿಗೆ ಒಳ್ಳೆಯ ಅಕ್ಕನಾಗಿ ಬಾಳುವುದು ಸಹಾಯ ಮಾಡುವುದು ಅವಳಿಗೆ ಸಹಜವಾದುದಾಗಿದೆ.

ಮಗಳ ಮದುವೆಯ ಎಲ್ಲ ಸಿದ್ಧತೆಗಳನ್ನು ಮಾಡಿಕೊಂಡು ನಿಭಾಯಿಸುವ ರೀತಿ ಎಂಥ ಗಂಡಸನ್ನು ನಾಚಿಸುವಂತಿದೆ. ಎಂದೂ ಅವಳು ತನ್ನ ಹೊಣೆಗಾರಿಕೆಯಿಂದ ಹಿಂದೆ ಸರಿಯುವುದಿಲ್ಲ. ಗುಂಡೇಗೌಡ ಮುಂತಾದವರಿಂದ ಕುಟುಂಬಕ್ಕೆ ಸಹಾಯವನ್ನು ಪಡೆದುಕೊಳ್ಳುವ ಅವಳ ಬದುಕು ನೈತಿಕಮಿತಿಗಳನ್ನು ಎಲ್ಲಿಯೂ ದಾಟಿ ನಿಲ್ಲುವುದಿಲ್ಲ. ನಂಜಮ್ಮನ ಪಾತ್ರ ಓದುಗರ ಮನಸ್ಸಿನಲ್ಲಿ ಬಹುಕಾಲ ಉಳಿಯುವಂಥಹದು.

## ಸಾಕ್ಷಿ ಕಾದಂಬರಿಯ 'ಮಂಜಯ್ಯ'

ಕಾಮಾಸಕ್ತಿಯ ವಿವರಗಳನ್ನು ಒಳಗೊಂಡಂತೆ, ಕಾಮವನ್ನು ತಾತ್ವಿಕ ಚಿಂತನೆಯ ಹಿನ್ನಲೆಯಲ್ಲಿ ವಿಶ್ಲೇಷಿಸಿದ ಮಹತ್ವದ ಕಾದಂಬರಿ 'ಸಾಕ್ಷಿ' ನೀತಿ ನಿಜವನ್ನು ಆಶ್ರಯಿಸಿದೆಯೆ ಅಥವಾ ಸುಳ್ಳಿನ ಹಂದರದ ಮೇಲೆ ನಿಂತಿದೆಯೇ ಎಂಬ ಸಮಸ್ಯೆಯನ್ನು ಶೋಧಿಸುವ ಈ ಪ್ರಶ್ನೆಗೆ ಒಂದು ದಾರ್ಶನಿಕವೆನಿಸಬಹುದಾದ ಆಯಾಮವನ್ನು ಕೊಡುವ ಪ್ರಯತ್ನವನ್ನು ಕಾದಂಬರಿಕಾರರು ಮಾಡಿದ್ದಾರೆ. ಎಂದು ವ್ಯಾಸರಾಯ ಬಲ್ಲಾಳರು ಈ ಕಾದಂಬರಿ ಕುರಿತು ಅಭಿಪ್ರಾಯ ಪಡುತ್ತಾರೆ.

ಈ ಕಾದಂಬರಿಯ ಕಾಮದ ಪ್ರತೀಕವಾದ ಪಾತ್ರ ಮಂಜಯ್ಯನದು ಭೈರಪ್ಪನವರ ಎಲ್ಲ ಪಾತ್ರ ರಚನೆಗಳಲ್ಲಿ ವಿಭಿನ್ನವಾಗಿ ನಿಲ್ಲುವ ಪಾತ್ರವಿದು. ರೂಪದಲ್ಲಿಯೂ ಆಕರ್ಷಕವಾದ ನಿಲುವನ್ನು ಹೊಂದಿದ ಮಂಜಯ್ಯ ''ಲಕ್ಷಣವಾದ ಮುಖ ಮೈಕಟ್ಟುಗಳನ್ನು ಹೊಂದಿದವ. ನೀಳ ತುಸು ಗುಂಗುರು ಕಟ್ಟಿದ ಕೂದಲು ಯಾವ ಹುಡುಗಿಯೂ ಅವನಿಂದ ಆಕರ್ಷಿತಳಾಗಬೇಕು ಚಿಕ್ಕ ವಯಸ್ಸಿಗೆ ಪೋಕರಿ ಬಿದ್ದು ಹೋದವ.'' (ಸಾಕ್ಷಿ, ಪು-೧೮) ಗೃಹಸ್ಥನ ಸೀಮಿತ ಸುಖಕ್ಕಿಂತ ಕಟ್ಟುಕಟ್ಟಳೆಯಿಲ್ಲದ ಅಮಿತ ಸುಖವನ್ನರಸುವ ಅವನಿಗೆ ಮದುವೆ ಎಂಬುದು ಒಂದು ಆಡಚಣೆ. ಕಾಲವನ್ನು ಮುಚ್ಚಿಹಾಕುವ ಮಾಯೆ ಅವನ ದೈಹಿಕ ರೂಪದಲ್ಲಿದೆ.

ಹೆಣ್ಣಿನಿಂದ ಹೆಣ್ಣನ್ನು ಅರಸಿಕೊಂಡು ಹೋಗುವುದು ಅವನ ಸ್ವಭಾವ. ಹೆಣ್ಣಿನ ಮನಸ್ಸನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಬಲ್ಲ ಶಕ್ತಿ ಅವನಿಗಿದೆ. ಅವಳ ದೌರ್ಬಲ್ಯ ಯಾವುದು ಎಂಬುದನ್ನು ಅವನು ಕ್ಷಣದಲ್ಲಿ ಗುರುತಿಸಬಲ್ಲ. ಸುಳ್ಳನ್ನು ಸತ್ಯವೆಂದು ನಂಬಿಸಬಲ್ಲ ಚಾಣಾಕ್ಷ. ಸುಳ್ಳು ಹೇಳುವಾಗಲೂ ಅವನಿಗೆ ಅಧೈರ್ಯ ಕಾಡುವುದಿಲ್ಲ. ಮಾನಸಿಕ ಹೊಯ್ದಾಟವಿಲ್ಲ ಅಪರಿಮಿತ ಧೈರ್ಯವಂತ. ಊರಿಗೆ ಸವಾಲಾಗಿ ನಿಂತ ತೆಂಗಿನಕಾಯಿ ಗೊನೆಗಳನ್ನು ಕದಿಯುವ ಕಂಚಿಯನ್ನು ಅಂಥ ಕತ್ತಲೆಯಲ್ಲಿ ಏಕಾಂಗಿಯಾಗಿ ಮುಗಿಸಿದವ. ಕೋರ್ಟನಲ್ಲಿ ತನ್ನ ಪರವಾಗಿಯೇ ನ್ಯಾಯ ವಾಲುವಂತೆ ಮಾಡಿಕೊಳ್ಳುವ ಎಲ್ಲ ಸಿದ್ಧತೆಗಳನ್ನು ವ್ಯವಸ್ಥಿತವಾಗಿ ಮಾಡಿಕೊಳ್ಳುವ ಅವನಿಗೆ ಯಾವ ಅಳುಕು ಕಾಡುವುದಿಲ್ಲ.

ಕಂಚಿಯನ್ನು ಕೊಂದ ನಂತರ ಅವನ ಹೆಂಡತಿಯನ್ನೇ ತನ್ನ ಬಲೆಗೆ ಹಾಕಿಕೊಂಡು ಕಾಮತೃಪ್ತಿಯನ್ನು ಪಡೆದುಕೊಳ್ಳುವ ಈ ವ್ಯಕ್ತಿ ಓದುಗರಿಗೆ ವಿಸ್ಮಯವನ್ನುಂಟು ಮಾಡುತ್ತಾನೆ. ಕಂಚಿಯನ್ನು ಕೊಂದದ್ದು ಜನಹಿತಕ್ಕಾಗಿ ಎಂಬ ಧರ್ಮರೂಪದ ಪ್ರಲೋಭನೆಯನ್ನು ಮಾವ ಪರಮೇಶ್ವರಯ್ಯನವರ ಮುಂದೆ ಒಡ್ಡುತ್ತಾನೆ. ಅದೇ ಕಂಚಿಯ ಹೆಂಡತಿ ಲಕ್ಕುವಿಗೆ ನಾನು ಅವನನ್ನು ಕೊಲ್ಲಲಿಲ್ಲ ಅವನೇ ಮರದಿಂದ ಬಿದ್ದು ಸತ್ತ ಎಂದು ನಂಬಿಸುತ್ತಾನೆ. ಅವನ ಇಡೀ ಬದುಕು ಕಾಮದ ತೃಪ್ತಿಗಾಗಿ ನಡೆಸುವ ವಿವಿಧ ಪ್ರಯತ್ನಗಳಿಂದ ತುಂಬಿ ಹೋಗಿದೆ.

ಕಾದಂಬರಿಯ ಮುಖ್ಯ ಪಾತ್ರ ಈ ಮಂಜಯ್ಯನದು. ಪರಮೇಶ್ವರಯ್ಯನ ಮಗಳಾದ ಸಾವಿತ್ರಿಯನ್ನು ಮದುವೆಯಾದ ಇವನು ಅವಳೊಬ್ಬಳಿಗೆ ನಿಷ್ಠನಾಗಿರದೇ ಮದುವೆಯಾದ ನಂತರವೂ ಎಷ್ಟೊ ಹೆಣ್ಣುಗಳ ದೇಹಸುಖವನ್ನು ಪಡೆದುಕೊಳ್ಳುತ್ತಾನೆ. ತಾನು ಮಾಡಿದ್ದು ಅನೈತಿಕತೆ ಎನಿಸುವುದಿಲ್ಲ. ಸ್ವತಃ ತನ್ನ ಹೆಂಡತಿ ಸಾವಿತ್ರಿ ಬಂದು ತೋಟದಲ್ಲಿ ಬೇರೆ ಹೆಣ್ಣಿನೊಂದಿಗೆ ಸರಸವಾಡುತ್ತಿರುವ ಅವನನ್ನು ನೋಡಿದಾಗಲೂ ಅವನಿಗೆ ಅಂಥ ಅಘಾತವೇನೂ ಆಗುವುದಿಲ್ಲ ಇದೇ ಕಾರಣಕ್ಕೆ ಸಾವಿತ್ರಿ ಮನೆ ತೊರೆದು ಹೋದಾಗಲೂ ಅದಕ್ಕಾಗಿ ಅವನು ಹಳಹಳಿಸುವುದಿಲ್ಲ. ಮತ್ತೆ ತನ್ನ ಅಂಥದೇ ಹೊಸ ಹೊಸ ಸಾಹಸಗಳನ್ನು ಮುಂದುವರೆಸುತ್ತಾನೆ. ಹೆಂಗಸರ ಮನಸ್ಸನ್ನು ಗೆಲ್ಲುವ ಕಲೆ ಅವನಿಗೆ ಕರಗತವಾಗಿದೆ. ಪ್ರತಿಯೊಂದು ಹೆಣ್ಣಿಗೂ ನಿನ್ನನ್ನು ಮದುವೆಯಾಗುತ್ತೇನೆ ಎಂದು ಆಮಿಷ ಒಡ್ಡಿ ಒಲಿಸಿಕೊಳ್ಳುವುದು ಅವನ ತಂತ್ರ ಲಕ್ಕುವಿ ಮಗಳು.

ನಾನು ಮುಟ್ಟಾಗಿಲ್ಲ ಎಂದಾಗ
ಅದ್ಯಾಕ್ ಹಿಂಗ್ ಮಾಡಿದೆ ? ಅದ್ಯಾವನೇ ಅವನು ? ಎಂದು ಮಗಳನ್ನು ಕೇಳುತ್ತಾಳೆ
ಆಗ ಮಗಳು ನೀಡುವ ಉತ್ತರ
'ಮಂಜಯ್ಯಾರು ಮದುವೆ ಮಾಡ್ಕತೀನಿ ಅಂತ ನಂಬಿಸಿದರು' ಎನ್ನುತ್ತಾಳೆ.
ಹಂಗಂತ ನಿಂಗೂ ನಂಬಿಸಿ ಕೆಡಿಸಿ ಬುಟ್ನಾ ಅವನು ? ಎನ್ನುವ ಈ ಮಾತುಗಳಲ್ಲಿ
ಮಂಜಯ್ಯನ ದುಷ್ಟತನದ ಪರಾಕಾಷ್ಠೆಯ ಚಿತ್ರ ಮೂಡುತ್ತದೆ.

ಸ್ವತಃ ತನ್ನ ಹೆಂಡತಿ ಸಾವಿತ್ರಿಯನ್ನು ಅತ್ಯಾಚಾರ ಮಾಡುವ ಮಂಜಯ್ಯನ ವಿಷಯವಾಗಿ ಸಾವಿತ್ರಿ

ಮಾತನಾಡುವಾಗಲೂ ಮಂಜಯ್ಯನ ಶಕ್ತಿ ಎಂಥಹದು ಎಂದು ತಿಳಿಯುತ್ತದೆ. ಕಾಮದ ವಿಷಯದಲ್ಲಿ ಅವನು ಪರಿಣಿತನಾಗಿದ್ದ ಸಾವಿತ್ರಿ ಮಾತುಗಳಿಂದಲೇ ಈ ವಿಷಯ ತಿಳಿಯಬಹುದು.

"ಅವನು ಅತ್ಯಾಚಾರ ಮಾಡಿದನಲ್ಲ ಮಾತನಾಡುಕ್ಕೆ ಕಿರಿಚಿಕೊಳ್ಳಕ್ಕೆ ಕೊಸರಾಡುಕ್ಕೆ ಅವಕಾಶವಿಲ್ಲದ ಹಾಗೆ ಹಿಡಿದು ಬಿಟ್ಟು. ಹೆಂಗಸಿನ ದೌರ್ಬಲ್ಯದ ನಾಡಿ ಹಿಡಿದು ಮಿಟುವ ಪ್ರಚಂಡ ತಿಳುವಳಿಕೆ ಅವನಿಗಿದೆ. ಗಂಡಸಿನ ದೌರ್ಬಲ್ಯ ಹಿಡಿದು ಆಡಿಸುವ ತಿಳುವಳಿಕೆ ಸೂಳೆಗೆ ಇರೂಹಾಗೆ. ಹೆಂಗಸನ್ನು ಆಡಿಸೋ ಕಲೆ ಎಲ್ಲ ವಿಟರಿಗೂ ಇರಬಹುದು ಅವನು ಅಂಥೋನು ಅವನು ಮಾಡಿದ ಅತ್ಯಾಚಾರದ ಕೊನೆಗೆ ನಾನು ಸೋತಿದ್ದೆ, ಭಾಗಿಯಾಗಿದ್ದೆ." (ಸಾಕ್ಷಿ, ಪು-೫೬)

ಇಂಥ ಹಲವು ಘಟನೆಗಳ ಮೂಲಕ 'ಮಂಜಯ್ಯ'ನ ಚಿತ್ರವನ್ನು ಪರಿಣಾಮಕಾರಿಯಾಗಿ ಕಾದಂಬರಿಕಾರರು ಕಟ್ಟಿಕೊಡುತ್ತಾರೆ.

ಸರೋಜಾಕ್ಷಿ ಮತ್ತು ಲಕ್ಕುವಿನ ಎದುರು ಮಾತ್ರ ಅವನು ತನ್ನ ಸೋಲನ್ನು ಒಪ್ಪಿಕೊಳ್ಳುವ ಸದರ್ಭಗಳಿವೆ. ಆದರೂ 'ಕಾಮ'ದ ಪ್ರತೀಕವಾಗಿ ಇಡಿ ಕಾದಂಬರಿಯನ್ನು ಈ ಪಾತ್ರ ತುಂಬಿಕೊಂಡಿದೆ.

## 'ತಂತು' ಕಾದಂಬರಿಯ 'ರವೀಂದ್ರ'

ರವೀಂದ್ರ ತಂತು ಕಾದಂಬರಿಯ ಕೇಂದ್ರ ವ್ಯಕ್ತಿ. ಸ್ವಾತಂತ್ರ್ಯೋತ್ತರ ಭಾರತದ ಆಗು ಹೋಗುಗಳನ್ನು ಕಾದಂಬರಿಕಾರರು, ಈ ಪಾತ್ರದ ಮುಖಾಂತರವೇ ಕಟ್ಟಿಕೊಡುತ್ತಾರೆ. ಅತ್ಯಂತ ವಿಸ್ತಾರವಾದ ಈ ಕಾದಂಬರಿಯಲ್ಲಿ ರವೀಂದ್ರನ ಪಾತ್ರಕ್ಕೆ ವಿಶಿಷ್ಟವಾದ ಸ್ಥಾನವಿದೆ. ಎಪ್ಪತ್ತರ ದಶಕದ ಭಾರತದ ಸಾಮಾಜಿಕ, ಧಾರ್ಮಿಕ, ರಾಜಕೀಯ ವಿಷಯಗಳ ವಿವರವುಳ್ಳ ಈ ಕಾದಂಬರಿ ತುರ್ತು ಪರಿಸ್ಥಿತಿಯವರೆಗೆ ತನ್ನ ವ್ಯಾಪ್ತಿಯನ್ನು ಹಿಗ್ಗಿಸಿಕೊಂಡಿದೆ. ಪತ್ರಕರ್ತ ರವೀಂದ್ರ ಭ್ರಷ್ಟ ರಾಜಕೀಯ ವ್ಯವಸ್ಥೆ ಮತ್ತು ಬಂಡವಾಳ ಶಾಹಿ ವ್ಯವಸ್ಥೆ ಈ ದೇಶಕ್ಕೆ ಬಗೆಯುವ ದ್ರೋಹವನ್ನು ಕಣ್ಣಾರೆ ಕಂಡವ. ಸಾಧ್ಯವಿದ್ದಷ್ಟು ತನ್ನೆಲ್ಲ ಶಕ್ತಿಯನ್ನು ಬಳಸಿ ಪತ್ರಿಕೆಯ ಮುಖಾಂತರ ಮೌಲ್ಯಗಳಿಗಾಗಿ ಹೋರಾಡುತ್ತಾನೆ. ಅತ್ಯಂತ ಪ್ರಾಮಾಣಿಕ ಮನಸ್ಸುಳ್ಳ ರವೀಂದ್ರ ಹಲವು ಬಗೆಯ ಸಂಕಷ್ಟಗಳಿಗೆ ಒಳಗಾಗುತ್ತಾನೆ. ಸ್ವತಃ ಅವನ ಮಗ ಅನೂಪ ಮತ್ತು ಅವನ ಹೆಂಡತಿ ಕಾಂತಿ ಬದಲಾದ ಸಾಮಾಜಿಕ, ರಾಜಕೀಯ, ಆರ್ಥಿಕ ಬದುಕಿಗೆ ಹೊಂದಿಕೊಂಡು ಭ್ರಷ್ಟ ಬದುಕಿನತ್ತ ವಾಲುತ್ತಾರೆ. ರವೀಂದ್ರನ ಸರಳತೆ, ಪ್ರಾಮಾಣಿಕತೆಯಂತ ಮೌಲ್ಯಗಳು ನಿರುಪಯೋಗಿ ವಸ್ತುಗಳಂತೆ ಅವರಿಗೆ ತೋರುತ್ತವೆ. ತಾಯಿ ಮಗ ಇಬ್ಬರ ಬದುಕು, ಸುಖಕ್ಕಾಗಿ ಭ್ರಷ್ಟಗೊಂಡ ಬದುಕು. ಅವರು ಅನುಸರಿಸುವ ಮಾರ್ಗವು ತುಂಬಾ ವಿಕೃತವಾದುದು. ಕೇವಲ ಸುಖಾಕಾಂಕ್ಷೆಗಾಗಿ ಪತಿ ರವೀಂದ್ರನಿಗೆ ದ್ರೋಹ ಬಗೆಯುವ ಕಾಂತಿ ಹಣವೇ ಪ್ರಧಾನವೆಂಬ ನಿಲುವಿಗೆ ಅಂಟಿಕೊಳ್ಳುತ್ತಾಳೆ. ಆಡಂಭರದ ಬದುಕನ್ನು ಇಷ್ಟ ಪಡುವ ಅವಳು ಪಾರಂಪರಿಕ ಮೌಲ್ಯಗಳಿಗೆ ವಿರುದ್ಧವಾದ ದಿಕ್ಕಿನಲ್ಲಿ ಸಾಗುತ್ತಾಳೆ. ತನ್ನದೇ ಆದ ನೀತಿ ನಿಯಮಗಳನ್ನು ಅನುಸರಿಸುವ ರವೀಂದ್ರ ಹೆಂಡತಿ ದೂರವಾದರೂ ಸಹಿತ ಅದರಿಂದ

ವಿಚಲಿತನಾಗುವುದಿಲ್ಲ ತಾನು ಕೆಲಸ ಮಾಡುತ್ತಿದ್ದ ಟ್ರಿಬ್ಯೂನಲ್ ಪತ್ರಿಕೆಯ ಮಾಲೀಕರು ಆಳುವ ಪಕ್ಷದೊಂದಿಗೆ ಒಪ್ಪಂದ ಮಾಡಿಕೊಂಡಿದ್ದರಿಂದ ರವೀಂದ್ರ ಸಂಪಾದಕ ಹುದ್ದೆಗೆ ರಾಜೀನಾಮೆ ನೀಡಿ ಹೊರಬರುತ್ತಾನೆ. ನಂತರ ತೀವ್ರ ಕಷ್ಟಕ್ಕೆ ಒಳಗಾದರೂ ಪ್ರಾಮಾಣಿಕತೆಯಿಂದ ಹಿಂದೆ ಸರಿಯುವದಿಲ್ಲ. ತಾನು ಹುಟ್ಟಿ ಬೆಳೆದ ಚೆನ್ನರಾಯಪಟ್ಟಣದ ಬಸವನ ಪುರದಲ್ಲಿರುವ ಚೆನ್ನಕೇಶವ ದೇವಾಲಯದಲ್ಲಿ ಸರಸ್ವತಿ ವಿಗ್ರಹ ಕಳ್ಳತನವಾದ ವಿಷಯ ತಿಳಿದು ಗ್ರಾಮಕ್ಕೆ ಭೇಟಿ ಕೊಡುವ ರವೀಂದ್ರ ಈ ದೇಶದ ಸಾಂಸ್ಕೃತಿಕ ವಿನಾಶವನ್ನು ಕಂಡು ಚಿಂತಿಸುತ್ತಾನೆ. ಪತ್ರಿಕೆಯ ಮುಖಾಂತರ ಅದನ್ನು ತಡೆಯಲು ಪ್ರಯತ್ನಿಸುತ್ತಾನೆ. ರಾಜಕೀಯ ಕ್ಷೇತ್ರದಲ್ಲಿರುವ ವ್ಯಕ್ತಿಗಳಿಗೆ ರಾಷ್ಟ್ರದ ಬಗ್ಗೆ ಮತ್ತು ಅದರ ಸಾಂಸ್ಕೃತಿಕ ಸಂಪತ್ತಿನ ಬಗ್ಗೆ ಪ್ರಾಮಾಣಿಕ ಕಾಳಜಿ ಇಲ್ಲದಿರುವದನ್ನು ಕಂಡು ತೀವ್ರ ಆಘಾತಕ್ಕೆ ಒಳಗಾಗುತ್ತಾನೆ.

"ಶುದ್ಧ ಜೀವನ ನಡೆಸೋನಿಗೆ ಭಾವನ ಶಕ್ತಿ ಕಮ್ಮಿ. ಕ್ಷಮಾಶೀಲತೆಯೂ ಕಮ್ಮಿ. ನಿರ್ಣಯ ಬುದ್ಧಿ ಕಠಿಣ ನಿಯಮಗಳಿಂದ ತೂಗೋದೇ ಹೆಚ್ಚು. ನಾನೇ ಏಸಾಧಾರಣ ಮನುಷ್ಯನೋ?... ಪ್ರೀತಿ ಮಾರ್ದವತೆಗಳನ್ನು ಸಾಕಷ್ಟು ಪಡೆದಿದೀನಿ. ಅಜ್ಜಿಯ ಮಾರ್ದವತೆಗಿಂತ ಪ್ರಪಂಚದಲ್ಲಿ ಇನ್ನೇನಿದೆ? ಅಜ್ಜ ಕಠಿಣ ಮನುಷ್ಯರಂತೂ ಖಂಡಿತ ಅಲ್ಲ . ಅಪ್ಪನಲ್ಲಿ ಮಾರ್ದವತೆಯೂ ಕಮ್ಮಿ ಆದರೆ ಎಂದೂ ಕಠಿಣರಲ್ಲ ಕ್ರೂರಿಯಲ್ಲ, ಉಪೇಕ್ಷೆ ಅಡ್ಡ ಹಾದಿ, ಅಡ್ಡ ಆಲೋಚನೆಗಳ ಉದಾಹರಣೆ ನನಗೆ ಬಾಲ್ಯದಲ್ಲಿ ಸಿಕ್ಕಲೇ ಇಲ್ಲ" ಎಂದು ಆತ್ಮ ವಿಮರ್ಶೆ ಮಾಡಿಕೊಳ್ಳುವ ರವೀಂದ್ರ ತನ್ನ ಸ್ವಭಾವವನ್ನು ತನ್ನ ಹಿರಿಯರ ಸಂಸ್ಕೃತಿಯೇ ನಿರ್ಮಿಸಿದೆ ಎಂಬ ವಿಚಾರಕ್ಕೆ ಬರುತ್ತಾನೆ. ಕಾಂತಿಯ ಸ್ವಭಾವಕ್ಕೂ ರವೀಂದ್ರನ ಸ್ವಭಾವಕ್ಕೂ ಹೊಂದಿಕೆಯೇ ಆಗುವುದಿಲ್ಲ. ಸಂಪತ್ತೇ ಸರ್ವಸ್ವವೆಂದು ನಂಬಿದ ಕಾಂತಿ ಕೊನೆಗೂ ವಿಫಲಳಾಗುತ್ತಾಳೆ. ಮಗನಿಗಾಗಿ ಗಳಿಸಿದ ಸಂಪತ್ತು ನಿರರ್ಥಕವೆನಿಸುತ್ತದೆ. ಕಾರಣ ಆ ಸಂಪತ್ತನ್ನು ಸ್ವೀಕರಿಸಲು ಮಗ ಅನೂಪ ಅಮೇರಿಕೆಯಿಂದ ಹಿಂದಿರುಗುವದಿಲ್ಲ. ಸಂಪತ್ತಿಗಾಗಿ 'ಬಹೇಲ'ನಂಥವರ ಜೊತೆ ಅನೈತಿಕ ಸಂಬಂಧವಿಟ್ಟುಕೊಳ್ಳುವ ಕಾಂತಿ ಮಾನಸಿಕ ನೆಮ್ಮದಿಗಾಗಿ 'ಧ್ಯಾನ'ವನ್ನು ಅಶ್ರಯಿಸುತ್ತಾಳೆ.

ರವೀಂದ್ರನ ತಾಳ್ಮೆ, ರಾಷ್ಟ್ರದ ಬಗೆಗಿರುವ ಅವನಿಗಿರುವ ಖಚಿತತೆ, ಪ್ರಾಮಾಣಿಕತೆ ಓದುಗರ ಮನಸ್ಸಿಗೆ ತಟ್ಟುತ್ತವೆ. ಮೌಲ್ಯಗಳನ್ನು ಸಂರಕ್ಷಿಸಲು ಅವನು ಶಕ್ತಿ ಮೀರಿ ಪ್ರಯತ್ನಿಸುತ್ತಾನೆ. ಎಲ್ಲಾ ಅಡೆ-ತಡೆಗಳನ್ನು ದಾಟಿಕೊಂಡು ಹೋಗುವ ಅವನ ಮನೋಶಕ್ತಿ ಮೆಚ್ಚುಗೆಯಾಗುತ್ತದೆ. ಆದರೆ ರಾಷ್ಟ್ರದ ರಾಜಕೀಯ ಮತ್ತು ಸಾಮಾಜಿಕ ಸ್ಥಿತಿ-ಗತಿಗಳು ಅಪಮೌಲ್ಯೀಕರಣಕ್ಕೆ ಒಳಗಾಗುವ ರಭಸಕ್ಕೆ ರವೀಂದ್ರನ ಪ್ರಾಮಾಣಿಕತೆಯು ಸಮರ್ಥ ಉತ್ತರವಾಗದೇ ಹೋಗುತ್ತದೆ.

# ಮೌಲ್ಯ ವ್ಯವಸ್ಥೆ

ಭೈರಪ್ಪನವರ ಕಾದಂಬರಿಗಳಲ್ಲಿ ಶುದ್ಧ ಭಾರತೀಯವೆನ್ನಿಸಬಹುದಾದ ಜೀವನ ಮೌಲ್ಯಗಳ ಕಲ್ಪನೆ ಇದೆ. ಸಾಂಪ್ರದಾಯಕ ಮೌಲ್ಯಗಳ ಅಂತಃಸತ್ವವನ್ನು ಅವರ ಹಲವು ಕಾದಂಬರಿಗಳು ದರ್ಶನ ಮಾಡುತ್ತವೆ. ''ಭೈರಪ್ಪನವರು ತೋರುವ ಸಾಂಸ್ಕೃತಿಕ ಆಸ್ಥೆಗಳು ಮೌಲ್ಯನಿಷ್ಠೆಯ ಮೂಲಕ ನಮಗೆ ನಮಗೆ ಕಾಣಿಸಿಕೊಳ್ಳುತ್ತವೆ'' ಎಂಬ ಅಮೂರರವರ ಮಾತನ್ನು ಇಲ್ಲಿ ಗಮನಿಸಬಹುದು. ಭಾರತೀಯ ಸಂಸ್ಕೃತಿ ಅನೇಕ ಉಗಮಗಳಿಂದ ಅವರು ತಮ್ಮ ಕಾದಂಬರಿಗಳಲ್ಲಿ ಮೌಲ್ಯ ವ್ಯವಸ್ಥೆಯ ಕಲ್ಪನೆಯನ್ನು ಸಾದರಪಡಿಸುತ್ತಾರೆ. ಪ್ರತಿಯೊಂದು ಕಾದಂಬರಿಯಲ್ಲಿಯೂ ಮೌಲ್ಯಗಳ ವಿವೇಚನೆ ಸಶಕ್ತವಾಗಿ ಕಾಣಿಸಿಕೊಳ್ಳುತ್ತದೆ. ಸನಾತನ ಮೌಲ್ಯಗಳ ಪ್ರಸ್ತುತತೆ ಬದುಕಿಗೆ ಇಂದಿಗೂ ಅಗತ್ಯವಾಗಿದೆ ಎಂಬುದು ಅವರ ನಿಲುವು. ಸನಾತನ ಮೌಲ್ಯಗಳಲ್ಲಿ ಅವರ ವಿಶ್ವಾಸ ದೃಢವಾಗಿದೆ. ವ್ಯಕ್ತಿ ಮತ್ತು ಸಮಾಜದ ಜೀವನಕ್ಕೆ ಮೌಲ್ಯಗಳು ಆಧಾರವಾಗಿವೆ. ಕಾಲ ಬದಲಾದ ಹಾಗೆಲ್ಲ ಮೌಲ್ಯಗಳ ಸಂಘಟನೆಯ ವ್ಯವಸ್ಥೆ ಕುಸಿಯಬಹುದು. ಹೊಚ್ಚ ಹೊಸದೆನ್ನಿಸುವ ಮೌಲ್ಯಗಳ ರಚನೆಯಾಗಬಹುದು. ಇದು ನಿರಂತರವಾಗಿ ಸಾಮಾಜಿಕ ಬದುಕಿನಲ್ಲಿ ನಡೆಯಬಹುದಾದ ಕ್ರಿಯೆ. ಇಂಥ ಮೌಲ್ಯಗಳು ಸಾಮಾಜಿಕ ಬದುಕನ್ನು ಸುವ್ಯವಸ್ಥಿತವಾಗಿ ಮುನ್ನಡೆಸಿಕೊಂಡು ಹೋಗುವುದಕ್ಕೆ ಆಧಾರವಾಗಿವೆ. ಆದರೆ ಎಲ್ಲ ಮೌಲ್ಯಗಳು ವೈಯಕ್ತಿಕ ಸಮಸ್ಯೆಗಳಿಗೆ ಪರಿಹಾರವಾಗುತ್ತವೆಯೆಂದು ಹೇಳಲು ಸಾಧ್ಯವಿಲ್ಲ. ಪ್ರತಿಯೊಂದು ಸಮಾಜವೂ ಇಂಥ ಮೌಲ್ಯಗಳ ಕಟ್ಟಡದ ಮೇಲೇಯೇ ರಚಿಸಲ್ಪಟ್ಟಿರುತ್ತವೆ. ಮೌಲ್ಯಗಳು ಕುಸಿದುಹೋಗುತ್ತಿರುವಾಗ ಅಂಥ ಸಾಮಾಜಿಕ ವ್ಯವಸ್ಥೆಯಲ್ಲಿ ಒಂದು ಬಗೆಯ ಸಂಘರ್ಷವೂ ಕಾಣುತ್ತದೆ.

'ವಂಶವೃಕ್ಷ' ಮೌಲ್ಯಗಳ ನಡುವಿನ ಸಂಘರ್ಷವನ್ನು ಚಿತ್ರಿಸುವ ಕಾದಂಬರಿ. ಸನಾತನ ಮೌಲ್ಯಗಳ ವಿರುದ್ಧ ಆಧುನಿಕ ಮೌಲ್ಯಗಳ ಚರ್ಚೆ ಈ ಕಾದಂಬರಿಯಲ್ಲಿ ಕಂಡುಬರುತ್ತದೆ. ಶ್ರೀನಿವಾಸ ಶ್ರೋತ್ರಿ ಮತ್ತು ಅವರ ಹೆಂಡತಿ ಭಾಗೀರಥಿ ಸನಾತನ ಮೌಲ್ಯಗಳ ಪ್ರತಿನಿಧಿಗಳಾದರೆ, ರಾಜಾರಾಯ ಹಾಗೂ ಕಾತ್ಯಾಯನಿ ಹೊಸ ಮೌಲ್ಯಗಳ ಪ್ರತಿನಿಧಿಗಳು ಈ ಕಾದಂಬರಿಯಲ್ಲಿ ಬರುವ ಪಾತ್ರಗಳು ಜ್ಞಾನ, ಬುದ್ಧಿ, ಪ್ರಕೃತಿ ಎಂಬ ಮೌಲ್ಯಗಳ ಸಂಕೇತಗಳಾಗಿ ಚಿತ್ರಸಲ್ಪಟ್ಟಿವೆ. ಜ್ಞಾನವೆಂಬ ಮೌಲ್ಯವನ್ನು ಶ್ರೀನಿವಾಸ ಶ್ರೋತ್ರಿಯವರು ಪ್ರತಿನಿಧಿಸುತ್ತಾರೆ. 'ಬುದ್ಧಿ'ಯೆಂಬ ಮೌಲ್ಯವನ್ನು ಡಾ॥ಸದಾಶಿವರಾಯರು ಪ್ರತಿನಿಧಿಸುತ್ತಾರೆ. ತಾರುಣ್ಯದಲ್ಲಿಯೇ ಪತಿಯನ್ನು ಕಳೆದುಕೊಳ್ಳುವ ಕಾತ್ಯಾಯನಿ 'ಪ್ರಕೃತಿ' ಎಂಬ ಮೌಲ್ಯದ ಸಂಕೇತವಾಗಿದ್ದಾಳೆ.

ರಾಜಕೀಯ ಧಾರ್ಮಿಕ, ತಾತ್ವಿಕ, ನೈತಿಕ, ಸಾಮಾಜಿಕ, ಶಾಸನಿಕ ಮುಂತಾದ ನೆಲೆಯಲ್ಲಿ ಮೌಲ್ಯಗಳನ್ನು ಎತ್ತಿಕೊಂಡು ಗಂಭೀರವಾಗಿ ಚರ್ಚಿಸುತ್ತಾರೆ. ಸಮಾಜ ಮತ್ತು ವ್ಯಕ್ತಿಗಳ ಆಂತರ್ಯದಲ್ಲಿ ನಡೆಯುವ ಭಿನ್ನ ಪ್ರವೃತ್ತಿಗಳ ಅಥವಾ ಶ್ರದ್ಧೆಗಳ ನಡುವೆ ನಡೆಯುವ ಸಂಘರ್ಷವನ್ನು ಅವರ ಕಾದಂಬರಿಗಳ ಕಟ್ಟಿಕೊಡುತ್ತವೆ.

ಪರ್ವ ಕಾದಂಬರಿಯಲ್ಲಿ 'ಸ್ತ್ರೀಯರಿಗೆ ಋತುಚಕ್ರ ಬಂದಾಗ ವೀರ್ಯ ಸೇರಿ ಗರ್ಭಕಟ್ಟದೇ ನಷ್ಟವಾದರೆ ಪಾಪ' ಅದಕ್ಕಾಗಿ ಮುಂದಿನ ಪೀಳಿಗೆ ನರಕವಾಸ ಮಾಡಬೇಕಾಗುತ್ತದೆ ಎಂಬ ನಂಬಿಕೆ ಇದ್ದರೆ. ಅದೇ ಜಲಪಾತ ಕಾದಂಬರಿಯಲ್ಲಿ ಬದಲಾದ ಸಾಮಾಜಿಕ ವ್ಯವಸ್ಥೆ, ವೈಜ್ಞಾನಿಕ ವಿಚಾರಗಳಿಂದ ಈ ಎಲ್ಲ ವಿಚಾರಗಳು ತಮ್ಮ ಮೌಲ್ಯವನ್ನು ಕಳೆದುಕೊಂಡಿರುವುದನ್ನು ಕಾಣುತ್ತೇವೆ. ಜಲಪಾತ ಕಾದಂಬರಿಯ ನಾಯಕಿ ವಸುಂಧರಾ ಮತ್ತು ನಾಯಕ ಶ್ರೀಪತಿ ಮುಂಬಯಿಯಂಥ ಪಟ್ಟಣದಲ್ಲಿ ತಮ್ಮ ಆರ್ಥಿಕ ಅನುಕೂಲತೆಗೆ ತಕ್ಕಂತೆ ಕುಟುಂಬವನ್ನು ಯೋಜಿಸಿಕೊಳ್ಳುತ್ತಾರೆ. ಎರಡನೆ ಬಾರಿ ಬಸುರಿಯಾದಾಗ ಆ ಬಸುರನ್ನು ಕಳೆದುಕೊಳ್ಳುವ ಮೂಲಕ ಮುಂಬಯಿಯ ಬದುಕಿಗೆ ತನ್ನ ಸಂಬಳಕ್ಕೆ ತಕ್ಕಂತೆ ಕುಟುಂಬದ ನೆಮ್ಮದಿಯನ್ನು ಹೊಂದುತ್ತಾರೆ. ಅವರಿಗೆ ಗರ್ಭ ಕಳೆದುಕೊಳ್ಳುವ ಕ್ರಿಯೆ ಪಾಪವಾಗಿ ತೋರುವುದಿಲ್ಲ.

ಪಾಶ್ಚಾತ್ಯ ಪ್ರಭಾವಗಳಿಂದ ಪ್ರೇರಿತನಾದ 'ತಬ್ಬಲಿಯು ನೀನಾದೆ ಮಗನೆ' ಯ ಕಾಳಿಂಗಗೌಡ ತನ್ನ ಕೊಟ್ಟಿಗೆಯಲ್ಲಿಯೇ ಪುಣ್ಯಕೋಟಿಯೆಂಬ ಹಸುವನ್ನು ಕೊಲ್ಲಲಾಗಿದೆ ಎಂದು ತಿಳಿದಾಗ ಅವನಿಗೆ ಅಂಥ ಅಘಾತವೇನೂ ಆಗುವದಿಲ್ಲ. ತಾನೂ ತಿನ್ನುತ್ತಿರುವುದು ಗೋಮಾಂಸವೆಂದು ತಿಳಿದಾಗಲೂ ಗ್ರಾಮದವರಿಗೆ ತಿಳಿದರೆ ಅನಾಹುತವಾಗುತ್ತದೆಂದು ಭಾವಿಸುತ್ತಾನೆ. ಆದರೆ ತಾನು ಗೋಮಾಂಸವನ್ನು ತಿನ್ನುತ್ತಿರುವುದು ಪಾಪವೆಂದು ಭಾವಿಸುವುದಿಲ್ಲ. ಆದರೆ ಅವನ ತಾಯಿ ತಾಯವ್ವ ಮತ್ತು ಆಗ್ರಾಮದ ಜನತೆ ಗೋಮಾಂಸ ಭಕ್ಷಣೆಯನ್ನು ಮಹಾಪಾಪದ ಕ್ರಿಯೆಯಂದು ಭಾವಿಸುತ್ತಾರೆ. ನೈತಿಕ, ಧಾರ್ಮಿಕ, ಸಾಮಾಜಿಕ ನಂಬುಗೆಗಳ ಭದ್ರ ನೆಲೆಯಲ್ಲಿ ಸ್ಥಾಪಿತಗೊಂಡಿರುವ ಚಿತ್ರಣ ಅಲ್ಲಿ ದೊರೆಯುತ್ತದೆ. ಪ್ರಾಣಿಗಳ ಮೇಲಿರುವ ದಯೆ, ಅವುಗಳಲ್ಲಿಯೇ ದೇವರನ್ನು ಕಂಡುಕೊಳ್ಳುವ ನಂಬುಗೆ. ಮನ್ಯುಷರಿಗೂ ಪ್ರಾಣಿಗಳಿಗೂ ಬೇದ ತೋರದ ಪ್ರೀತಿ ಈ ಎಲ್ಲಾ ಮೌಲ್ಯಗಳ ಒಟ್ಟು ವ್ಯವಸ್ಥೆಯನ್ನು ಗ್ರಾಮೀಣ ಸಮುದಾಯದಲ್ಲಿ ಕಂಡುಕೊಳ್ಳಬಹುದಾಗಿದೆ. 'ಗೋವು' ಭಾರತೀಯ ಕೃಷಿವ್ಯವಸ್ಥೆ ಮೂಲಾಧಾರವಾಗಿರುವುದರಿಂದ ಅದನ್ನು ಮತ್ತು ಅದರ ಸಂತತಿಯನ್ನು ಕಾಯ್ದುಕೊಳ್ಳುವುದು ಭಾರತೀಯ ಸಮಾಜದ ನೈತಿಕ ಜವಾಬ್ದಾರಿಯಾಗಿರುವುದನ್ನು ಕಾದಂಬರಿ ಚಿತ್ರಿಸುತ್ತದೆ. ಈ ಅಂಶಗಳಿಗೆ ಪೆಟ್ಟು ತಗುಲಿದಾಗ ಉಂಟಾಗುವ ಪರಿಣಾಮಗಳನ್ನು ಕಾದಂಬರಿಯಲ್ಲಿ ಮನಮುಟ್ಟುವಂತೆ ಚಿತ್ರಿಸಲಾಗಿದೆ.

'ದಾಟು' ಕಾದಂಬರಿ ಬದಲಾಗುತ್ತಿರುವ ಸಾಮಾಜಿಕ ವ್ಯವಸ್ಥೆಯ ಚಿತ್ರಣವನ್ನು ದಟ್ಟವಾಗಿ ಚಿತ್ರಿಸುತ್ತದೆ. ಜಾತಿ ಸಮಸ್ಯೆಯ ಉಸಿರಾದ ಮೇಲು, ಕೀಳುಗಳ ಭಾವನೆಗಳು ಹಲವು ರೂಪಗಳಲ್ಲಿ ತೋರುತ್ತವೆ. ಬ್ರಾಹ್ಮಣರರು ಹರಿಜನರನ್ನು ಅಸ್ಪೃಶ್ಯರು ಎಂದು ಕರೆದರೆ ಅದೇ ಅಸ್ಪೃಶ್ಯರು ಬ್ರಾಹ್ಮಣರ ತಮ್ಮ ಕಚೇರಿಗೆ ಬಂದರೆ ಲಕ್ಷ್ಮಿ ಓಡಿಹೋಗುತ್ತಾಳೆ ಎಂದು ಭಾವಿಸುತ್ತಾರೆ. ವೆಂಕಟರಮಣಯ್ಯ ಹರಿಜನಕೇರಿಗೆ ಬಂದಾಗ ಅವನಿಗೆ ಸಗಣಿಯಿಂದ ಹೊಡೆದು ಓಡಿಸುವ ಸಂದರ್ಭದಲ್ಲಿ ಇದನ್ನು

ಗಮನಿಸಬಹುದು. ಅನಂತಮೂರ್ತಿಯವರ 'ಭಾರತೀಪುರ' ಕಾದಂಬರಿಯಲ್ಲಿಯೂ ಈ ವಿಷಯದ ಪ್ರಸ್ತಾಪವಾಗುತ್ತದೆ.

ಜಾತಿಪದ್ಧತಿಯನ್ನು ಅಮಾನುಷವೆಂದು ತಿಳಿಯುವ ಸತ್ಯಭಾಮೆ ಅದನ್ನು ದಾಟುವ ಕ್ರಿಯೆಗೆ ಮುಂದಾಗುತ್ತಾಳೆ. ಮೋಹನದಾಸ ಕ್ರಾಂತಿಯಿಂದ ಈ ಸಾಮಾಜಿಕ ವ್ಯವಸ್ಥೆಯನ್ನು ಬದಲಾಯಿಸುವ ಸಾಧ್ಯತೆಗಳನ್ನು ಕಂಡುಕೊಂಡು ಅಂಥ ಪ್ರಯತ್ನಗಳಲ್ಲಿ ತೊಡಗಿಕೊಳ್ಳುತ್ತಾನೆ. ಅಸ್ಪೃಶ್ಯರಿಗೆ ದೇವಸ್ಥಾನದಲ್ಲಿ ಪ್ರವೇಶವಿರಬೇಕೆಂದು ಬಯಸಿ. ಅದಕ್ಕಾಗಿ ಹೋರಾಟ ಮಾಡುತ್ತಾನೆ. ದೇವಾಲಯ ಪ್ರವೇಶದ ಸಂದರ್ಭದಲ್ಲಿ ತಾನೆ ಮೂರ್ಚೆಹೋಗುತ್ತಾನೆ. ಮಡಿವಂತರನ್ನು ವಿರೋಧಿಸಿ ತನ್ನ ಜಾತಿಯವರೊಂದಿಗೆ ದೇವಾಲಯ ಪ್ರವೇಶ ಮಾಡುವುದು ಸಫಲವಾಗುವುದಿಲ್ಲ. ತಾವೂ ಕೂಡಾ ಎಲ್ಲರಂತೆ ಸಮಾನರು ಬೆರೆಯವರಿಗಿರುವ ಧಾರ್ಮಿಕ ಸ್ವಾತಂತ್ರ್ಯ ತಮಗೂ ಇರಬೇಕೆನ್ನುವ ನಿಲುವು ಮೋಹನದಾಸನದು. ಶತಮಾನಗಳಿಂದ ತುಳಿತಕ್ಕೆ ಅನ್ಯಾಯಗಳಿಗೆ ಒಳಗಾದವರಿಗೆ ಶಾಂತಿ ಮತ್ತು ತಾಳ್ಮೆ ಅಗತ್ಯಗಳಿಲ್ಲವೆಂದು ಅವನು ಭಾವಿಸುತ್ತಾನೆ. ದೇವಾಲಯದ ಪ್ರವೇಶದ ಸಂದರ್ಭದಲ್ಲಿ ತುಂಬಾ ಭಯಭಕ್ತಿಯಿದ್ದ ಅವನ ಜನ ದೇವರಿಗೆ ಅಂಜಿ ನೆಲದ ಮೇಲೇನೂ ಬೀಳುವುದಿಲ್ಲ ಆದರೆ ಪ್ರಜ್ಞಾವಂತನಾದ ಮೋಹನದಾಸನೇ ಮೂರ್ಛೆಬಂದು ನೆಲದ ಮೇಲೆ ಬಿದ್ದ ನಂತರ ಎಲ್ಲರೂ ದಿಕ್ಕಪಾಲಾಗಿ ಹೊರಗೆ ಓಡಿಹೋಗುತ್ತಾರೆ.

ಈ ಕಾದಂಬರಿಯಲ್ಲಿ ಬರುವ ಇಂಥ ಹಲವಾರು ದೃಶ್ಯಗಳನ್ನು ನೋಡಿದಾಗ ಧಾರ್ಮಿಕ ಮತ್ತು ಪಾರಮಾರ್ಥಿಕ ಮೌಲ್ಯಗಳ ಮೇಲೆ " ಭೈರಪ್ಪನವರು ವಿಶೇಷವಾದ ಗಮನಹರಿಸುತ್ತಾರೆ. ಎನಿಸುತ್ತದೆ. ಭೈರಪ್ಪನವರು ಮೌಲ್ಯಗಳು ಬದಲಾಗುವುದಕ್ಕು ಸಮಾಜದಲ್ಲಿ ಉಂಟಾಗುವ ಬದಲಾವಣೆಗಳಿಗೂ ಸಾಕಷ್ಟು ಗಮನ ಕೊಡುವಂತೆ ಕಾಣುವುದಿಲ್ಲ. ಬದಲಾಗುವ ಸಮಾಜ, ಮೌಲ್ಯಗಳ ಚೌಕಟ್ಟಿನಲ್ಲಿ ಉಂಟಾಗುವ ಗೊಂದಲಗಳು - ಇವುಗಳಿಗೆ ವಿರುದ್ಧವಾಗಿ ಸ್ಪಷ್ಟವಾದ ಪುರಾತನವನು ಎತ್ತಿ ಹಿಡಿಯುತ್ತಾರೆಯೇ ಎನಿಸುತ್ತದೆ." (ಸಹಸ್ಪಂಧನ, ಸಂ: ಮಾಧವ ಕುಲಕರ್ಣಿ, ಪು-೪೯೪) ಎಂದು ಎಂ.ಜಿ.ಕೃಷ್ಣಮೂರ್ತಿಯವರು ಅಭಿಪ್ರಾಯ ಪಡುತ್ತಾರೆ.

'ನಾಯಿನೆರಳು' ಕಾದಂಬರಿಯಲ್ಲಿ ನಮ್ಮ ಪೂರ್ವದ ಕಾಲದ ಜನರ ನಂಬಿಕೆ ಮತ್ತು ಆಚಾರ ವಿಚಾರ ಬಿಂಬಿಸುವ ಕೆಲವು ಮೌಲ್ಯಗಳನ್ನು ಕುರಿತು ಪ್ರಸ್ತಾಪಿಸಲಾಗಿದೆ. ಆತ್ಮದ ಅಸಿತ್ವವನ್ನು ಒಪ್ಪಿಕೊಳ್ಳುವುದು ಮತ್ತು ವ್ಯಕ್ತಿಯ ಮರಣದ ನಂತರ ಪೂರ್ವಜನ್ಮವಿದೆ ಎಂಬ ಹಿಂದೂ ಧರ್ಮದ ನಂಬಿಕೆಯನ್ನು ಒಪ್ಪಿಕೊಳ್ಳುವಂತೆ ಕಾದಂಬರಿಯ ವಸ್ತುವನ್ನು ಸೃಷ್ಟಿಸಲಾಗಿದೆ. ಪ್ರತಿಯೊಬ್ಬ ವ್ಯಕ್ತಿಯು ತನ್ನ ಜೀವನಾವಧಿಯಲ್ಲಿ ಉತ್ತಮ - ನೀಚ ಕಾರ್ಯಗಳನ್ನು ಮಾಡುವುದರ ಮೂಲಕ ಸ್ವರ್ಗ-ನರಕಗಳನ್ನು ಪಡೆಯುತ್ತಾನೆ. ಮತ್ತು ಆತ್ಮವೆಂಬುದು ಅವಿನಾಶ ಆನೇಕ ಜನ್ಮಗಳನ್ನು ಅದು ಪಡೆಯುತ್ತದೆ ಎಂದು ಸಾವಿನ ನಂತರವೂ ಇರುವ ಜೀವನ ಬಗ್ಗೆ ತಮ್ಮದೇ ಆದ ವಿಚಾರಗಳನ್ನು ಪುರಾಣಗಳಲ್ಲಿ ಮಂಡಿಸಲಾಗಿದೆ. ಈ ಹಿನ್ನಲೆಯಲ್ಲಿ ಧಾರ್ಮಿಕ, ಸಾಮಾಜಿಕ ಮೌಲ್ಯಗಳ ವಿಚಾರವನ್ನು ಈ ಕೃತಿಯಲ್ಲಿ ಮಾಡಲಾಗಿದೆ.

ಸಾಕ್ಷಿ ಕೃತಿಯಲ್ಲಿ ಮಂಜಯ್ಯ ಸಾಮಾಜಿಕ ಬದುಕಿನ ಮೌಲ್ಯಗಳನ್ನು ತಿರಸ್ಕರಿಸುತ್ತ ಸಾಗುತ್ತಾನೆ. ಸತ್ಯಕ್ಕಿಂತ ಸುಳ್ಳು ಅವನಿಗೆ ಪವಿತ್ರವಾದದು ಗ್ರಹಸ್ಥ ಜೀವನದ ಎಲ್ಲಾ ಮಿತಿಗಳನ್ನು ದಾಟುವುದೇ ಬದುಕು

ಎಂದು ಭಾವಿಸುವ ಅವನಿಗೆ ಎಂಥವರನ್ನು ಭ್ರಷ್ಟಗೊಳಿಸುವ ಪಾಂಡಿತ್ಯವಿದೆ. ಕೌಟುಂಬಿಕ ಸಂಬಂಧಗಳನ್ನು ನೀತಿ ಮತ್ತು ಮೌಲ್ಯಗಳ ಹಿನ್ನಲೆಯಲ್ಲಿ ಅವನ್ನು ಗ್ರಹಿಸುವುದೇ ಇಲ್ಲ. ತನ್ನ ದೈಹಿಕ ಆರೋಗ್ಯದ ಕಡೆಗೂ ಅವನು ಲಕ್ಷ್ಯ ವಹಿಸುವುದಿಲ್ಲ.

ಭೈರಪ್ಪನವರ ಕೃತಿಗಳಲ್ಲಿ ಮೌಲ್ಯವಿವೇಚನೆ ಪ್ರಧಾನ ನೆಲೆಯಲ್ಲಿ ಸಾಗುತ್ತದೆ. ''ಮೌಲ್ಯಗಳ ಕಲ್ಪನೆಯೂ ಮಾನವ ನೆಲೆಯಿಂದ ಮೂಡಿಬಂದಿರುವುದರಿಂದ ಸಾಮಾಜಿಕ ಬದುಕಿನಲ್ಲಿ ಅವುಗಳಿಗೆ ಮಹತ್ವದ ಸ್ಥಾನವಿದೆ. ಮಂಜಯ್ಯನಂಥ ವ್ಯಕ್ತಿ ಸಮಾಜಿಕ ಬದುಕಿಗೆ ಅಪಾಯಕಾರಿಯೆಂದು ನಿರ್ಧರಿಸಿ ಅವನ ಶಿಶ್ನವನ್ನೆ ಕೊಯ್ದು ಅವನ ಅಂತ್ಯವನ್ನು ಮಾಡುವ ಲಕ್ಕು ಅನೈತಿಕ ಸಂಬಂಧಗಳು ಕೌಟುಂಬಿಕ ಪವಿತ್ರ ಸಂಬಂಧಗಳಿಗೆ ಅಡ್ಡಿಯಾಗುವ ವಿಚಾರವನ್ನು ಕಾದಂಬರಿಯಲ್ಲಿ ಪ್ರಸ್ತಾಪಿಸಲಾಗಿದೆ. ಮಂಜಯ್ಯನಂಥ ಕಾಮುಕನ ಜೊತೆಗೆ ಸಂಸಾರವನ್ನು ಮಾಡಲು ಒಪ್ಪದೇ ಹೋಗುವ ಸಾವಿತ್ರಿ ಸುಳ್ಳು ಸಾಕ್ಷಿ ಹೇಳಿ ಆತ್ಮಹತ್ಯೆಮಾಡಿಕೊಳ್ಳುವ ಪರಮೇಶ್ವರಯ್ಯ ಮುಂತಾದ ಪಾತ್ರಗಳು ಕೆಲವು ಮೌಲ್ಯಗಳನ್ನು ಎತ್ತಿ ಹಿಡಿಯುತ್ತವೆ.''

ಮಾನವ ಜೀವನವನ್ನೆಲ್ಲಾ ವ್ಯಾಪಿಸಿರುವ ಮೌಲ್ಯಗಳು ಸಾಹಿತ್ಯದಲ್ಲಿಯೂ ಪ್ರಕಟಗೊಳ್ಳುತ್ತವೆ. ''ಮೌಲ್ಯಸಂವೇದನೆಯನ್ನು ಉದ್ದೀಪಿಸುವುದು ಸಾಹಿತ್ಯದ ಗುಣವಾಗಿರಬೇಕು. ಒಂದು ಮಹತ್ ಸಾಹಿತ್ಯ ಕೃತಿಯು ಯಾವಾಗಲೂ ಒಂದು ಮೌಲ್ವಿಕ ತರ ತಮ ಜ್ಞಾನವನ್ನು ಅವಲಂಬಿಸಿರುತ್ತದೆ.

ಜೀವನವನ್ನು ಮೌಲ್ವಿಕ ದೃಷ್ಟಿಯಿಂದ ನೋಡುವವನಿಗೆ ಪ್ರತಿಯೊಂದು ವಸ್ತು ಘಟನೆ, ಮಾನವನ ವರ್ತನೆ, ನೋವು ನಲಿವು, ಮತ್ತು ಭಾವನೆಗಳಲ್ಲಿಯೂ ಒಂದಲ್ಲ ಒಂದು ಮೌಲ್ಯವು ಗೋಚರಿಸುತ್ತದೆ. ವಿಮೌಲ್ಯಗಳೆಂದು ನಾವು ತಿರಸ್ಕರಿಸುವ ಪಿಡುಗು, ಯುದ್ಧ, ಕೊಲೆ, ಕ್ರೌರ್ಯ ಮೊದಲಾದವುಗಳಲ್ಲಿಯೂ ಯಾವುದೇ ಒಂದು ಮೌಲ್ಯವೂ ಕ್ಷೀಣವಾಗಿ ಇಣುಕಿ.'' (ಕಥೆ ಮತ್ತು ಕಥಾ ವಸ್ತು, ಪು-೧೩೩) ಎನ್ನುವ ಭೈರಪ್ಪನವರು ತಮ್ಮ ಕಾದಂಬರಿಗಳನ್ನು ಈ ಮೌಲ್ಯ ವ್ಯವಸ್ಥೆಯ ಸ್ವರೂಪವನ್ನು ಓದುಗನಿಗೆ ಮನದಟ್ಟು ಮಾಡುತ್ತಾರೆ.

'ತಬ್ಬಲಿಯು ನೀನಾದೆ ಮಗನೆ' ಕಾದಂಬರಿಯಲ್ಲಿ ಗೋವು ಮಹತ್ವದ ಸ್ಥಾನ ಪಡೆದುಕೊಂಡಿದೆ. ಅದು ಸತ್ಯದ ತ್ಯಾಗದ ಪ್ರತೀಕವಾಗಿದೆ. ಆದ್ದರಿಂದ ಅದನ್ನು ಪೂಜಿಸುವುದು ಶ್ರೇಷ್ಠ ಕಾರ್ಯವೆಂದು ವೆಂಕಟರಮಣಯ್ಯ, ತಾಯವ್ವ, ಕಿರಿಯಕಾಳಿಂಗಗೌಡ ಮತ್ತು ಗ್ರಾಮಸ್ಥರು ಭಾವಿಸುತ್ತಾರೆ ನಮ್ಮ ದೇವರು ಧರ್ಮವನ್ನು ನಂಬಿದವರಿಗೆ ಮತ್ತು ಪ್ರಸಾದ ಸ್ವೀಕರಿಸುವ ಹಕ್ಕು ಇದೆ ಎಂದು ಹೇಳುವ ವೆಂಕಟರಮಣ ಹಿಂದೂ ಧರ್ಮದ ಮೌಲ್ಯಗಳನ್ನು ಪ್ರತಿನಿಧಿಸುತ್ತಾನೆ. ತಂತು ಕಾದಂಬರಿಯಲ್ಲಿಯೂ ಕೂಡಾ ದೇವಾಲಯ ಮಹತ್ವಗಳ ಕುರಿತು ಚರ್ಚಿಸುತ್ತದೆ. ಉತ್ತಮ ರಾಜಕೀಯ ವ್ಯವಸ್ಥೆ, ಶಿಕ್ಷಣ ವ್ಯವಸ್ಥೆ ಇಲ್ಲದಿರುವುದರ ಬಗ್ಗೆ ಗಮನ ಸೆಳೆಯುತ್ತದೆ. ಪ್ರತಿಯೊಂದು ಭ್ರಷ್ಟಗೊಳ್ಳುತ್ತ ಸಾಗಿರುವುದು, ಅಧಿಕಾರಿ ಶಾಹಿಗಳು ಮತ್ತು ರಾಜಕೀಯ ವ್ಯಕ್ತಿಗಳು ಮೌಲ್ಯಗಳ ವಿನಾಶಕ್ಕೆ ಕಾರಣರಾಗಿರುವುದನ್ನು ಗುರುತಿಸುತ್ತದೆ. ಕಾಂತಿ ಮತ್ತು ಅನೂಪ, ಹೊನ್ನತ್ತಿ ಮುಂತಾದವರ ಅನೈತಿಕ ಬದುಕಿನ ಮುಂದೆ ರವಿಂದ್ರನ ಪಾತ್ರ ಗಮನ ಸೆಳೆಯುತ್ತದೆ. ಸುಖಕ್ಕಾಗಿ ಹಂಬಲಿಸುವುದೇ ಮೌಲ್ಯಗಳಿಗಾಗಿಯೇ ಹಂಬಲಿಸುವ ರವಿಂದ್ರನ ಪಾತ್ರ ವಿಶಿಷ್ಟವಾಗಿದೆ.

ಮತದಾನ ಕೃತಿಯಲ್ಲಿ ಡಾ॥ಶಿವಪ್ಪನ ಪಾತ್ರ ಮೌಲ್ಯಗಳನ್ನು ಎತ್ತಿ ಹಿಡಿಯುತ್ತದೆ ಬಡವರಿಗಾಗಿ ಗ್ರಾಮೀಣ ಜನರಿಗಾಗಿ ಸೇವೆ ಸಲ್ಲಿಸುವ ಮನೋಭಾವದ ಈ ಪಾತ್ರ ತ್ಯಾಗ ಮತ್ತು ಆದರ್ಶವನ್ನು ಮೈಗೊಡಿಸಿಕೊಂಡಂತಹದಾಗಿದೆ.

ಹೀಗೆ ಭೈರಪ್ಪನವರ ಹಲವು ಕಾದಂಬರಿಗಳಲ್ಲಿ ಮೌಲ್ಯಗಳು ಉಂಟುಮಾಡುವ ಸಂವೇದನೆಯು ಮೂಡಿ ಬಂದಿದೆ.

# ಶೈಲಿ

ಭೈರಪ್ಪನವರ ಶೈಲಿ ಆಕರ್ಷಕವಾದುದು. ಓದುಗರನ್ನು ಸೆಳೆಯುವ ಆಪ್ತತೆಯನ್ನು ಅದು ಹೊಂದಿದೆ. ಅಷ್ಟು ಕ್ಲಿಷ್ಟವೂ ಅಲ್ಲದ , ಅಷ್ಟು ಸರಳವೂ ಅಲ್ಲದ ಭಾಷೆಯನ್ನು ಅವರು ಬಳಸುತ್ತಾರೆ. ಸಾಮಾನ್ಯ ಓದುಗನಿಗೂ ಅದು ರುಚಿಸುತ್ತದೆ. ಕಾದಂಬರಿಯಲ್ಲಿ ವ್ಯಕ್ತವಾಗುವ ವೈಚಾರಿಕ ಅಂಶಗಳು ಬರವಣಿಗೆಗೆ ಗಂಭೀರತೆಯನ್ನು ತರುತ್ತವೆ. ಭಾಷೆಯನ್ನು ದುಡಿಸಿಕೊಳ್ಳುವ ಕಲೆ ಅವರಿಗೆ ಕರಗತವಾಗಿದೆ. ಕಥನಕಲೆ ಅವರಿಗೆ ಸಿದ್ಧಿಸಿದೆ. ಓದುಗರು ಮೆಚ್ಚುವಂತೆ ಕುತೂಹಲಕರ ಸನ್ನಿವೇಶಗಳನ್ನು ಒಳಗೊಂಡ ಅವರ ಬರವಣಿಗೆ ಶಕ್ತವಾಗಿಯೇ ಕಾದಂಬರಿಯಲ್ಲಿ ಮೂಡಿಬರುತ್ತವೆ.

''ಭೈರಪ್ಪನವರ ಕಾದಂಬರಿಗಳ ಹಿನ್ನಲೆಯಲ್ಲಿ ಆಳವಾದ ಅಭ್ಯಾಸ ಚಿಂತನಗಳಿವೆ ತಮ್ಮ ಚಿಂತನೆಗೆ ನಂಬಿಕೆಗೆ, ಪರಂಪರೆಗೆ ಒಗ್ಗುವಂಥ ಜೀವನ ಪಾತ್ರ, ಸನ್ನಿವೇಶಗಳನ್ನು ಅವರು ಹುಡುಕುತ್ತಾರೆ. ಜೀವನದಿಂದ ತತ್ವಗಳಲ್ಲ ತತ್ವಗಳ ಮೂಲಕ ಜೀವನಕ್ಕೆ ಬರುತ್ತಾರೆ. ಆದ್ದರಿಂದ ತೀವ್ರ ವೈಯಕ್ತಿಕ ಅನುಭವಗಳಿಂದ ಹುಟ್ಟುವ ಕೃತಿಗಳಂತೆ ಅವರ ಕೃತಿಗಳು ಸಾಂದ್ರವಾಗುವುದಿಲ್ಲ ಆದ್ದರಿಂದ ಅವರ ಕೃತಿಗಳಲ್ಲಿ ಕಥೆ ಸನ್ನಿವೇಶ ವಿವರಗಳು ಮುಖ್ಯವಾಗುತ್ತವೆ. ಕಾದಂಬರಿಗಳು ಗಾತ್ರದಲ್ಲೂ ದೊಡ್ಡವಾಗುವುದಕ್ಕೆ ಇದೂ ಒಂದು ಕಾರಣ ಈ ಕಾರಣದಿಂದಲೇ ಭಾಷೆ ಅವರಿಗೆ ಸವಾಲಾಗುವುದೇ ಇಲ್ಲ'' ಎಂದು ಡಿ.ರಘುನಾಥರಾವ್ ಅಭಿಪ್ರಾಯ ಪಡುತ್ತಾರೆ.

ಕಾದಂಬರಿಯ ವಸ್ತುವಿನ ಆಯ್ಕೆಯಲ್ಲಿ ವಹಿಸುವ ಎಚ್ಚರವನ್ನು ಅವರು 'ತಂತ್ರ'ದ ಅಳವಡಿಕೆಯಲ್ಲೂ ವಹಿಸುತ್ತಾರೆ. 'ಸಾಕ್ಷಿ'ಕಾದಂಬರಿಯಲ್ಲಿ ಅಳವಡಿಸಿದ 'ಪೌರಾಣಿಕ' ವಿಷಯಗಳಿಂದ ಆಯ್ಕೆಮಾಡಿಕೊಂಡ ತಂತ್ರ ಹೆಚ್ಚು ಪರಿಣಾಮಕಾರಿಯಾಗಿದೆ. 'ಪರ್ವ' ಕಾದಂಬರಿಯಲ್ಲಿ ಪಾತ್ರಗಳ ನೆನಪುಗಳ ಮೂಲಕವೇ ಕಥೆಯನ್ನು ಬೆಳಸಿಕೊಂಡು ಹೋಗುವ ರೀತಿ ವಿಶಿಷ್ಟವಾದುದು. ಅನ್ವೇಷಣೆಯ ವಿಶ್ವನಾಥ ಕಾದಂಬರಿಯ ಮುಖ್ಯಪಾತ್ರ. ಆದರೆ ಕಾದಂಬರಿಯಲ್ಲಿ ನೇರವಾಗಿ ಈ ಪಾತ್ರ ಪ್ರವೇಶಿಸುವುದೇ ಇಲ್ಲ. ಬೇರೇ ಪಾತ್ರಗಳು ನಡೆಸುವ ಅನ್ವೇಷಣೆಯ ಮೂಲಕವೇ 'ವಿಶ್ವನಾಥ'ನ ಪಾತ್ರ ವಿಶಿಷ್ಟ ರೀತಿಯಲ್ಲಿ ತನ್ನ ಅಸ್ತಿತ್ವವನ್ನು ಪಡೆದುಕೊಳ್ಳುತ್ತದೆ. 'ಗೃಹಭಂಗ'ದಲ್ಲಿ ಬಳಸುವ ಗ್ರಾಮೀಣ ಪರಿಸರದ ಭಾಷೆ ನೈಜತೆಯಿಂದ ಕೂಡಿದೆ ಸಂಭಾಷಣೆಯಂತೂ ಶಕ್ತಿಯುತವಾಗಿದೆ.

''ಭೈರಪ್ಪನವರ ಎಲ್ಲ ಕಾದಂಬರಿಗಳಲ್ಲಿಯೂ ಎದ್ದು ಕಾಣುವ ಗುಣವೆಂದರೆ ವೈಚಾರಿಕತೆ. ಈ ವೈಚಾರಿಕತೆ ಅವರ ಬಲವಾದ ಸಾಂಸ್ಕೃತಿಕ ಆಸ್ಥೆಗಳು ಮತ್ತು ಮೌಲ್ಯನಿಷ್ಠೆಯ ಮೂಲಕ ನಮಗೆ

ಕಾಣಿಸಿಕೊಳ್ಳುತ್ತದೆ. ಅವರ ಸೃಜನಶೀಲತೆಯ ಗುಣವು ಕೂಡ ಉನ್ನತ ಮಟ್ಟದ್ದು ಎನ್ನುವುದಕ್ಕೂ ಈ ಕಾದಂಬರಿಗಳಲ್ಲಿ ಸಾಕಷ್ಟು ಪುರಾವೆ ದೊರುಕುತ್ತವೆ. ಕುಶಲ ಕಲೆಗಾರಿಕೆ, ಸಜೀವ ಪಾತ್ರಗಳನ್ನು ಸೃಷ್ಟಿಸಬಲ್ಲ ಕಲ್ಪಕತೆ,ಇದಲ್ಲದೆ ಭಾಷೆಯನ್ನು ಅನೇಕ ಸ್ತರಗಳಲ್ಲಿ ದುಡಿಸಿಕೊಳ್ಳಬಲ್ಲ ಶಕ್ತಿ ಇವೆಲ್ಲವೂ ಭೈರಪ್ಪನವರಲ್ಲಿವೆ ಆದರೆ ವಿಷಾದದ ಸಂಗತಿ ಎಂದರೆ ಅವರ ವೈಚಾರಿಕತೆ ಮತ್ತು ಸೃಜನಶೀಲತೆ ಒಟ್ಟಾಗಿ ಕಾರ್ಯಗತವಾದುದೇ ಅಪರೂಪ ಅವರಲ್ಲಿಯ ಚಿಂತಕ ಮತ್ತು ಸಾಹಿತಿ ಇವರ ಪೈಪೋಟಿಯಲ್ಲಿ ಎಷ್ಟೋ ಸಲ ಸಾಹಿತಿ ಸೋತುಬಿಡುತ್ತಾನೆ''(ಕನ್ನಡ ಕಥನ ಸಾಹಿತ್ಯ ಕಾದಂಬರಿ : ಜಿ. ಎಸ್. ಅಮೂರ, ಪು.ಸಂ. ೪೧೨) ಎಂದು ಜಿ. ಎಸ್. ಅಮೂರ ಭೈರಪ್ಪನವರ ಕಾದಂಬರಿಗಳ ಒಟ್ಟು ಆಶಯಗಳನ್ನು ಗುರುತಿಸುತ್ತಾರೆ.

ಭೈರಪ್ಪನವರು ಸಂಭಾಷಣೆಯನ್ನು ಹೆಣೆಯುವ ರೀತಿ ಮತ್ತು ಸನ್ನಿವೇಶಗಳನ್ನು ಸೃಷ್ಟಿಸುವ ಕುಶಲತೆ ಓದುಗರನ್ನು ಮೆಚ್ಚಿಸುತ್ತದೆ. ಕಾದಂಬರಿಯ ವಿಷಯ ಗಾಢ ಪ್ರಭಾವವನ್ನು ಬೀರುವಲ್ಲಿ ಈ ಬರವಣಿಗೆ ಸಮರ್ಥವಾಗಿದೆ.'ತಬ್ಬಲಿಯು ನೀನಾದೆ ಮಗನೆ' ಕಾದಂಬರಿಯಲ್ಲಿ ವೆಂಕಟರಮಣ ಮತ್ತು ಹಿಲ್ಡಾಳ ಮಧ್ಯೆ ನಡೆಯುವ ಸಂಭಾಷಣೆಯನ್ನು ಇಲ್ಲಿ ನೋಡಬಹುದು.

'ತುಂಬ ಥ್ಯಾಂಕ್ಸ್ ನೀವು ಇಲ್ಲಿಗೆ ಬಂದಾಗಲೆಲ್ಲ ನಮಗೆ ತಿಂಡಿ ಕೊಡ್ತೀರಿ ನೀವು ನಮ್ಮಲ್ಲಿ ಒಂದು ದಿನವೂ ಒಂದು ಹನಿ ನೀರು ತಗೊಂಡಿಲ್ಲ ಈ ಜಾತಿ ಪದ್ಧತಿ ತುಂಬ ಕೆಟ್ಟದಲ್ಲವೆ?'

ನಾನು ನಿಮಗೆ ತಿಂಡಿ ಏನೂ ತಂದು ಕೊಟ್ಟಿಲ್ಲ, ಪೂಜೆಯ ಹೊತ್ತಿಗೆ ನೀವಲ್ಲದೆ ಭಕ್ತರು ಯಾರು ಬಂದರೂ ಕೊಡ್ತೀವಿ ಇವತ್ತು ಯಾರೂ ಇಲ್ಲ ನಿಮಗೆ ಹೆಚ್ಚು ಕೊಟ್ಟಿದೀನಿ ಇನ್ನು ಜಾತಿ ಪದ್ಧತಿ ಬೇರೆ ಮಾತು.

'ನೀವು ವಿದ್ಯಾವಂತರು, ದರ್ಶನಶಾಸ್ತ್ರ ಓದಿರೋರು ಈ ಜಾತಿ ಪದ್ಧತೀನ ನಂಬತೀರಾ ?'

'ಹೂಂ, ಮನುಷ್ಯನ ಸ್ವಭಾವದಲ್ಲೇ ಜಾತಿ ಇದೆ.'

'ಸ್ವಭಾವದ ಮಾತು ಹೋಗಲಿ, ಹುಟ್ಟಿನಿಂದ ಅದನ್ನು ನಿರ್ಧರಿಸೂದು ತಪ್ಪಲ್ಲವೆ ? ತುಂಬ ದಿನದಿಂದ ಬಂದ ಸಂಪ್ರಾದಾಯಕ್ಕೆ ಯಾರು ಏನು ಮಾಡಕ್ಕಾಗುಲ್ಲ'

'ನೋಡಿ ಇಲ್ಲೆ ನಮಗೂ ನಿಮಗೂ ವ್ಯತ್ಯಾಸವಿರೋದು ಅವಳು ಒಮ್ಮೆ ಗಟ್ಟಿಯಾಗಿ ನಕ್ಕು ಹೇಳಿದಳು ಯಾವುದು ನಮ್ಮ ವಿಚಾರಕ್ಕೆ ಸರಿ ಬರುಲ್ಲವೋ ಅದನ್ನ ನಾವು ನಿತ್ತು ಹಾಕಿ ನಡೀತೀವಿ.ನೀವು ಬಹುದಿನದಿಂದ ಬಂದದ್ದು ಅಂತ ಅಂಟಿಕೊಂಡೇ ಇರ್ತೀರಿ. ಅದು ಹೋಗಲಿ ಇವತ್ತು ಪದಾರ್ಥ ತಿನ್ನದಿದ್ದರೂ ನೀವು ಹಾಲು ಹಣ್ಣು ತಗೋತೀರಂತೆ'. (ತ.ನೀ.ಮ.ಪು-೧೫೫)

'ನಿಮ್ಮಂಥೋರು ಅಮೇರಿಕಕ್ಕೆ ಬಂದ್ರೆ ಹೇಗೆ ನಿಭಾಯಿಸ್ತೀರಿ ? ಮಡಿ, ಹುಡಿ, ಆಚಾರ, ಶಾಕಾಹಾರದ ಈ ನಿಷ್ಠೆ, ಇವುಗಳಲ್ಲಿ ತೊಂದರೆ ಆಗುಲ್ಲವೇ ?'

ಮೊದಲನೆಯದಾಗಿ ನಾನು ಅಲ್ಲಿಗೆ ಹೋಗುವ ಸಂದರ್ಭವೇ ಇಲ್ಲ.ಹೋದರೂ ಶುದ್ಧ ಶಾಖಾಹಾರಿಯಾಗಿ ಇದ್ದು ಬಂದವರೂ ಇದಾರೆ ಅಂತ ಕೇಳಿದೀನಿ. ಹಣ್ಣು ,ಹಾಲು ಅಲ್ಲಿ ಬೇಕಾದಷ್ಟು ಸಿಗುತ್ತಂತೆ. ಅಕ್ಕಿ ಹಿಟ್ಟು ತುಪ್ಪ ಎಲ್ಲಿಯೂ ಸಿಗುತ್ತೆ, ಒಂದಿಷ್ಟು ಅಡಿಗೆ ಮಾಡಿಕೊಂಡರೆ ಆಯಿತು.

'ಹಾಗಾದರೆ ನೀವು ಅಲ್ಲಿಯ ಸಾಮಾಜಿಕ ಜೀವನದಲ್ಲಿ ಬೆರೆತು ಅರಿತಂತೆ ಆಗುವುದಿಲ್ಲ'

ಬೆರೆಯದಿದ್ದರೆ ಬೇಡ, ಅದರಿಂದ ಆಗುವ ನಷ್ಟವೇನು ?

ನಷ್ಟವಲ್ಲವೆ ? ದೊರೆಯಬಹುದಾದ ಲಾಭ ತಪ್ಪಿ ಬರಿಗೈಯಲ್ಲಿ ಸ್ವದೇಶಕ್ಕೆ ಮರಳಿದರೆ ನಷ್ಟ ಅಂತ ಭಾವಿಸಬೇಡವೇ ?.

ಅದರಿಂದ ಏನು ಲಾಭವಾದರೂ ಏನು ? ಅವಳ ಮಾತು ಅರ್ಥವಾಗದೇ ಕೇಳಿದ.

ತಿಳಿಯಲಿಲ್ಲವೇನು ? ಕಣ್ಣುಗಳಲ್ಲಿ ನಗೆ ಸೂಸುತ್ತಾ ಅವಳು ಕೇಳಿದಳು. ನಿಮ್ಮ ಬುದ್ಧಿ ಚುರುಕು ಅಂತಾ ತಿಳಿದಿದ್ದೆ. ಪೂಜಾರಿ ಜಾತಿಗೆ ಎಲ್ಲ ವಿಷಯದಲ್ಲೂ ಚುರುಕು ಬುದ್ಧಿ ಇರುವುದಿಲ್ಲ. ನಮ್ಮ ಚರ್ಚಿನ ಪೂಜಾರಿಗಳಿಗೂ ಈ ಮಾತು ಅನ್ವಹಿಸುತ್ತೆ. ನಿಮ್ಮ ಸ್ನೇಹಿತರು ನಮ್ಮ ದೇಶಕ್ಕೆ ಬಂದು ಬರಿಗೈಲಿ ಹಿಂತಿರುಗಲಿಲ್ಲ. ಅಲ್ಲಿಯ ಸಾಮಾಜಿಕ ಜೀವನದಲ್ಲಿ ಬೆರೆತು ಒಂದು ದೊಡ್ಡ ವಸ್ತುವನ್ನೇ ಲಪಟಾಯಿಸಿಕೊಂಡು ಬಂದರು.

ಅವಳ ಮಾತಿನ ಅರ್ಥ ವೆಂಕಟರಮಣನಿಗೆ ಈಗ ಆಯಿತು. ಆ ವಿಷಯದಲ್ಲಿ ಮಾತನಾಡಲು ಅವನಿಗೆ ಸಂಕೋಚವೂ ಆಯಿತು. ಆದರೆ ಹೇಲ್ದಳೇ 'ಮಡಿವಂತರು ಇಂಥ ಲಾಭದಿಂದ ವಂಚಿತರಾಗ್ತಾರೆ' ಎಂದಳು (ತ.ನೀ.ಮ. ಪು-೧೬೦)

ಮೇಲಿನ ಸಂಭಾಷಣೆಯ ರೀತಿ ಓದುಗರ ಹೃದಯವನ್ನು ತಟ್ಟುತ್ತದೆ. ವಿಷಯದಲ್ಲಿ ಓದುಗ ತಲ್ಲೀನನಾಗುತ್ತಾ ಹೋಗುತ್ತಾನೆ. ಆತ್ಮೀಯ ಗೆಳೆಯನ ಮತ್ತು ಪ್ರೀತಿಯ ಹೆಂಡತಿಯ ಮಾತುಗಳಲ್ಲಿನ ವಿಶ್ವಾಸದಂತೆ ಈ ಶೈಲಿ ಓದುಗನನ್ನು ಸೆಳೆಯುತ್ತದೆ. ಭೈರಪ್ಪನವರು ಭಾಷೆಯನ್ನು ಬಳಸುವಾಗ ಪಾಂಡಿತ್ಯದ ಆಶ್ರಯಕ್ಕೆ ಸರಿಯುವುದಿಲ್ಲ ಬದಲಾಗಿ ನಿತ್ಯ ಜೀವನದಲ್ಲಿ ಬಳಸುವ ರೂಢಿ ಗತವಾದ ಸರಳ ಸರಸ ಪ್ರಿಯವಾದ ಭಾಷೆಯಲ್ಲಿಯೇ ತಮ್ಮ ಭಾವನೆಗಳನ್ನು, ವಿಚಾರಗಳನ್ನು ಅಭಿವ್ಯಕ್ತಗೊಳಿಸುತ್ತಾರೆ. ಅವರು ಪಾತ್ರಗಳಿಗೆ ಜೀವ ತುಂಬುವ ರೀತಿ ಅನನ್ಯವಾದುದು. ಕಥೆಗೆ ಪೂರಕವಾದ ಅಂಶಗಳನ್ನು ಸೇರಿಸುತ್ತಾ ಸಾಗುವ ರೀತಿ ವಿಶಿಷ್ಟವಾಗಿದೆ 'ದಾಟು' ಕಾದಂಬರಿಯಲ್ಲಿ ಬರುವ ತಾತ್ವಿಕ ವಿಚಾರಗಳು ಮತ್ತು 'ಮಾರಿಯ ಕಥೆ' 'ಸುಮಂತ ಮತ್ತು ರೈತರ ಪ್ರಸಂಗದ ಕಥೆ' ಕಥನಕ್ಕೆ ವಿಶೇಷ ಚಾಲನೆಯನ್ನು ಶಕ್ತಿಯನ್ನು ಒದಗಿಸುತ್ತದೆ.

ಭೈರಪ್ಪನವರ ಕಾದಂಬರಿಗಳಲ್ಲಿ 'ಸನ್ಯಾಸ ಮತ್ತು ಕಾಮ' ವಿಶೇಷ ಸ್ಥಾನವನ್ನು ಪಡೆದುಕೊಂಡಿವೆ. ವಿಷಯಕ್ಕೆ ಪೂರಕವಾದ ಗಾದೆ ಮಾತುಗಳ ಬಳಕೆ ಶೈಲಿಗೆ ಮತ್ತಷ್ಟು ಶಕ್ತಿಯನ್ನು ತುಂಬಿದೆ. ಒಬ್ಬೊಬ್ಬ ಬರಹಗಾರರ ರೀತಿಯು ತನ್ನದೇ ಆದ ವೈಶಿಷ್ಟ್ಯತೆಯಿಂದ ಕೂಡಿರುತ್ತದೆ. ಅಂತೆಯೇ ಭೈರಪ್ಪನವರ ಶೈಲಿಗೂ ಅದರದೇ ಸ್ವಂತಿಕೆ ಇದೆ. ವಿಶಿಷ್ಟತೆ ಇದೆ. ಒಂದು ವಿಶೇಷ ಚೆಲುವು ಇದೆ. ಯಾವ ವಿಷಯವನ್ನು ಯಾವಾಗ ? ಎಂಥ ಸಂದರ್ಭದಲ್ಲಿ ಪ್ರಸ್ತಾಪಿಸಬೇಕು ಎನ್ನುವ ಔಚಿತ್ಯತೆ ಇದೆ. ಓದುಗನನ್ನು ಕುತೂಹಲದ ಸೀಮೆಯಲ್ಲಿ ನಿಲ್ಲಿಸಿ ಕಾದಂಬರಿಯ ಮುಂದಿನ ಪುಟಗಳಿಗೆ ಅವರು ಕರೆದುಕೊಂಡು ಹೋಗುತ್ತಾರೆ. ಆದರೆ ಅವರ ಧೋರಣೆಯನ್ನು ಮೆಚ್ಚುವುದು ಕೆಲವು ಸಂದರ್ಭಗಳಲ್ಲಿ ಒಪ್ಪಿತ ಸಂಗತಿಯಾಗುವುದಿಲ್ಲ. 'ವಂಶವೃಕ್ಷ' ಕಾದಂಬರಿಯಲ್ಲಿ ಓದಿದ ನಂತರ ಪರಂಪರೆಗೆ ಜೋತು ಬೀಳುವ ಶ್ರೀನಿವಾಸ ಶ್ರೋತ್ರಿಯ ಪಾತ್ರವೇ ಮೆಚ್ಚುವಂತೆ ಬರವಣಿಗೆಯ ಧಾಟಿ ಸಾಗುತ್ತದೆ.

ಅವಶ್ಯವಿರದಿದ್ದರೂ ಹೆಚ್ಚು ಎನಿಸುವಷ್ಟು ವಿವರಣೆಯನ್ನು ಅನಗತ್ಯ ಎನ್ನುವ ಸಂಗತಿಗಳನ್ನು ಸೇರಿಸುತ್ತ ಹೋಗುವುದರಿಂದ ಅವರ ಕಾದಂಬರಿಗಳ ವ್ಯಾಪ್ತಿ ವಿಸ್ತಾರವಾಗುತ್ತ ಸಾಗುತ್ತದೆ. ಇದಕ್ಕೆ ಉತ್ತಮ

ಉದಾಹರಣೆ 'ತಂತು'. ಈ ಕಾದಂಬರಿಯಲ್ಲಿಯ ಮುಖ್ಯ ದೋಷವೇ ಇದಾಗಿದೆ. ವಾಸ್ತವ ಚಿತ್ರಣ ಇಲ್ಲಿ ದೊರೆಯುತ್ತಿದ್ದರೂ ವಿಸ್ತಾರವಾದ ವಿವರಣೆಯಿಂದ ಕಾದಂಬರಿಯ ಬಿಗುವಿಗೆ ವ್ಯತ್ಯತೆ ಉಂಟಾಗಿದೆ.

'ದೂರಸರಿದರೂ' 'ಧರ್ಮಶ್ರೀ' ಮುಂತಾದ ಕಾದಂಬರಿಗಳಲ್ಲಿ ವೈಚಾರಿಕ ಚರ್ಚೆಗಳು ಪ್ರಧಾನ ಸ್ಥಾನವನ್ನು ಪಡೆದುಕೊಂಡಿವೆ. ವಿಚಾರಗಳ ತಾಕಲಾಟ ಮನಸ್ಸನ್ನು ತಟ್ಟಿದಂತೆ ಭಾವನೆಗಳ ಆರ್ದ್ರತೆ ಓದುಗರನ್ನು ತಟ್ಟುವಲ್ಲಿ ವಿಫಲವಾಗುತ್ತದೆ. ಆದರೂ ಭೈರಪ್ಪನವರು ಮುಖ್ಯವಾದುದನ್ನು ಅದೂ ಭಾರತೀಯ ಸಂಸ್ಕೃತಿಯ ಅಂಶಗಳಿಗೆ ಸಂಬಂಧ ಪಟ್ಟ ವಿಷಯವನ್ನು ಗಂಭೀರವಾಗಿ ಅಭಿವ್ಯಕ್ತ ಮಾಡುವ ರೀತಿ ಬೇರೆ ಲೇಖಕರಿಗಿಂತ ವಿಶಿಷ್ಟ ಸ್ಥಾನದಲ್ಲಿ ಅವರನ್ನು ನಿಲ್ಲುವಂತೆ ಮಾಡುತ್ತದೆ.

# ಸಮಾರೋಪ

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕಾದಂಬರಿ ಪ್ರಕಾರಕ್ಕೆ ವಿಶೇಷ ಸ್ಥಾನವಿದೆ. ಕೇವಲ ಒಂದೂವರೆ ಶತಮಾನದ ಇತಿಹಾಸ ಅದರ ಬೆನ್ನಿಗಿದ್ದರೂ ಅದರ ಸಾಧನೆ ಮಹತ್ವದ್ದಾಗಿದೆ. ಸಮಕಾಲೀನ ಸಮಾಜದ ತುಡಿತಗಳನ್ನು ಪರಿವರ್ತನೆಯ ಪ್ರಕ್ರಿಯೆಯಲ್ಲಿ ಅದು ತೋರಿದ ಬಲವಾದ ಆಸ್ಥೆಯನ್ನು ಗಮನಿಸಿದಾಗ ಕಾದಂಬರಿ ಕನ್ನಡದಲ್ಲಿ ಮಹತ್ವದ ಹೆಜ್ಜೆ ಗುರುತುಗಳನ್ನು ಮೂಡಿಸಿದೆ. ಓದುಗರಿಗೆ ಅತ್ಯಂತ ಪ್ರಿಯವಾದ ಸಾಹಿತ್ಯದಲ್ಲಿ ಕಾದಂಬರಿ ಪ್ರಥಮ ಸ್ಥಾನದಲ್ಲಿದೆ. ಕನ್ನಡ ಕಾದಂಬರಿಕಾರರ ಕೃತಿಗಳು ಹಲವಾರು ಮುದ್ರಣಗಳನ್ನು ಕಂಡಿರುವುದು ಇದನ್ನು ಸಾಬೀತು ಪಡಿಸುತ್ತದೆ.

ಕಾವ್ಯದಲ್ಲಿ ಬೇಂದ್ರೆ - ಕುವೆಂಪು ತಮ್ಮ ಪ್ರಭಾವ ಬೀರಿದರೆ ಕಾದಂಬರಿಯಲ್ಲಿ ಶಿವರಾಮ ಕಾರಂತ - ಅನಕೃ ತಮ್ಮ ಪ್ರಭಾವ ಬೀರಿದರು. ಯಾದವನ ಕಲಾವತೀ ಪರಿಣಯ (1915) ದಿಂದ ಪ್ರಾರಂಭವಾದ ಈ ಕಾದಂಬರಿ ಸಾಹಿತ್ಯ ನಿರಂತರವಾಗಿ ಮುಂದುವರೆದುಕೊಂಡು ಬಂದಿದೆ. ಇಪ್ಪತ್ತನೇ ಶತಮಾನದ ನಾಲ್ಕನೇಯ ದಶಕದಲ್ಲಿ ಕನ್ನಡ ಕಾದಂಬರಿ ಕ್ಷೇತ್ರ ಹುಲುಸಾಗಿ ಬೆಳೆಯಿತು. 1922ರಲ್ಲಿ ಶಿವರಾಮ ಕಾರಂತರ ಚೋಮನದುಡಿ ಪ್ರಕಟವಾಯಿತು. ಒಂದರ ಮೇಲೊಂದರಂತೆ ಮಹತ್ವದ ಕೃತಿಗಳು ಪ್ರಕಟವಾದವು. ಅನಕೃಷ್ಣರಾಯರು ನೂರಕ್ಕಿಂತಲೂ ಹೆಚ್ಚು ಕಾದಂಬರಿಗಳನ್ನು ಬರೆದರು. ಪ್ರತಿಯೊಬ್ಬ ಕಾದಂಬರಿಕಾರನೂ ಸಂಸ್ಕೃತಿ ನಿಷ್ಠ ಲೇಖಕರಾಗಿ ಹೊರಹೊಮ್ಮಿದರು. ವೈಚಾರಿಕತೆಯನ್ನು ಕಾದಂಬರಿ ಪ್ರಕಾರದ ಮೂಲಕ ಪ್ರತಿಯೊಬ್ಬ ಲೇಖಕ ಅಭಿವ್ಯಕ್ತಪಡಿಸಿದ ಹಲವು ಹತ್ತು ಮುಖಗಳಲ್ಲಿ ಸಾಮಾಜಿಕ ಬದುಕು ಹೊಸತನಕ್ಕೆ ತೆರೆದು ಕೊಂಡಿತು. ಪಾರಂಪರಿಕ ಮೌಲ್ಯಗಳು ತೀವ್ರವಾದ ಸಂಘರ್ಷಕ್ಕೆ ಒಳಪಟ್ಟವು. ಅಕ್ಷರಸ್ತರ ಸಂಖ್ಯೆ ಹೆಚ್ಚಾಗುತ್ತ ಸಾಗಿದಂತೆ ಕಾದಂಬರಿ ಸಾಹಿತ್ಯ ವಿಶೇಷ ಮನ್ನಣೆಯನ್ನು ಪಡೆದುಕೊಂಡಿತು.

ಭಾರತೀಯ ಸಮಾಜದ ಮೇಲೆ ಹಲವು ಧರ್ಮಗಳ ಪ್ರಭಾವ ಉಂಟಾಗಿದೆ. ದೇಶೀ ರಾಜರ ಮತ್ತು ವಿದೇಶಿ ಆಡಳಿತಗಾರರ ಆಡಳಿತದಿಂದ ವಿಶಿಷ್ಟವಾದ ಆಯಾಮಗಳನ್ನು ಅದು ಪಡೆದುಕೊಂಡಿದೆ. ಜಗತ್ತಿನಲ್ಲಿಯೇ ಭಾರತೀಯ ಸಂಸ್ಕೃತಿಗೆ ವಿಶಿಷ್ಟತೆ ಇದೆ. ವರ್ಣಾಶ್ರಮ ಧರ್ಮದಿಂದ ಕೂಡಿದ ಸಾಮಾಜಿಕ ವ್ಯವಸ್ಥೆ ಹಲವು ರೀತಿಯ ವೈಚಾರಿಕ ಸಂಘರ್ಷಕ್ಕೆ ಎಡೆಮಾಡಿದ್ದು ಇಂದಿನ ವೈಶಿಷ್ಟ್ಯವಾಗಿದೆ. ಬದುಕಿನ ವಿವಿಧ ಮುಖಗಳ ಶೋಧವನ್ನು ಕನ್ನಡ ಕಾದಂಬರಿ ಸಾಹಿತ್ಯ ಅತ್ಯಂತ ಸಮರ್ಥವಾಗಿಯೇ ಮಾಡಿದೆ ಎಂದು ಹೇಳಬಹುದು. ಸ್ವಾತಂತ್ರ್ಯಾನಂತರ ಭಾರತದ ರಾಜಕೀಯ ಸಾಮಾಜಿಕ ವ್ಯವಸ್ಥೆಯಲ್ಲಿ 'ಜಾತಿ ವ್ಯವಸ್ಥೆ' ಮತ್ತಷ್ಟು ಪ್ರಬಲವಾಗುತ್ತ ಸಾಗಿತು.

ಕನ್ನಡ ಕಾದಂಬರಿ ಸಾಹಿತ್ಯದಲ್ಲಿ ಕೆಲವರು ಅ.ನ.ಕೃ. ಮಾದರಿಯನ್ನು ಅನುಕರಿಸಿದರು, ಇನ್ನು ಕೆಲವರು ಕಾರಂತರ ಮಾದರಿಯನ್ನು ಅನುಕರಿಸಿದರು. ಭೈರಪ್ಪನವರು ಕಾರಂತರ ಮಾದರಿಯನ್ನು ಅನುಕರಿಸಿದರು.ಆದರೆ ತಂತ್ರ ಮತ್ತು ಶೈಲಿಯಲ್ಲಿ ಭೈರಪ್ಪನವರು ಭಿನ್ನತೆ ತೋರಿದರು. ಇದುವರೆಗೆ ರಚಿತವಾದ ಅವರ ಕಾದಂಬರಿಗಳಲ್ಲಿ ವೈವಿಧ್ಯತೆ ಇದೆ. ಧರ್ಮ ಅವರ ಪ್ರಧಾನವಾದ ಆಸ್ಥೆ.ಭಾರತೀಯ ತತ್ವಶಾಸ್ತ್ರದ ವಿಚಾರಗಳೂ ಅವರ ಕಾದಂಬರಿಯಲ್ಲಿ ವಿಪುಲವಾದ ಅವಕಾಶವನ್ನು ಪಡೆದುಕೊಂಡಿವೆ. ವ್ಯಕ್ತಿ, ಕುಟುಂಬ,ಸಮಾಜ, ರಾಷ್ಟ್ರಕ್ಕೆ ಸಂಬಂಧಪಟ್ಟಂತೆ ಹಲವು ಮೌಲ್ಯಗಳ ಪ್ರತಿಪಾದನೆಯನ್ನು ತಮ್ಮ ಕಾದಂಬರಿಗಳಲ್ಲಿ ಮಾಡಿದ್ದಾರೆ. ಭಾರತದ ಸಂಸ್ಕೃತಿ, ಧರ್ಮ ಎಂದರೆ ಅದು ವೈದಿಕ ಸಂಸ್ಕೃತಿ ಎಂಬ ನಿಲುವು ಎಲ್ಲ ಕಾದಂಬರಿಗಳಲ್ಲೂ ಎದ್ದು ಕಾಣುತ್ತದೆ. ಕರ್ನಾಟಕದಲ್ಲಿ ಜನ್ಮ ತಳೆದು ಒಂದು ಅಪೂರ್ವವಾದ ಸಾಮಾಜಿಕ ಧಾರ್ಮಿಕ ಬದಲಾವಣೆಯನ್ನು ತಂದ ವಚನ ಸಾಹಿತ್ಯ ಅವರ ಮೇಲೆ ಯಾವುದೇ ಪರಿಣಾಮವನ್ನು ಬೀರಿಲ್ಲ. ಬದಲಾವಣೆಯ ಎಲ್ಲ ಮಜಲುಗಳನ್ನು ಅವರು ಪಾರಂಪರಿಕ ನೆಲೆಯಿಂದ ವಿಶ್ಲೇಷಿಸುವದರಿಂದ ಪಾರಂಪರಿಕ ಮೌಲ್ಯಗಳಿಗೆ ಹೆಚ್ಚು ಪ್ರಾಮುಖ್ಯತೆಯನ್ನು ಒದಗಿಸುವುದರಿಂದ ಆಧುನಿಕ ಮೌಲ್ಯಗಳು ನಿಸ್ತೇಜಗೊಳ್ಳುವಂತೆ ತೋರುತ್ತದೆ. ಅನ್ಯ ಧರ್ಮಗಳ ಪ್ರಭಾವವನ್ನು ಅವರು ಗುರುತಿಸುತ್ತಾರೆ. ಅದೂ ಕ್ರಿಶ್ಚಿಯನ್ ಮತ್ತು ಇಸ್ಲಾಂ ಧರ್ಮಗಳು ಭಾರತದ ಸಂಸ್ಕೃತಿಗೆ ಮಾರಣಾಂತಿಕ ಪೆಟ್ಟು ಕೊಡುತ್ತವೆ ಎನ್ನುವುದು ಅವರ ಅಭಿಪ್ರಾಯವಿದ್ದಂತೆ ತೋರುತ್ತದೆ. ಆದರೆ ಹಿಂದೂ ಧರ್ಮ ಸಂಸ್ಕೃತಿಯಲ್ಲಿ ಇರುವ ಲೋಪಗಳನ್ನು ತೋರಿ ಅವುಗಳಿಗೊಂದು ಅನುಭವ ಜನ್ಯವಾದ ಪರಿಹಾರವನ್ನು ತೋರುವಲ್ಲಿ ಅವರ ಕೃತಿಗಳು ವಿಫಲವಾಗುತ್ತವೆ. ಆದರೆ ಹಿಂದೂ ಧರ್ಮದ ಶ್ರೇಷ್ಠತೆ ಮೌಲ್ಯಗಳನ್ನು ಅವರು ಪೋಷಿಸುವ ರೀತಿ ಅನನ್ಯವಾಗಿದೆ. ಆಧುನಿಕ ವಿಚಾರಗಳ ಆರ್ಭಟದಲ್ಲಿ ಕೊಚ್ಚಿ ಹೋಗುತ್ತಿರುವ ಅಮೂಲ್ಯವಾದ ಪಾರಂಪರಿಕ ಮೌಲ್ಯಗಳು ಮತ್ತು ಈ ಭಂಡಾರದ ಕಡೆಗೆ ಅವರ ಕೃತಿಗಳು ಓದುಗನ ಗಮನ ಸೆಳೆಯುವಲ್ಲಿ ಯಶಸ್ವಿಯಾಗಿವೆ.

ಭಾರತ ಸಂಕೀರ್ಣ ಸಾಮಾಜಿಕ ವ್ಯವಸ್ಥೆಯನ್ನು ಒಳಗೊಂಡ ದೇಶವಾಗಿದೆ. ಹಿಂದೂ ಧಾರ್ಮಿಕ ವ್ಯವಸ್ಥೆ ವೈದಿಕ ಪರಂಪರೆಯ ಮೂಲಕ ಶೋಷಣೆಗೆ ತೊಡಗಿದಾಗ ಅವೈದಿಕ ಚಿಂತನೆಗಳು ಈ ನೆಲದಲ್ಲಿ ಹುಟ್ಟಿಕೊಂಡುವು. ಬೌದ್ಧ, ಜೈನ, ವೀರಶೈವ, ಸಿಖ್ ಮತಧರ್ಮಗಳು ಹುಟ್ಟಿಕೊಳ್ಳುವುದಕ್ಕೆ ವೈದಿಕ ಪರಂಪರೆಯ ಶೋಷಣೆಯೇ ಮೂಲ ಕಾರಣವಾಯಿತು.

ಭೈರಪ್ಪನವರು ಸಾಂಸ್ಕೃತಿಕ ಧೋರಣೆಗಳನ್ನು ಪ್ರತಿಬಿಂಬಿಸುವ ಸಂದರ್ಭದಲ್ಲಿ ತಮ್ಮ ಸ್ವಂತಿಕೆಯನ್ನು ಪ್ರಧಾನವಾಗಿ ಅಭಿವ್ಯಕ್ತಪಡಿಸುತ್ತಾರೆ. ಲೇಖಕರು ಗ್ರಹಿಸುವ ಸಂಸ್ಕೃತಿ ಪ್ರಧಾನವಾಗಿ ಪಾರಂಪರಿಕ ನೆಲೆಯಲ್ಲಿಯೇ ಅನಾವರಣಗೊಳ್ಳುತ್ತದೆ. ಸಂಸ್ಕೃತಿಯ ಸ್ಥಿರೀಕರಣದ ಆಶಯಗಳಿಗೆ ಹೆಚ್ಚು ಮಹತ್ವವನ್ನು ಅವರು ಕೊಡುವ ರೀತಿಯನ್ನು ನೋಡಿದರೆ, ಬದಲಾದ ಆಧುನಿಕ ಸಂದರ್ಭದ ಮೌಲ್ಯಗಳು ಮಹತ್ವವನ್ನು ಪಡೆದುಕೊಳ್ಳುವುದಿಲ್ಲ. ಹಿಂದೂ ಧರ್ಮದ ಸಾಂಸ್ಕೃತಿಕ ಮೌಲ್ಯಗಳನ್ನು ಬದುಕಿನಲ್ಲಿ ಶಾಶ್ವತೀಕರಿಸಲು ವಂಶವೃಕ್ಷ, ತಬ್ಬಲಿಯು ನೀನಾದೆ ಮಗನೆ, ಕೃತಿಗಳ ಮೂಲಕ ಪ್ರಯತ್ನಿಸುತ್ತಾರೆ. ಸಾಂಸ್ಕೃತಿಕ ಸ್ಥಿತ್ಯಂತರದ ಸಾಧ್ಯತೆಗಳನ್ನು ಈ ಕೃತಿಗಳು ನಿರಾಕರಿಸುತ್ತವೆ. ಆಧುನಿಕತೆ ಪರಂಪರೆಯ ಗಟ್ಟಿತನದ

ಎದುರು ಶಕ್ತಿಹೀನವಾದ ಚಿತ್ರಣ ಅವರ ಕೃತಿಗಳಲ್ಲಿ ರೂಪ ಪಡೆದುಕೊಳ್ಳುತ್ತದೆ. ಶ್ರೀನಿವಾಸ ಶ್ರೋತ್ರಿ ಪ್ರತಿನಿಧಿಸುತ್ತಿರುವ ಮೌಲ್ಯಗಳ ಎದುರು, ಕಾತ್ಯಾಯನಿ - ರಾಜಾರಾವ್ ಪ್ರತಿನಿಧಿಸುವ ಮೌಲ್ಯಗಳ ಸೋಲು ಲೇಖಕರ ಧೋರಣೆಯನ್ನು ತೋರುತ್ತದೆ.ಸಂಸ್ಕೃತಿಯು ಚಲಿಸುವ ಗತಿಯನ್ನು ದಾಟುವಿನ ಸತ್ಯಭಾಮ, ವಂಶವೃಕ್ಷದ ಕಾತ್ಯಾಯನಿ, ತಬ್ಬಲಿಯು ನೀನಾದೆ ಮಗನೆ ಕಾದಂಬರಿಯ ಕಾಳಿಂಗಗೌಡನ ಮೂಲಕ ಗ್ರಹಿಸುತ್ತಾರೆ. ಬದುಕಿನಲ್ಲಿ ಎದುರಾಗುವ ಆಕಸ್ಮಿಕಗಳನ್ನು ಸೂಕ್ಷ್ಮ ಸ್ತರಗಳಲ್ಲಿ ಅರ್ಥಮಾಡಿಕೊಳ್ಳಲು ಸೋಲುವ 'ನಿರಾಕರಣ'ದ ನರಹರಿ ಬದುಕಿನಲ್ಲಿ ಸುಭದ್ರವಾದ ಯಾವ ನೆಲೆಯನ್ನೂ ಕಂಡುಕೊಳ್ಳದೇ ಸೋಲುತ್ತಾನೆ. ಅಂಚುವಿನ ಅಮೃತಾ ಕೂಡಾ ಇಂಥ ಆಕಸ್ಮಿಕಗಳ:ನ್ನು ಎದುರಿಸುವ ಧೈರ್ಯ ತೋರುವುದಿಲ್ಲ ಅದಕ್ಕೆ ಬದುಕು ಅವಳಿಗೂ ದುರಂತದ ಆಶಯಗಳತ್ತ ಕೈಚಾಚಿ ಕರೆಯುವ ಸಂಗತಿಯಾಗುತ್ತದೆ.

'ಸಮಕಾಲೀನತೆಯೆಂಬುದು ನಿನ್ನೆ ಮತ್ತು ನಾಳೆಯನ್ನು ಒಳಗೊಂಡುದಾಗಿದೆ' ಎಂದು ಟಿ. ಎಸ್. ಎಲಿಯಟ್ ಅಭಿಪ್ರಾಯ ಪಡುತ್ತಾರೆ. ಆದರೆ ಭಾರತೀಯರು ನಿನ್ನೆಯನ್ನು ವ್ಯರ್ಥವೆಂದು ತಿಳಿಯುತ್ತಿರುವುದು ಅಥವಾ ಇಡೀ ಜ್ಞಾನವನ್ನೆಲ್ಲ ನಿರಾಕರಿಸುತ್ತಿರುವುದು ಹಲವು ಗೊಂದಲಗಳಿಗೆ ಕಾರಣವಾಗಿದೆ.

ಜಾತಿ, ಮತ, ಧರ್ಮ, ಪಂಥ ಇವುಗಳೆಲ್ಲ ನಮ್ಮ ಪರಂಪರೆಯಲ್ಲಿ ಮೌಲ್ಯವಾಗಿ ಸಂಸ್ಥಾಪಿತ ಗೊಂಡಿವೆ. ಇದು ಪ್ರಪಂಚದ ಎಲ್ಲ ಕಡೆಯೂ ಕಂಡು ಬರುವ ಸಾಮಾನ್ಯ ಅಂಶ. ಇವುಗಳನ್ನು ಒಮ್ಮೆಗೆ ನಿರಾಕರಿಸುವುದು ಎಂದರೆ ಬದುಕನ್ನೇ ನಿರಾಕರಿಸಿದಂತೆ ಆಗುತ್ತದೆ. ಅವುಗಳ ಮೂಲ ಮಹತ್ವವನ್ನು ಅರಿತು ಅದರ ಸುತ್ತ ಆವರಿಸಿರುವ ಪುರೋಹಿತಶಾಹಿ ಅಥವಾ ಜೀವನ ವಿರೋಧಿ ಅಂಶಗಳನ್ನು ಭೇದಿಸಬೇಕಾಗಿದೆ. ಭಾರತೀಯ ವಿದ್ಯಾಭ್ಯಾಸ ನಮ್ಮ ಪಾರಂಪರಿಕ ಬದುಕನ್ನು ಅರ್ಥೈಸುವುದಾಗಿಲ್ಲ ಬದಲಾಗಿ ಪಾಶ್ಚಾತ್ಯರ ವಿಚಾರಗಳನ್ನು ಹೇಳುವುದಾಗಿದೆ. ಇದರ ಪರಿಣಾಮ ಪರಂಪರೆಯೆಂಬುದು ಅಲಕ್ಷ್ಯ ಮಾಡುವಂಥದು ಎಂಬ ಧೋರಣೆಯನ್ನು ಇಂದಿನ ಪೀಳಿಗೆಯಲ್ಲಿ ಕಾಣುತ್ತೇವೆ. ಆದರೆ ಪರಂಪರೆಯಲ್ಲಿಯೂ ವರ್ತಮಾನ ಮತ್ತು ಭವಿಷತ್ತಿನ ಬದುಕಿಗೆ ಅಗತ್ಯವಾದ ಅಮೂಲ್ಯವಾದ ಮೌಲ್ಯಗಳಿವೆ ಎಂಬುದು ಭೈರಪ್ಪನವರ ವಿಚಾರವಾಗಿದೆ.

ಪ್ರಸ್ತುತ ಅಧ್ಯಯನ ಭೈರಪ್ಪನವರ ಕಾದಂಬರಿಗಳನ್ನು ಪ್ರಧಾನ ಆಕರವಾಗಿ ಸ್ವೀಕರಿಸಿದೆ. ಅವರ ಕಾದಂಬರಿಯಲ್ಲಿ ಮೂಡಿ ಬಂದ ಸಂಸ್ಕೃತಿಯ ಅಂಶಗಳನ್ನು ಕಂಡುಕೊಳ್ಳುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಭೈರಪ್ಪನವರ ಕಾದಂಬರಿಗಳನ್ನು ಕುರಿತು 'ಸಹಸ್ಪಂದನ' 'ಪರ್ವ ಒಂದು ಸಮೀಕ್ಷೆ' ಭೈರಪ್ಪಾಭಿನಂದನಾ ಮತ್ತು 'ಭೈರಪ್ಪನವರ ಕಾದಂಬರಿಗಳ ಸ್ವರೂಪ' 'ಎಸ್. ಎಲ್. ಭೈರಪ್ಪನವರ ಕೃತಿಗಳ ವಿಮರ್ಶೆ' ಎಂಬ ಕೃತಿಗಳು ಪ್ರಕಟವಾಗಿವೆ. ಈ ಕೃತಿಗಳಲ್ಲಿ ಭೈರಪ್ಪನವರ ಕಾದಂಬರಿಗಳನ್ನು ಕುರಿತು ವಿಶಿಷ್ಟವಾದ ಅಧ್ಯಯನವನ್ನು ಚರ್ಚೆಯನ್ನು ಮಾಡಿರುವುದನ್ನು ಕಾಣಬಹುದಾಗಿದೆ.

ಸಂಸ್ಕೃತಿಗೆ ಭಾಷೆ ಪ್ರಮುಖವಾದ ಅಂಶವಾಗಿದೆ. ಈ ಭಾಷೆಯ ಮೂಲಕ ಲೇಖಕ, ಕೃತಿರಚನೆಗೆ ತೊಡಗಿದಾಗ ಅಂಥ ಕೃತಿಯಲ್ಲಿ ಸಂಸ್ಕೃತಿಯ ಅಂಶಗಳು ದಾಖಲಾಗುವುದು ಸರ್ವೇ ಸಾಮಾನ್ಯವಾದ ಅಂಶವಾಗಿದೆ. ಭೈರಪ್ಪನವರ ಕೃತಿಗಳಲ್ಲಿ ಧರ್ಮ, ವಂಶಪ್ರಜ್ಞೆ, ಪುನರ್ಜನ್ಮ, ಸನ್ಯಾಸ,ವೇದಕಾಲಗಳ

ವಿಷಯಗಳು, ಜಾತಿ, ಮತಾಂತರ, ಅನ್ಯ ಸಂಸ್ಕೃತಿಯ ಆಗಮನದಿಂದ ಉಂಟಾಗುವ ಸಂಘರ್ಷ, ತನ್ಮೂಲಕ ಸಮಾಜದಲ್ಲಿ ಉಂಟಾಗುವ ತಲ್ಲಣಗಳು ಈ ಅಂಶಗಳನ್ನು ಅವರು ಪ್ರಧಾನವಾಗಿ ಚರ್ಚಿಸುತ್ತಾರೆ.

ಭಾರತಕ್ಕೆ ಬ್ರಿಟಿಷರ ಆಗಮನದೊಂದಿಗೆ ಕ್ರಿಶ್ಚಿಯನ್ ಧರ್ಮದ ಆಗಮನವೂ ಆಯಿತು. ಇದಕ್ಕಿಂತ ಮೊದಲು ಇಸ್ಲಾಂ ಧರ್ಮದ ಆಗಮನವಾಗಿತ್ತು. ಈ ಎರಡು ಧರ್ಮಗಳು ಭಾರತೀಯ ಸಂಸ್ಕೃತಿಯೊಂದಿಗೆ ಮುಖಾಮುಖಿಯಾದಾಗ ಸಮಾಜದಲ್ಲಿ ಹಲವು ರೀತಿಯ ಬದಲಾವಣೆಗೆ ಕಾರಣವಾಯಿತು. ಮುಖ್ಯವಾಗಿ 'ಮತಾಂತರ'ದ ಸಮಸ್ಯೆಯನ್ನು ಭಾರತೀಯ ಸಮಾಜ ಎದುರಿಸುವಂತಾಯಿತು. ಮತಾಂತರದಿಂದ ಉಂಟಾಗುವ ಪರಿಣಾಮಗಳನ್ನು 'ಧರ್ಮಶ್ರೀ' ಯಂಥ ಕೃತಿಯಲ್ಲಿ ಪ್ರಧಾನವಾಗಿ ಎತ್ತಿಕೊಂಡು ಲೇಖಕರು ಚರ್ಚಿಸಿದ್ದು ಈ ಕಾರಣಕ್ಕಾಗಿಯೇ ಎಂಬುದು ತಿಳಿದು ಬರುತ್ತದೆ. ಮತಾಂತರ ಪ್ರಕ್ರಿಯೆಲ್ಲಿ ಕ್ರೈಸ್ತ ಪಾದ್ರಿಗಳು ಹಿಂದೂ ಧರ್ಮವನ್ನು ದೂಷಿಸುತ್ತ ಕ್ರೈಸ್ತ ಮತದ ಬಗೆಗೆ ಅತಿರಂಜಿತವಾದ ಉಪನ್ಯಾಸಗಳನ್ನು ನೀಡುತ್ತ ಅನೇಕ ಜನರನ್ನು ಮತಾಂತರಗೊಳಿಸುತ್ತಿದ್ದುದು ಕಂಡು ಬರುತ್ತದೆ. ಮತಾಂತರವೇ ಪರಿಹಾರವಲ್ಲ ಎಂಬ ನಿಲುವು ಭೈರಪ್ಪನವರ ಕೃತಿಗಳಲ್ಲಿ ಮೂಡಿ ಬಂದಿದೆ. ಹಿಂದೂ ಧರ್ಮದ ಅನೇಕ ವಿಷಯಗಳು ಈ ಕೃತಿಯಲ್ಲಿ ಪ್ರಸ್ತಾಪವಾಗುತ್ತವೆ. ಭಾರತದ ಜೀವನವೆಂದರೆ ಹಿಂದೂ ಧರ್ಮ ಮತ್ತು ಸಂಸ್ಕೃತಿ ಇದನ್ನು ಹೊರತು ಪಡಿಸಿದರೆ ಅಲ್ಲಿ ಉಳಿದುಕೊಳ್ಳುವುದು ಏನೂ ಇಲ್ಲ ಎಂಬ ನೆಲೆಯಲ್ಲಿಯೇ ವಿಚಾರಗಳು ಮಂಡನೆಯಾಗಿವೆ.

'ದಾಟು' ಭಾರತೀಯ ಸಾಮಾಜಿಕ ವ್ಯವಸ್ಥೆಯ ಮುಖ್ಯ ಅಂಶಗಳನ್ನು ಒಳಗೊಂಡಿದೆ. ಜಾತಿವ್ಯವಸ್ಥೆಯ ಸಮಗ್ರ ಚಿತ್ರಣವನ್ನು ಈ ಕೃತಿ ನೀಡುತ್ತದೆ. ಬದಲಾದ ಭಾರತೀಯ ಸಾಮಾಜಿಕ ವ್ಯವಸ್ಥೆಯನ್ನು ಈ ಕೃತಿ ಚಿತ್ರಿಸಿದರೂ 'ಜಾತಿ' ವ್ಯವಸ್ಥೆಯ ಬಲವಾದ ಹಿಡಿತವನ್ನು ಚಿತ್ರಿಸುತ್ತದೆ. ಲೇಖಕರ ಧೋರಣೆಯಲ್ಲಿಯೇ ಪಾತ್ರಗಳು ಜೀವ ತಾಳುವುದರಿಂದ ನಿಜವಾದ ಸಾಮಾಜಿಕ ಬದಲಾವಣೆಯನ್ನು ಚಿತ್ರಿಸುವಲ್ಲಿ ಈ ಕೃತಿ ಸೋಲುತ್ತದೆ.

ಭೈರಪ್ಪನವರ ಕೃತಿಗಳಲ್ಲಿ 'ಪ್ರತಿಗಾಮಿ' ಅಂಶಗಳು ಪ್ರಧಾನವಾಗಿವೆ ಎಂಬ ಆಪಾದನೆಯಿದೆ. ದಾಟು 'ಬ್ರಾಹ್ಮಣ್ಯದ ಮತ್ತು ಬ್ರಾಹ್ಮಣ ಸಮಾಜದ ಪ್ರತಿಷ್ಠಾಪನೆಯ ಮಹಾಸಾಹಸ' (ಸಂಕ್ರಮಣ-೨೫) ಎಂದು ಮ.ನ. ಜರವರು ಅಭಿಪ್ರಾಯ ಪಡುತ್ತಾರೆ.

ಭೈರಪ್ಪನವರ ಹಲವು ಕೃತಿಗಳಲ್ಲಿ ಬ್ರಾಹ್ಮಣ್ಯದ ಮತ್ತು ಬ್ರಾಹ್ಮಣ ಸಮಾಜದ ಚಿತ್ರಣವೇ ಪ್ರಧಾನವಾಗಿದೆ. ಕೆಲವು ಕಾದಂಬರಿಗಳಲ್ಲಿ ಬೇರೆ ಮತದ ಪಾತ್ರಗಳೇ ಚಿತ್ರಿತವಾಗಿಲ್ಲ. ಭಾರತೀಯ ಸಮಾಜದ ಎಲ್ಲ ಆಗುಹೋಗುಗಳನ್ನು ಅವರು ವೈದಿಕ ನೆಲೆಯಿಂದಲೇ ಚರ್ಚಿಸುತ್ತಾರೆ. ಆಧುನಿಕ ಯುಗದ ಪರಿವರ್ತನೆಯನ್ನು ಅವರು ಮುಕ್ತ ಮನಸ್ಸಿನಿಂದ ಸ್ವೀಕರಿಸಿದಂತೆ ತೋರುವುದಿಲ್ಲ. ಪ್ರತಿಯೊಂದು ಬದಲಾವಣೆಯನ್ನು ಪರಂಪರೆಗೆ ಅಪ್ಪಳಿಸಿದ ಆಘಾತವೆಂದೂ ಕೆಲವು ಸಂದರ್ಭದಲ್ಲಿ ಅವರು ಭಾವಿಸುತ್ತಾರೆ. ವರ್ಣಾಶ್ರಮದಿಂದ ಕೂಡಿದ ಸಾಮಾಜಿಕ ವ್ಯವಸ್ಥೆಯಲ್ಲಿ ಆಧುನಿಕ ವಿಚಾರಧಾರೆಗಳ ಫಲವಾಗಿ ಬದಲಾವಣೆಯ ಗಾಳಿ ಬೀಸತೊಡಗಿರುವುದನ್ನು ಅವರ ಕೃತಿಗಳು ಗ್ರಹಿಸುತ್ತವೆ. ಆದರೆ ಆ ಬದಲಾವಣೆಯ ಪರವಾಗಿ ಈ ಕೃತಿಗಳು ನಿಲ್ಲುವುದಿಲ್ಲ.

ಭಾರತ ಹಲವು ಧರ್ಮಗಳಿಗೆ ಜನ್ಮಸ್ಥಳವಾಗಿದೆ ಮತ್ತು ಹಲವು ಧರ್ಮಗಳಿಗೆ ಆಶ್ರಯವನ್ನು

ಒದಗಿಸಿದೆ. ಹಿಂದೂ, ಬೌದ್ಧ, ಜೈನ, ಶಿಖ್, ವೀರಶೈವ ಮುಂತಾದ ಧರ್ಮಗಳ ಸಾಂಸ್ಕೃತಿಕ ಅಂಶಗಳಲ್ಲಿ ಅಂಥ ಭಿನ್ನತೆ ಕಂಡು ಬರುವುದಿಲ್ಲ. ಆದರೆ ಹೊರಗಿನಿಂದ ಆಗಮನವಾದ 'ಇಸ್ಲಾಂ' ಮತ್ತು ಕ್ರಿಶ್ಚಿಯನ್ ಧರ್ಮಗಳ ಸಾಂಸ್ಕೃತಿಕ ಅಂಶಗಳಲ್ಲಿ ವಿಶೇಷವಾದ ಭಿನ್ನತೆ ಇದೆ. ಈ ಅಂಶಗಳನ್ನು ಭೈರಪ್ಪನವರ ಕೃತಿಗಳು ಗುರುತಿಸುತ್ತವೆ.

ಬದುಕಿನ ರೀತಿ - ನೀತಿಗಳನ್ನು ಕುರಿತು ಈ ಕೃತಿಗಳು ಗಂಭೀರವಾದ ವಿಚಾರಗಳನ್ನು ಪ್ರಸ್ತಾಪಿಸುತ್ತವೆ ಮತ್ತು ಪರಂಪರೆಯ ಬಗ್ಗೆ ಗಂಭೀರವಾಗಿ ಯೋಚಿಸುವಂತೆ ಪ್ರೇರೆಪಿಸುತ್ತವೆ. ಭಾರತೀಯ ಸಮಾಜದಲ್ಲಿ ಉಂಟಾದ ಸಾಂಸ್ಕೃತಿಕ ಸಂಘರ್ಷದ ಸ್ವರೂಪವನ್ನು ಈ ಕೃತಿಗಳು ಚಿತ್ರಿಸುತ್ತವೆ.

ಭೈರಪ್ಪನವರು ಬಡತನವನ್ನು ಬಾಲ್ಯದಲ್ಲಿಯೇ ಅನುಭವಿಸಿದಂಥವರು ಮೃತ್ಯುವಿನ ಕರಾಳ ರೂಪವನ್ನು ತಮ್ಮ ಕುಟುಂಬದಲ್ಲಿ ಕಂಡಂಥವರು. ಹೋರಾಟದಿಂದ ಬದುಕಿನಲ್ಲಿ ನೆಲೆಯನ್ನು ಕಂಡುಕೊಂಡಂತವರು. ಹೀಗಾಗಿ ಅವರ ಕೃತಿಗಳಲ್ಲಿ ಬಡತನ, ಮೃತ್ಯು ಅವುಗಳ ಸ್ವರೂಪ ಚಿತ್ರಣಗೊಂಡಿವೆ.

ಭಾರತದಲ್ಲಿ ವೈದಿಕ ಪರಂಪರೆಯ ಶೋಷಣೆಗೆ ತುತ್ತಾಗಿದ್ದ ಜನ ವರ್ಗದ ಚಿತ್ರಣವನ್ನು ಈ ಕೃತಿಗಳು ನೀಡುವುದಿಲ್ಲ. ವರ್ಣಾಶ್ರಮ ಧರ್ಮದಿಂದ ಭಾರತೀಯ ಸಮಾಜ ಸಂಕೀರ್ಣ ವ್ಯವಸ್ಥೆಯತ್ತ ಜಾರಿತು. ಮಾನವೀಯ ಅಂಶಗಳು ಮರೆಯಾಗಿ ಶೋಷಣೆಯೇ ಪ್ರಧಾನ ನೆಲೆಯಲ್ಲಿ ವಿಜೃಂಭಿಸಿತು. ಹಿಂದೂ ಧರ್ಮದ ಈ ಲೋಪ ದೋಷಗಳು ಈ ಕೃತಿಗಳಲ್ಲಿ ಪ್ರಮುಖ ಸ್ಥಾನವನ್ನು ಪಡೆದುಕೊಂಡಿಲ್ಲ.

ಪ್ರಪಂಚದಲ್ಲಿ ನಡೆದ ವೈಜ್ಞಾನಿಕ ಸಂಶೋಧನೆಗಳು ಭಾರತದ ಸಾಂಸ್ಕೃತಿಕ ಜಗತ್ತಿನ ಮೇಲೆ ಗಾಢವಾದ ಪ್ರಭಾವವನ್ನು ಬೀರಿದವು. ಅನೇಕ ಕಟ್ಟುಪಾಡುಗಳನ್ನು ಆಧುನಿಕ ವಿಚಾರಗಳು ನಾಶಮಾಡಿದವು. ಜಾತಿಯಂಥ ಅವೈಜ್ಞಾನಿಕವಾದ ವ್ಯವಸ್ಥೆ ಕುಸಿಯಲು ಪ್ರಾರಂಭಿಸಿತು.

ಭೈರಪ್ಪನವರದು ಪ್ರಧಾನವಾಗಿ ವೈದಿಕ ದನಿಯೆಂದೇ ನಾವು ಗುರುತಿಸಬಹುದು. ಅವರ ಕೃತಿಗಳು ಭಾರತದ ಧಾರ್ಮಿಕ ವೈಶಿಷ್ಟ್ಯತೆ, ಸಾಮಾಜಿಕ ವೈಶಿಷ್ಟ್ಯತೆಯನ್ನು ಕಾಪಾಡಿಕೊಳ್ಳುವುದರ ಅಗತ್ಯತೆಯನ್ನು ಪ್ರಬಲವಾಗಿ ಪ್ರತಿಪಾದಿಸುತ್ತವೆ. ಮನುಷ್ಯನ ಮನಸ್ಸಿನಲ್ಲಿ ಉಂಟಾದ ಲಾಭಮುಖೀ ವಿಚಾರವನ್ನು ಅವರು ತಂತು ಕೃತಿಯಲ್ಲಿ ಸಮರ್ಥವಾಗಿ ಚಿತ್ರಿಸಿದ್ದಾರೆ. ಮೌಲ್ಯಗಳ ವಿನಾಶ ಕೇವಲ ಆರ್ಥಿಕ ಲಾಭವೇ ಪ್ರಧಾನವಾದಾಗ ಹೇಗೆ ಉಂಟಾಗುತ್ತದೆ ಎಂಬ ವಿಚಾರಗಳನ್ನು ಅವರು ಪ್ರಮುಖ ನೆಲೆಯಲ್ಲಿ ಪ್ರಸ್ತಾಪಿಸುತ್ತಾರೆ.

## ಅಧ್ಯಯನಕ್ಕೆ ಆರಿಸಿಕೊಂಡ ಎಸ್. ಎಲ್. ಭೈರಪ್ಪನವರ ಕೃತಿಗಳು
(ಲಭ್ಯಕೃತಿಯ ಮುದ್ರಣಗಳನ್ನು ನಮೂದಿಸಲಾಗಿದೆ.)

| | | |
|---|---|---|
| ೧. | ಅಂಚು | ೧೯೯೫ |
| ೨. | ಅನ್ವೇಷಣೆ | ೧೯೯೬ |
| ೩. | ಕಥೆ ಮತ್ತು ಕಥಾ ವಸ್ತು | ೧೯೯೯ |
| ೪. | ಗೃಹಭಂಗ | ೧೯೯೯ |
| ೫. | ಗ್ರಹಣ | ೧೯೯೯ |
| ೬. | ಜಲಪಾತ | ೧೯೯೯ |
| ೭. | ತಂತು | ೧೯೯೭ |
| ೮. | ತಬ್ಬಲಿಯು ನೀನಾದೆ ಮಗನೆ | ೧೯೯೮ |
| ೯. | ಧರ್ಮಶ್ರೀ | ೧೯೯೯ |
| ೧೦. | ದೂರಸರಿದರು | ೧೯೯೧ |
| ೧೧. | ನಾನೇಕೆ ಬರೆಯುತ್ತೇನೆ | ೧೯೮೯ |
| ೧೨. | ನಾಯಿ ನೆರಳು | ೧೯೯೯ |
| ೧೩ | ನಿರಾಕರಣ | ೧೯೯೯ |
| ೧೪. | ಪರ್ವ | ೧೯೯೫ |
| ೧೫. | ನೆಲೆ | ೧೯೯೯ |
| ೧೬. | ಭಿತ್ತಿ | ೧೯೯೭ |
| ೧೭. | ಮಂದ್ರ | ೨೦೦೩ |
| ೧೮. | ಮತದಾನ | ೧೯೯೮ |
| ೧೯. | ವಂಶವೃಕ್ಷ | ೧೯೮೮ |
| ೨೦. | ಸತ್ಯ ಮತ್ತು ಸೌಂದರ್ಯ | ೧೯೮೩ |
| ೨೧. | ಸಾಕ್ಷಿ | ೧೯೯೫ |
| ೨೨. | ಸಾರ್ಥ | ೨೦೦೦ |
| ೨೩. | ಸಾಹಿತ್ಯ ಮತ್ತು ಪ್ರತೀಕ | ೧೯೭೮. |

# ಪರಾಮರ್ಶನ ಗ್ರಂಥಗಳು


| | | |
|---|---|---|
| ೧. ಅನಂತಮೂರ್ತಿ. ಯು. ಆರ್ | ಪ್ರಜ್ಞೆ ಮತ್ತು ಪರಿಸರ | |
| | ಅಕ್ಷರ ಪ್ರಕಾಶನ, ಹೆಗ್ಗೋಡು | ೧೯೯೨ |
| ೨. ಅನಂತಮೂರ್ತಿ. ಯು. ಆರ್ | ಭಾರತಿಪುರ | |
| | ಅಕ್ಷರ ಪ್ರಕಾಶನ, ಹೆಗ್ಗೋಡು | ೧೯೯೨ |
| ೩. ಅಯ್ಯಂಗಾರ್ ಮಾಸ್ತಿ ವೆಂಕಟೇಶ | ಕರ್ನಾಟಕ ಜನತೆಯ ಸಂಸ್ಕೃತಿ | |
| | ಮತ್ತು ಜಾನಪದ ಸಾಹಿತ್ಯ | |
| | ಜೀವನ ಕಾರ್ಯಾಲಯ, ಬೆಂಗಳೂರು | ೧೯೩೧ |
| ೪. ಅಮೂರ ಜಿ. ಎಸ್. | ಸಮಕಾಲೀನ ಕಥೆ, ಕಾದಂಬರಿ, | |
| | ಹೊಸ ಪ್ರಯೋಗಗಳು | |
| | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು | ೧೮೯೯ |
| ೫. ಅಮೂರ. ಜಿ. ಎಸ್. | ಕನ್ನಡ ಕಥನ ಸಾಹಿತ್ಯ ಕಾದಂಬರಿ | |
| | ಶ್ರೀಹರಿ ಪ್ರಕಾಶನ, ಧಾರವಾಡ | ೧೯೯೪ |
| ೬. ಅಶೋಕ. ಟಿ. ಪಿ. | ಸಾಹಿತ್ಯ ಸಂದರ್ಭ | |
| | ಅಕ್ಷರ ಪ್ರಕಾಶನ, ಸಾಗರ | ೧೯೯೧ |
| ೭. ಇಂದಿರಾ. ಆರ್. | ಭಾರತೀಯ ಸಮಾಜ | |
| | ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು | ೧೯೯೫ |
| ೮. ಕೀರ್ತಿನಾಥ ಕುರ್ತಕೋಟಿ | ಯುಗಧರ್ಮ ಮತ್ತು ಸಾಹಿತ್ಯ ದರ್ಶನ | |
| | ವಿಶ್ವ ಕನ್ನಡ ಸಮ್ಮೇಳನ, ಬೆಂಗಳೂರು | ೧೯೮೩ |
| ೯. ಕೀರ್ತಿ ನಾಥ ಕುರ್ತಕೋಟಿ | ವಿಮರ್ಶೆಯ ವಿನಯ (ಕಾದಂಬರಿ ಪ್ರಕಾರ) | |
| | ಮನೋಹರ ಗ್ರಂಥ ಮಾಲಾ, ಧಾರವಾಡ | ೧೯೮೨ |
| ೧೦. ಕುಮಾರ ಕಕ್ಕಯ್ಯ ಪೋಳ | ಚಾತುರ್ವರ್ಣ ಧರ್ಮ ದರ್ಶನ | |
| | ಲೋಹಿಯಾ ಪ್ರಕಾಶನ, ಬಳ್ಳಾರಿ | ೨೦೦೧ |

೧೧. ಕುವೆಂಪು (ಸಂ) — ಯುಗ ಯಾತ್ರಿ, ಭಾರತೀಯ ಸಂಸ್ಕೃತಿ ಭಾಗ-೧, ಭಾಗ - ೨ — ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ — ೧೯೨೦

೧೨. ಕೊಂಡಜ್ಜಿ ಕೆ. ವೆಂಕಟೇಶ — ಭೈರಪ್ಪಾಭಿನಂದನಾ — ಕೊಂಡಜ್ಜಿ ಪ್ರಕಾಶನ, ಬೆಂಗಳೂರು — ೧೯೭೧

೧೩. ಕೋದಂಡರಾಮ ಎನ್.ಕೆ. — ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ — ಗಾಯತ್ರಿ ಸ್ಮಾರಕ ಗ್ರಂಥ ಮಾಲೆ,ಮೈಸೂರು — ೧೯೯೬

೧೪. ಕೃಷ್ಣಮೂರ್ತಿ. ಎಂ.ಜಿ. — ಆಧುನಿಕ ಭಾರತೀಯ ಸಾಹಿತ್ಯ ಮತ್ತು ಇತರೆ ಲೇಖನಗಳು — ಅಕ್ಷರ ಪ್ರಕಾಶನ, ಸಾಗರ — ೧೯೭೦

೧೫. ಕೃಷ್ಣಮೂರ್ತಿ. ಎಂ.ಜಿ. — ಕೃತಿ ಸಂಸ್ಕೃತಿ — ಋಜುವಾತು ಪ್ರಕಾಶನ ,ಮೈಸೂರು — ೧೯೯೪

೧೬. ಕೃಷ್ಣರಾಯ ಕಪಟರಾಳ — ಕರ್ನಾಟಕ ಸಂಸ್ಕೃತಿಯ ಸಂಶೋಧನೆ — ಉಷಾ ಸಾಹಿತ್ಯ ಪರಿಷತ್ತು, ಮೈಸೂರು — ೧೯೭೦

೧೭. ಕೃಷ್ಣರಾಯ ಅ.ನ. — ಭಾರತೀಯ ಸಂಸ್ಕೃತಿ ದರ್ಶನ — ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಮೈಸೂರು ಸರ್ಕಾರ, ಬೆಂಗಳೂರು — ೧೯೬೨

೧೮. ಗಿರಡ್ಡಿ ಗೋವಿಂದರಾಜ್ — ಸಮಗ್ರ ವಿಮರ್ಶೆ — ಪೂರ್ಣಿಮ ಪ್ರಿಂಟರ್ಸ್, ಬೆಂಗಳೂರು — ೨೦೦೧

೧೯. ಗಿರಡ್ಡಿ ಗೋವಿಂದರಾಜ್ — ಕನ್ನಡ ಕಥಾ ಸಂಕಲನ ಪ್ರಸ್ತಾವನೆ — ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು — ೧೯೮೩

೨೦. ಗುಂಡಪ್ಪ ಡಿ.ವಿ. — ಸಂಸ್ಕೃತಿ — ಕಾವ್ಯಾಲಯ ಪ್ರಕಾಶನ, ಮೈಸೂರು — ೧೯೫೨

೨೧. ಗುರುಪಾದ ಮರಿಗುದ್ದಿ — ಕುವೆಂಪು ಕಾದಂಬರಿಗಳ ಸಾಂಸ್ಕೃತಿಕ ಅಧ್ಯಯನ — ಸಹ್ಯಾದ್ರಿ ಪ್ರಕಾಶನ ,ಮೈಸೂರು — ೧೯೮೯

೨೨. ಗೋಕಾಕ್. ವಿ.ಕೃ. — ಸಾಹಿತ್ಯ ವಿಮರ್ಶೆಯ ಕೆಲವು ತತ್ವಗಳು — ಐ.ಬಿ. ಎಚ್. ಪ್ರಕಾಶನ ,ಬೆಂಗಳೂರು — ೧೯೮೮

೨೩. ಚಿದಾನಂದ ಮೂರ್ತಿ ಎಂ. — **ವೀರಶೈವ ಧರ್ಮ : ಭಾರತೀಯ ಸಂಸ್ಕೃತಿ**
ಮಿಂಚು ಪ್ರಕಾಶನ, ಬೆಂಗಳೂರು ೨೦೦೦

೨೪. ಚಿದಾನಂದ ಮೂರ್ತಿ ಎಂ. — **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**
ಸಪ್ನಾ ಬುಕ್‌ಹೌಸ್, ಬೆಂಗಳೂರು ೨೦೦೨

೨೫. ಚಿದಾನಂದ ಮೂರ್ತಿ ಎಂ. — **ಕರ್ನಾಟಕ ಸಂಸ್ಕೃತಿ**
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೯೧

೨೬. ಚಿದಾನಂದ ಮೂರ್ತಿ ಎಂ — **ಕರ್ನಾಟಕ ನೇಪಾಳ ಸಾಂಸ್ಕೃತಿಕ ಸಂಬಂಧ**
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೩

೨೭. ಜೋಶಿ ಶಂ.ಬಾ. — **ಕರ್ನಾಟಕ ಸಂಸ್ಕೃತಿಯ ಪೂರ್ವಪೀಠಿಕೆ ಭಾಗ ೨**
ಸಮಾಜ ಪುಸ್ತಕಾಲಯ, ಧಾರವಾಡ ೧೯೬೬

೨೮. ತಪಸ್ವೀ ಕುಮಾರ. ನಂ. — **ಸಂಸ್ಕೃತಿಯ ಅಧ್ಯಯನ**
ಚಾಮುಂಡಿ ಎಂಟರ್‌ಪ್ರೈಸಸ್, ಮೈಸೂರು ೧೯೮೦

೨೯. ತಾರಾನಾಥ ಎನ್. ಎಸ್ — **ಶತಮಾನದ ಸಂಶೋಧನೆ**
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ೨೦೦೧

೩೦. ತಿಮ್ಮಪ್ಪಯ್ಯ ಮುಳಿಯ — **ಸಂಸ್ಕೃತಿ**
ಕರ್ನಾಟಕ ಸಂಘ, ಪುತ್ತೂರು ೧೯೮೧

೩೧. ದೇವುಡು — **ಕರ್ನಾಟಕ ಸಂಸ್ಕೃತಿ**
ಬೆಂಗಳೂರು ಪ್ರೆಸ್,
ಮೈಸೂರು ರಸ್ತೆ, ಬೆಂಗಳೂರು ೧೯೩೫

೩೨. ನರಹಳ್ಳಿ ಬಾಲಸುಬ್ರಹ್ಮಣ್ಯ — **ಸಾಹಿತ್ಯ ಸಂಸ್ಕೃತಿ**
ಅಂಕಿತ ಪುಸ್ತಕ, ಬೆಂಗಳೂರು ೧೯೯೮

೩೩. ನಾಗರಾಜ್.ಡಿ. ಆರ್. — **ಅಮೃತ ಮತ್ತು ಗರುಡ**
ಪುಸ್ತಕ ಚಂದನ, ಬೆಂಗಳೂರು ೧೯೮೩

೩೪. ನಾಗರಾಜ್. ಡಿ. ಆರ್. — **ಸಾಹಿತ್ಯದ ಕಥನ**
ಅಕ್ಷರ ಪ್ರಕಾಶನ, ಹೆಗ್ಗೋಡು ೧೯೯೬

೩೫. ನಾಯಕ್ ಜಿ. ಎಚ್. (ಸಂ) — **ಶತಮಾನದ ಕನ್ನಡ ಸಾಹಿತ್ಯ**
ಬೃಂದಾವನ ಪ್ರಿಂಟರ್ಸ್, ಬೆಂಗಳೂರು ೨೦೦೦

೩೬. ನಾರ್ಲ. ವಿ. ಆರ್. — **ಭಾರತದ ಬೌದ್ಧಿಕ ದಾರಿದ್ರ್ಯ**
ಗಂಗಾಧರ ಮೂರ್ತಿ (ಅನು)

ಕರ್ನಾಟಕ ದಲಿತ ಸಂಘರ್ಷ ಸಮಿತಿ,
ಕೋಲಾರ ೧೯೮೯

೩೭. ನಾರಾಯಣ.ಪಿ.ವಿ. ವಚನ ಸಾಹಿತ್ಯ
ಒಂದು ಸಾಂಸ್ಕೃತಿಕ ಅಧ್ಯಯನ
ತೋಂಟದಾರ್ಯ ಮಠ, ಗದಗ ೧೯೮೨

೩೮. ಪಂಚಮುಖಿ ಆರ್. ಎಸ್. ಭಾರತ ದೇಶದ ಸಂಸ್ಕೃತಿಯ ಪರಿಚಯ
ಶ್ರೀಪರಿಮಳ ಸಂಶೋಧನ ಮತ್ತು ಪ್ರಕಾಶನ
ಮಂದಿರ, ನಂಜನಗೂಡು, ಮೈಸೂರು ೧೯೭೯

೩೯. ಬರಗೂರು ರಾಮಚಂದ್ರಪ್ಪ ಸಂಸ್ಕೃತಿ ಶ್ರಮ ಮತ್ತು ಸೃಜನಶೀಲತೆ
ಅಂಕಿತ ಪುಸ್ತಕ, ಬೆಂಗಳೂರು ೨೦೦೧

೪೦. ಭಗವತ್ ಶರಣ ಉಪಾಧ್ಯಯ ಭಾರತೀಯ ಸಮಾಜದ ವಿಶ್ಲೇಷಣೆ
ಅನು : ಪ್ರಧಾನ ಗುರುದತ್ತ
ನವಕರ್ನಾಟಕ ಪ್ರಕಾಶನ ೧೯೮೬

೪೧. ಭಗವಾನ್ ಕೆ. ಎಸ್. ಹಿಂದೂ ಸಾಮ್ರಾಜ್ಯಶಾಹಿಯ ಇತಿಹಾಸ
ಮಹಿಮಾ ಪ್ರಕಾಶನ, ಮೈಸೂರು ೧೯೯೦

೪೧. ಭಗವಾನ್. ಕೆ. ಎಸ್. ಶಂಕರಾಚಾರ್ಯ ಮತ್ತು ಪ್ರತಿಗಾಮಿತನ
ಮಹಿಮಾ ಪ್ರಕಾಶನ, ಮೈಸೂರು ೧೯೯೧

೪೨. ಮಲ್ಲೇಪುರ. ಜಿ. ವೆಂಕಟೇಶ (ಸಂ) ಶಂ. ಬಾ. ಕೃತಿ ಸಂಪುಟ, ಕರ್ನಾಟಕ ಸಂಸ್ಕೃತಿ ೧೯೯೯

೪೩. ಮಲ್ಲೇಪುರ. ಜಿ. ವೆಂಕಟೇಶ (ಸಂ) ಶಂ. ಬಾ. ಕೃತಿ ಸಂಪುಟ,
ಭಾರತೀಯ ಸಂಸ್ಕೃತಿ ೧೯೯೯

೪೪. ಮಾಧವ ಕುಲಕರ್ಣಿ ಮತ್ತು ಮ. ಗೋವಿಂದರಾವ್ ಸಹಸ್ಪಂದನ
ಸಾಹಿತ್ಯ ಭಂಡಾರ, ಬಳೇ ಪೇಟೆ, ಬೆಂಗಳೂರು ೧೯೭೮

೪೫. ಮಾಲಗಿತ್ತಿ ಅರವಿಂದ ಕನ್ನಡಿಗರ ಭಾರತೀಯ ಸಂಸ್ಕೃತಿ ಹುಡುಕಾಟ
ಕೆಲವು ವಿಚಾರಗಳು ಸಂಶೋಧನೆ
(ಸಂ) ಲಕ್ಷ್ಮಣ ತೆಲಗಾವಿ, ಬೆಂಗಳೂರು ೧೯೯೧

೪೬. ರಹಮತ್ ತರಿಕೇರೆ (ಸಂ) ಕನ್ನಡ ಸಾಹಿತ್ಯ ಮೀಮಾಂಸೆ
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೧

೪೭. ರಹಮತ್ ತರಿಕೆರೆ (ಸಂ) ಧರ್ಮ ವಿಶ್ವಕೋಶ
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೦

೪೮. ರಹಮತ್ ತರಿಕೆರೆ ಪ್ರತಿ ಸಂಸ್ಕೃತಿ

ಕನ್ನಡ ಸಂಘ ಕ್ರೈಸ್ಟ್ ಕಾಲೇಜ್, ಬೆಂಗಳೂರು ೧೯೯೩

೪೯. ರಹಮತ್ ತರಿಕೆರೆ — ಮರದೊಳಗಣ ಕಿಚ್ಚು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೬

೫೦. ರಾಮಮೂರ್ತಿ ಸೋಲಂಕಿ — ಭಾರತೀಯ ಸಂಸ್ಕೃತಿಯ ಅಂತರಂಗ ಬಹಿರಂಗ ಸಂಕ್ರಮಣ, ಸಂ: ಚಂದ್ರಶೇಖರ ಪಾಟೀಲ, ಮಾರ್ಚ ಏಪ್ರಿಲ್ ಸಂಚಿಕೆ :೧೧೦-೧೧೧ ೧೯೮೧

೫೧. ರಾಜಶೇಖರಯ್ಯ. ಎ. ಎಂ. — ಡಾ॥ಬಾಬಾ ಸಾಹೇಬ ಅಂಬೇಡ್ಕರ್ ಬರಹಗಳು, ಭಾಷಣಗಳು ಸಂಪುಟ-೪ ಹಿಂದೂಧರ್ಮದ ಒಗಟುಗಳು ೧೯೯೫

೫೨. ರೂತ್ ಬೆನಡಿಕ್ಟ್, ಅನು : ಶಂಕರನಾರಾಯಣ — ಸಂಸ್ಕೃತಿಯ ರೂಪಿಕೆಗಳು, ಕನ್ನಡ ಅಧ್ಯಯನ ವಿಭಾಗ, ಬೆಂಗಳೂರು ಕೃಷಿ ವಿ.ವಿ. ೧೯೭೮

೫೩. ಲೀಲಾವತಿ ತೋರಣಗಟ್ಟಿ — ಭೈರಪ್ಪನವರ ಕಾದಂಬರಿಗಳ ಸ್ವರೂಪ, ವಿದ್ಯಾನಿಧಿ ಪ್ರಕಾಶನ, ಗದಗ ೧೯೯೨

೫೪. ವಿಜಯಾ (ಸಂ) — ಪರ್ವ : ಒಂದು ಸಮೀಕ್ಷೆ, ಇಳಾ ಪ್ರಕಾಶನ, ಬೆಂಗಳೂರು ೧೯೮೨

೫೫. ವಿವಿಧ ಲೇಖಕರು — ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಮತ್ತು ಅಧೀನ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ೧೯೯೧

೫೬. ವಿಠಲರಾವ್ ಗಾಯಕ್ವಾಡ್ — ಡಾ॥ ಎಸ್. ಎಲ್. ಭೈರಪ್ಪ ಕ.ವಿ.ವಿ.ಹಂಪಿ ೧೯೯೫

೫೭. ವಿಠಲರಾವ್ ಗಾಯಕ್ವಾಡ್ — ರೂಪ -ಸ್ವರೂಪ, ಶಾಲಿನಿ ಪ್ರಕಾಶನ, ಹೊಸಪೇಟೆ, ಬಳ್ಳಾರಿ (ಜಿ) ೧೯೯೭

೫೮. ಶಂಕರ ನಾರಾಯಣರಾವ್ ಎನ್.ಪಿ. — ಸ್ವಾತಂತ್ರ್ಯಗಂಗೆಯ ಸಾವಿರ ತೊರೆಗಳು, ನವ ಕರ್ನಾಟಕ ಪ್ರಕಾಶನ, ಬೆಂಗಳೂರು ೧೯೯೧

೫೯. ಶಾಂತಿನಾಥ ದಿಬ್ಬದ — ಪಂಪಭಾರತ ಒಂದು ಸಾಂಸ್ಕೃತಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೯೪

೬೦. ಶಾಂತಿನಾಥ ದೇಸಾಯಿ — ಕನ್ನಡ ಕಾದಂಬರಿ ನಡೆದು ಬಂದ ರೀತಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೮೯

೬೧. ಶೇಷಗಿರಿರಾವ್ ಎಲ್. ಎಸ್. — ಹೊಸಗನ್ನಡ ಸಾಹಿತ್ಯ
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೮೮

೬೨. ಶೇಷಗಿರಿರಾವ್ ಎಲ್. ಎಸ್ — (ಸಂ) ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ
ಉದಯಬಾನು ಕಲಾ ಸಂಘ, ಬೆಂಗಳೂರು ೧೯೯೩

೬೩. ಶಿವರುದ್ರಪ್ಪ ಜಿ. ಎಸ್. — ಸಾಹಿತ್ಯ ಮತ್ತು ಸಾಮಾಜಿಕ ಮೌಲ್ಯ
(ಪು.ಸಂ) ಬೆಂಗಳೂರು ವಿ.ವಿ, ಬೆಂಗಳೂರು ೧೯೭೧

೬೪. ಶಿವರುದ್ರಪ್ಪ ಜಿ. ಎಸ್. — ಸಮಗ್ರ ಗದ್ಯ ಸಂ - ೧
ಶಾರದಾ ಪ್ರಕಾಶನ, ಬೆಂಗಳೂರು ೧೯೯೪

೬೫. ಶಿವರುದ್ರಪ್ಪ ಜಿ. ಎಸ್. — ಸಮಗ್ರ ಗದ್ಯ ಸಂ-೨
ಸ್ನೇಹ ಪ್ರಕಾಶನ, ಬೆಂಗಳೂರು ೧೯೯೫

೬೬. ಶಿವರುದ್ರಪ್ಪ ಜಿ. ಎಸ್. — ಸಮಗ್ರ ಗದ್ಯ ಸಂ - ೩
ಕಾಮಧೇನು ಪ್ರಕಾಶನ, ಬೆಂಗಳೂರು ೧೯೯೬

೬೭. ಶಿವರುದ್ರಸ್ವಾಮಿ ಎಸ್. ಎಲ್. — ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ
ಪೌರಸ್ತ್ಯ ಪ್ರಕಾಶನ, ಮೈಸೂರು ೧೯೯೯

೬೮. ಶಿವರಾಮೇಗೌಡ ನಾಗವಾರ — ಗೋರೂರ ಕೃತಿಗಳು ಒಂದು ಸಾಂಸ್ಕೃತಿಕ ಅಧ್ಯಯನ
ಸಹ್ಯಾದ್ರಿ ಪ್ರಕಾಶನ, ಮೈಸೂರು ೧೯೭೮

೬೯. ಶ್ರೀನಿವಾಸ ಹಾವನೂರು — ಹೊಸಗನ್ನಡ ಅರುಣೋದಯ
ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ೨೦೦೦

೭೦. ಶ್ರೀಕಂಠಶಾಸ್ತ್ರಿ. ಎಸ್. — ಭಾರತೀಯ ಸಂಸ್ಕೃತಿ
ಮೈಸೂರು ವಿಶ್ವವಿದ್ಯಾಲಯ, ಮೈಸೂರು ೧೯೬೯

೭೧. ಸದಾನಂದ ಕನವಳ್ಳಿ, ವೀರಣ್ಣ ರಾಜೂರು — ಮಹಾಮಾರ್ಗ (ಸಂ)
ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯಮಠ, ಗದಗ ೧೯೯೮

೭೨. ಸ್ವಾಮಿ ಪ್ರಭವಾನಂದಶ್ರೀ — ಭಾರತೀಯ ಆಧ್ಯಾತ್ಮಿಕ ಪರಂಪರೆ
ರಾಮಕೃಷ್ಣಾಶ್ರಮ, ಮೈಸೂರು ೧೯೯೯

೭೩. ಸ್ವಾಮಿ ರಂಗನಾಥಾನಂದ — ಪರಿವರ್ತನಾಶೀಲ ಸಮಾಜಕ್ಕೆ ಶಾಶ್ವತ

ಅನು : ತ.ಸು.ಶಾಮರಾಯ, ಇತರರು — ಮೌಲ್ಯಗಳು, ಪ್ರಸಾರಾಂಗ, ಬೆಂಗಳೂರು ೧೯೮೨

೭೪. ಸುಮತೀಂದ್ರ ನಾಡಿಗ್ (ಸಂ) — ಎಸ್. ಎಲ್. ಭೈರಪ್ಪನವರ ಕೃತಿಗಳ ವಿಮರ್ಶೆ, ಸುಂದರ ಪ್ರಕಾಶನ, ಬೆಂಗಳೂರು ೨೦೦೨

೭೫. ಹರಿಕೃಷ್ಣ ಭರಣ್ಯ — ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ ಪ್ರಭಾಸ ಬಿಡುಗಡೆ, ಮುಧುರೈ ೧೯೯೦

೭೬. ಹರಿದಾಸ ಭಟ್ಟಾಚಾರ್ಯ — ಯುಗಯಾತ್ರಿ ಭಾರತೀಯ ಸಂಸ್ಕೃತಿ ಸಂಪುಟ - ೪ ೧೯೮೮

೭೭. ಹಿರಿಯಣ್ಣ. ಎ. — ಭಾರತೀಯ ತತ್ವಶಾಸ್ತ್ರದ ರೂಪು ರೇಖೆಗಳು ಅನು: ಪ್ರಭುಶಂಕರ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು. ವಿ.ವಿ. ೧೯೭೩

## ಇಂಗ್ಲಿಷ್ ಕೃತಿಗಳು

78.Clark T.W — **The Novel in India** British Foundation Books, New Delhi 1993

79.Forster.E.M — **Aspects of the Novel** (London Edward Arnold and co) 1953

80.Ghure.G.S — **Caste and Race in India** Popular Prakashana,Bombay 1969

81.Srinivas M.N — (Edited and Introduction) **'Caste' Its Twentieth Century Avatar.** Viking penguin India,New Delhi 1996

82.Singh.S.D — **Novels on the Indian mutiny** New Delhi, Arnold Heinemann 1973

83. Tejeswini Niranjana & Vivekdhareshwar — **Interrogating modernity culture and colonialism in India** publishing.Segull,Calcutta 1993

